# ಕರ್ನಾಟಕ - ಆಂಧ್ರ ಗಡಿನಾಡ ಕನ್ನಡ - ತೆಲುಗು ಕೋಲಾಟ ಪದಗಳ ತುಲನಾತ್ಮಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.)
ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕರು

ಬೋರಯ್ಯ. ಎಸ್.ಓ.

ಮಾರ್ಗದರ್ಶಕರು

ಡಾ. ಮಾಧವ ಪೆರಾಜೆ

ಪ್ರಾಧ್ಯಾಪಕರು





ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೬

# ಕರ್ನಾಟಕ -ಆಂಧ್ರ ಗಡಿನಾಡ ಕನ್ನಡ -ತೆಲುಗು ಕೋಲಾಟ ಪದಗಳ ತುಲನಾತ್ಮಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.)
ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)



ಸಂಶೋಧಕರು

**ಬೋರಯ್ಯ. ಎಸ್.ಓ.**

ಮಾರ್ಗದರ್ಶಕರು

**ಡಾ. ಮಾಧವ ಪೆರಾಜೆ**

ಪ್ರಾಧ್ಯಾಪಕರು



ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩೨೭೬

೨೦೧೭

# ಮಾರ್ಗದರ್ಶಕರ ದೃಢೀಕರಣ ಪತ್ರ

**ಬೋರಯ್ಯ. ಎಸ್.ಓ.** ಅವರು ನನ್ನ ಮಾರ್ಗದರ್ಶನದಲ್ಲಿ **ಕರ್ನಾಟಕ - ಆಂಧ್ರ ಗಡಿನಾಡ ಕನ್ನಡ - ತೆಲುಗು ಕೋಲಾಟ ಪದಗಳ ತುಲನಾತ್ಮಕ ಅಧ್ಯಯನ** ಎಂಬ ಸಂಶೋಧನಾ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿರುತ್ತಾರೆ.

ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲ ಎಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

(ಡಾ. ಮಾಧವ ಪೆರಾಜೆ)
ಪ್ರಾಧ್ಯಾಪಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ದಿನಾಂಕ : 4-03-17
ಸ್ಥಳ : ವಿದ್ಯಾರಣ್ಯ

## ಸಂಶೋಧಕರ ಘೋಷಣಾ ಪತ್ರ

**ಡಾ. ಮಾಧವ ಪೆರಾಜೆ,** ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ **ಕರ್ನಾಟಕ - ಆಂಧ್ರ ಗಡಿನಾಡ ಕನ್ನಡ - ತೆಲುಗು ಕೋಲಾಟ ಪದಗಳ ತುಲನಾತ್ಮಕ ಅಧ್ಯಯನ** ಎಂಬ ಈ ಮಹಾಪ್ರಬಂಧವನ್ನು ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ ಸಾದರಪಡಿಸುತ್ತಿದ್ದೇನೆ.

ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಣಗೊಳಿಸಿಲ್ಲ. ಇದು ನನ್ನ ಸ್ವತಂತ್ರವಾದ ಸಂಶೋಧನಾ ಅಧ್ಯಯನವಾಗಿದೆ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸಂಶೋಧಕರು

Boraiah.S.O

**(ಬೋರಯ್ಯ. ಎಸ್.ಓ.)**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩ ೨೭೬

ದಿನಾಂಕ : 04-03-17

# ಪರಿವಿಡಿ

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ ಮತ್ತು ಸ್ವರೂಪ

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ ಮತ್ತು ಸ್ವರೂಪ

**ಕ**ರ್ನಾಟಕ - ಆಂಧ್ರ ಗಡಿನಾಡು ಹಲವು ತೆರನಾದ ವಿಶಿಷ್ಟತೆಗಳನ್ನು ತನ್ನೊಡಲಲ್ಲಿರಿಸಿಕೊಂಡಿದೆ. ಆಂಧ್ರ - ಕರ್ನಾಟಕ ಗಡಿ ಪ್ರಾಂತಗಳಾದ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ, ಮೊಳಕಾಲ್ಮೂರು, ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ, ಹೊಸಪೇಟೆ ಮತ್ತು ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಆದವಾನಿ, ಆಲೂರು, ಹೊಳಗುಂದ, ಬಲ್ಲೂರು, ಮರ್ಲಾಮಡಿಕಿ, ಸಿದ್ಧಾಪುರಂ ಹಾಗೆಯೇ ಅನಂತಪುರ ಜಿಲ್ಲೆಯ ರಾಯದುರ್ಗ, ಕಲ್ಯಾಣದುರ್ಗ, ನಾಗಲಾಪುರಂ, ಓಬಳಾಪುರಂ ಮುಂತಾದ ಗಡಿ ಪ್ರಾಂತಗಳಲ್ಲಿ ಏಕಕಾಲದಲ್ಲಿ ಕನ್ನಡ - ತೆಲುಗು ಭಾಷೆಗಳಾಡುವ ಜನರಿದ್ದಾರೆ. ಇವರು ಭಾಷೆಯ ಬಳಕೆಯಲ್ಲಿ ಮಾತ್ರವಲ್ಲದೆ ಸಾಂಸ್ಕೃತಿಕ ಆಚರಣೆಗಳಲ್ಲಿಯೂ ಈ ವೈಶಿಷ್ಟ್ಯತೆಗಳನ್ನು ತೋರ್ಪಡಿಸುತ್ತಾರೆ. ಗಡಿನಾಡು ಪ್ರಾಂತಗಳ ಜನರು ಪರಸ್ಪರ ಸಂವಹನ ನಡೆಸುವಾಗಲೂ ಕೂಡ ಎರಡು ಭಾಷೆಗಳು ಏಕಕಾಲದಲ್ಲಿ ಪ್ರಯೋಗವಾಗುತ್ತಿರುತ್ತವೆ. ಇದು ಕೇವಲ ಎರಡು ಪ್ರತ್ಯೇಕ ಭಾಷೆಗಳನ್ನು ಏಕಕಾಲದಲ್ಲಿ ಪ್ರತ್ಯೇಕವಾಗಿ ಬಳಸುವುದು ಮಾತ್ರವಾಗಿರದೇ ಒಂದೇ ಭಾಷೆಯಲ್ಲಿ ಇನ್ನೊಂದು ಭಾಷೆಯನ್ನು ಸಹಜವಾಗಿ ಬಳಸುವುದಾಗಿರುತ್ತದೆ.

ಉದಾಹರಣೆಗೆ:- ಬಾಳೆಪಂಡು, ಆನೆ ನನ್ನು ಚೂಸಾಕ ಓಡಿ ವಸ್ತುಂದಿ, ತಿರುಗಿ ಎಪ್ಪುಡು ವಸ್ತಾವು, ಮತ್ತೆ ಏಮಿ ಕೆಲಸಮು. ಕನ್ನಡದಲ್ಲಿ ದ್ವಿಭಾಷಿಕತೆಗೆ ಸಂಬಂಧಿಸಿದ ಅಧ್ಯಯನಗಳು ತಕ್ಕಮಟ್ಟಿಗೆ ನಡೆದಿವೆ. ಗಡಿನಾಡುಗಳಲ್ಲಿ ಮುಖ್ಯವಾಗಿ ಕೋಲಾಟ, ಬುರ್ರಕಥಾ, ದೊಂಬರಾಟ, ಕೋಲೆಬಸವನ ಆಟ, ಸೋಬಾನೆ ಪದ, ಬೇಡರ ಕುಣಿತ, ದಾಸರಾಟ ಮತ್ತು ಭಜನೆ ಪದಗಳಂಥ ಇತ್ಯಾದಿ ಕಲೆಗಳು ಕಂಡುಬರುತ್ತವೆ. ಈ ಪ್ರದರ್ಶನ ಕಲೆಗಳಲ್ಲಿಯೂ ಗಡಿ ಪ್ರಾಂತಗಳ ಜನರು ತಮ್ಮದೇ ಆದ ವಿಶಿಷ್ಟತೆಯನ್ನು ಉಳಿಸಿಕೊಂಡಿದ್ದಾರೆ. ಇವುಗಳು ಏಕಕಾಲದಲ್ಲಿ ಕಲಾವಿದರಿಂದ ಎರಡೂ ಭಾಷೆಗಳಲ್ಲಿ ಪ್ರದರ್ಶನಗೊಳ್ಳುತ್ತವೆ. ಈ ಅಧ್ಯಯನದಲ್ಲಿ ಕೋಲಾಟದ ಪದಗಳನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ಕೋಲುಗಳನ್ನು ನುಡಿಸುತ್ತಾ, ಪದಗಳನ್ನು ಹಾಡುತ್ತಾ, ಹಾಡಿನ ಲಯಕ್ಕೆ ಅನುಗುಣವಾಗಿ ಹೆಜ್ಜೆ ಹಾಕುವ ಆಟವೇ ಕೋಲಾಟ. ಕೋಲಾಟವು ತನ್ನೊಳಗೆ ಸಾಹಿತ್ಯ, ಹಾಡುಗಾರಿಕೆ,

ಕುಣಿತ ಮತ್ತು ಅಭಿನಯ ಹಲವು ಮಾಧ್ಯಮಗಳನ್ನು ಸೇರಿಸಿಕೊಂಡಿದೆ. ಕೋಲಾಟವನ್ನಾಡಲು ಕನಿಷ್ಠವೆಂದರೂ ಎಂಟು ಜನ ಇರಬೇಕು. ಈ ಆಟದಲ್ಲಿ ಎಂಟರಿಂದ ಇಪ್ಪತ್ನಾಲ್ಕು ಜನರು ಇರಬೇಕಾಗುತ್ತದೆ. ಕೋಲು ಎಂದರೆ ಬೇವು, ಕಾರೆ, ಬಾರೆ ಇಲ್ಲವೆ ಜಾಲಿ ಮರದ ಕೊಂಬೆಗಳಿಂದ ಕತ್ತರಿಸಿದ ಸಣ್ಣ ತುಂಡುಗಳು. ಇವು ಸುಮಾರು ಒಂದುವರೆ ಅಡಿ ಉದ್ದವಿದ್ದು ಇವುಗಳನ್ನು ಬಣ್ಣಗಳಿಂದ ಅಲಂಕಾರ ಮಾಡಲಾಗುತ್ತದೆ. ಹಬ್ಬ, ಹುಣ್ಣಿಮೆ, ಮದುವೆ, ಸುಗ್ಗಿಯ ಸಂದರ್ಭ ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಕೋಲಾಟವನ್ನು ಪ್ರದರ್ಶನ ಮಾಡಲಾಗುತ್ತದೆ. ಕೋಲಾಟ ಪ್ರದರ್ಶನದ ಆರಂಭಕ್ಕೂ ಮೊದಲು ಕೋಲುಗುರು ಅಥವಾ ಕೋಲುಮೇಳಗಾರನು ಕೋಲುಕಡ್ಡಿಗಳನ್ನು ವೃತ್ತಾಕಾರವಾಗಿರಿಸಿ ಊದಿನಕಡ್ಡಿ ಬೆಳಗಿ ಪೂಜೆ ಮಾಡುತ್ತಾನೆ. ಆಮೇಲೆ ಕೋಲುಕಡ್ಡಿಗಳನ್ನು ತೆಗೆದುಕೊಂಡು ಪರಸ್ಪರ ಎದುರು-ಬದುರಾಗಿ ನಿಂತ ನಂತರ ಕೋಲುಗುರು ಅಥವಾ ಕೋಲು ಮೇಳಗಾರ ಪದವನ್ನು ಹಾಡುತ್ತಾ ಕೋಲಾಟವನ್ನು ಪ್ರದರ್ಶನ ಮಾಡಲು ಕಲಾವಿದರಿಗೆ ಸೂಚಿಸುತ್ತಾನೆ. ಕೋಲಾಟ ಪ್ರದರ್ಶನ ಆರಂಭವಾಗುವ ಮೊದಲಿಗೆ ಪ್ರಾರ್ಥನಾ ಗೀತೆ ಅಥವಾ ಗಣಸ್ತುತಿಯ ಕೋಲು ಪದವನ್ನು ಹಾಡಲಾಗುತ್ತದೆ. ಕಲಾವಿದರು ಪದವನ್ನು ಹಾಡುತ್ತಾ ಕೋಲಾಟ ಪ್ರದರ್ಶನವನ್ನು ನೀಡುತ್ತಾರೆ.

## ೧.೧. ಅಧ್ಯಯನದ ಉದ್ದೇಶ

೧. ಮ್ಯಾಸಬೇಡ ಮತ್ತು ಊರು ಬೇಡರು ಒಂದೇ ಸಮುದಾಯಕ್ಕೆ ಸೇರಿದವರಾದರೂ ಅವರವರಲ್ಲೇ ತಾವು ಮೇಲು-ಕೀಳು ಎಂದು ಪರಸ್ಪರ ಒಬ್ಬರಿಗೊಬ್ಬರು ತಿಳಿಯಲಾಗುತ್ತಿದೆ. ಕಲೆಗಳು ಜನಸಮುದಾಯಗಳಲ್ಲಿ ಹಾಸುಹೊಕ್ಕಾಗಿರುತ್ತವೆ. ಆದುದರಿಂದ ಅವುಗಳ ಅಧ್ಯಯನದಿಂದ ಬುಡಕಟ್ಟುಗಳ ಮೂಲ ಸಂಸ್ಕೃತಿಯ ತಿಳುವಳಿಕೆಯನ್ನು ಪಡೆಯುವುದು ಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಕೋಲಾಟದಂತಹ ಪ್ರಮುಖವಾದ ಕಲೆಯನ್ನು ಈ ಸಮುದಾಯಗಳು ಎಷ್ಟರಮಟ್ಟಿಗೆ ಬದುಕಿನ ಭಾಗವಾಗಿ ಉಳಿಸಿಕೊಂಡಿವೆ ಎಂಬುದನ್ನು ಅಧ್ಯಯನ ಮಾಡುವುದು ಈ ನಿಬಂಧದ ಮೊದಲನೆಯ ಉದ್ದೇಶವಾಗಿದೆ.

೨. ಕೋಲಾಟವನ್ನು ಗಡಿಭಾಗದಲ್ಲಿ ಯಾರು ರೂಪುಗೊಳಿಸಿದವರು ಹಾಗೂ ಆ ಮೂಲಕ ಅವರಿಗೂ ಕರ್ನಾಟಕದ ಸಂಸ್ಕೃತಿಗೂ ಇರುವ ಸಂಬಂಧವೇನು ಎಂದು ತಿಳಿಯುವುದು ಈ ಅಧ್ಯಯನದ ಉದ್ದೇಶವಾಗಿದೆ.

೩. ಕರ್ನಾಟಕಾಂಧ್ರ ಗಡಿ ಪರಿಸರದ ಕೋಲುಪದಗಳು ಸಮಾನವಾದ ವಸ್ತುವಿಷಯವನ್ನು ಒಳಗೊಂಡಿವೆಯೋ ಇಲ್ಲವೋ ಎಂಬುದನ್ನು ಅಧ್ಯಯನದಿಂದ ತಿಳಿದು ಸ್ಪಷ್ಟಪಡಿಸುವುದು.

೪. ಕನ್ನಡ-ತೆಲುಗು ನಾಡಿನ ಗಡಿ ಪರಿಸರದಲ್ಲಿ ನೆಲೆಸಿರುವ ಬೇಡ ಸಮುದಾಯದ ಕೋಲುಪದಗಳಲ್ಲಿ ಸಾಮ್ಯ-ವೈಷಮ್ಯಗಳನ್ನು ಗುರುತಿಸಿ ಅರ್ಥೈಸುವುದು.

೫. ಕರ್ನಾಟಕ-ಆಂಧ್ರ ಗಡಿ ಪರಿಸರದಲ್ಲಿ ನೆಲೆಸಿರುವ ಭಿನ್ನ ಸಮುದಾಯಗಳ ಕೋಲುಪದಗಳಲ್ಲಿ ಕಂಡುಬರುವ ವಸ್ತುವಿಷಯ, ಸಾಮ್ಯತೆ, ಭಾಷಾ ವಿಶಿಷ್ಟತೆ ಮತ್ತು ಭಿನ್ನತೆಗಳನ್ನು ಗುರುತಿಸಿ ಸ್ಪಷ್ಟಪಡಿಸುವುದು.

### ೧.೨. ಅಧ್ಯಯನದ ವ್ಯಾಪ್ತಿ

ಅಧ್ಯಯನದ ಶೀರ್ಷಿಕೆಯಂತೆ ಕರ್ನಾಟಕ-ಆಂಧ್ರ ಗಡಿನಾಡ ಪ್ರಾಂತಗಳು(ಕರ್ನಾಟಕದ ಚಿತ್ರದುರ್ಗ, ಬಳ್ಳಾರಿ ಆಂಧ್ರಪ್ರದೇಶದ ಅನಂತಪುರ, ಕರ್ನೂಲ್) ಅಧ್ಯಯನ ವ್ಯಾಪ್ತಿಗೆ ಒಳಪಡುತ್ತವೆ. ಈ ಎರಡು ಗಡಿನಾಡ ಪರಿಸರದಲ್ಲಿ ರಚನೆಗೊಂಡ ಕೋಲುಪದಗಳನ್ನು ಭಾಷಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ಸಮುದಾಯದ ಹಿನ್ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸುವುದು ಅಧ್ಯಯನದ ವ್ಯಾಪ್ತಿಯಾಗಿದೆ.

### ೧.೩. ಅಧ್ಯಯನದ ವೈಧಾನಿಕತೆ

ಪ್ರಸ್ತುತ ಅಧ್ಯಯನವು ವ್ಯಾಪ್ತಿಗೆ ಒಳಪಟ್ಟ ಕರ್ನಾಟಕಾಂಧ್ರ ಗಡಿ ಪ್ರಾಂತಗಳಲ್ಲಿ ದೊರಕುವ ಕನ್ನಡ-ತೆಲುಗು ಕೋಲುಪದಗಳನ್ನು (ಪ್ರಕಟಿತ, ಅಪ್ರಕಟಿತ) ಕ್ಷೇತ್ರಕಾರ್ಯದ ಮುಖೇನ ಕ್ರೋಢೀಕರಿಸಿ ವಿಶ್ಲೇಷಣೆ ಮಾಡುವುದು ಅಧ್ಯಯನದ ವಿಧಾನವಾಗಿದೆ.

### ೧.೪. ಅಧ್ಯಯನದ ಸ್ವರೂಪ

ಅಧ್ಯಯನದ ಉದ್ದೇಶಕ್ಕನುಗುಣವಾಗಿ ಅಧ್ಯಾಯಗಳನ್ನು ಈ ರೀತಿ ಯೋಜಿಸಿಕೊಳ್ಳಲಾಗಿದೆ.

**ಅಧ್ಯಾಯ : ಒಂದು : ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ ಮತ್ತು ಸ್ವರೂಪ**

ಈ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆಯನ್ನು ಸ್ಪಷ್ಟವಾಗಿ ನಿರೂಪಿಸಲಾಗಿದೆ. ಅಧ್ಯಯನದ ಸ್ವರೂಪ ಭಾಗದಲ್ಲಿ ಅಧ್ಯಯನಕ್ಕೆ ಪೂರಕವಾಗಿ ಯೋಜಿಸಿಕೊಂಡ ಅಧ್ಯಾಯಗಳನ್ನು ಸಂಕ್ಷಿಪ್ತವಾಗಿ ಅರ್ಥೈಸಿಕೊಳ್ಳಲಾಗಿದೆ.

**ಅಧ್ಯಾಯ : ಎರಡು : ಈವರೆಗಿನ ಅಧ್ಯಯನಗಳ ಸಮೀಕ್ಷೆ**

ಈ ಅಧ್ಯಾಯದಲ್ಲಿ ಕನ್ನಡ - ತೆಲುಗು ಕೋಲುಪದಗಳಿಗೆ ಸಂಬಂಧಿಸಿದಂತೆ ಬಂದಿರುವ ಸಾಹಿತ್ಯ ಹಾಗೂ ಸಾಹಿತ್ಯೇತರ ಪಿಎಚ್.ಡಿ., ಎಂ.ಫಿಲ್. ಪ್ರಬಂಧಗಳು, ಬಿಡಿಲೇಖನಗಳು, ಪತ್ರಿಕಾ ಲೇಖನಗಳು, ಸಂಪಾದನ ಕೃತಿಗಳನ್ನು ಸಮೀಕ್ಷೆಗೆ ಒಳಪಡಿಸಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಪೂರಕ ಎನ್ನುವುದರ ಜೊತೆಗೆ ಈ ಅಧ್ಯಯನಕ್ಕಿಂತ ಭಿನ್ನ ಎನ್ನುವುದನ್ನು ಅವಲೋಕಿಸಲಾಗಿದೆ.

**ಅಧ್ಯಾಯ : ಮೂರು : ಕೋಲಾಟದ ವೈವಿಧ್ಯತೆ**

ಈ ಅಧ್ಯಾಯದಲ್ಲಿ ಕೋಲಾಟದ ಪ್ರಾಚೀನತೆ ಹಾಗೂ ಕೋಲಾಟದ ಪ್ರದರ್ಶನಕ್ಕೆ ಅಗತ್ಯವಿರುವ ಸಲಕರಣೆಗಳಾದ ಕೋಲು ಹುಯ್ಯುವ ಕಲಾವಿದರು, ಕೋಲುಪದಗಳು, ಕೋಲುಕಡ್ಡಿಗಳು, ಗೆಜ್ಜೆಸರ, ತಾಳಗಳು ಮತ್ತು ತಪ್ಪಡಿ ಅಥವಾ ತಮಟೆ ಇವುಗಳ ಕುರಿತಾಗಿ ಪರಿಚಯಾತ್ಮಕವಾಗಿ ಪ್ರಸ್ತಾಪ ಮಾಡಿ ವಿವರಿಸಲಾಗಿದೆ. ಹಾಗೆಯೇ ಕೋಲುಪದಗಳನ್ನು ವಸ್ತುವಿಷಯವಾಗಿ ವರ್ಗೀಕರಿಸಿ ವಿಶ್ಲೇಷಣೆ ಮಾಡಲಾಗಿದೆ.

**ಅಧ್ಯಾಯ : ನಾಲ್ಕು : ಕನ್ನಡ - ತೆಲುಗು ಕೋಲಾಟದ ಪದಗಳು**

ಈ ಅಧ್ಯಾಯದಲ್ಲಿ ಕನ್ನಡ ಮತ್ತು ತೆಲುಗು ಗಡಿ ಪ್ರಾಂತಗಳಲ್ಲಿ ಸಂಗ್ರಹಿಸಲಾದ ಕನ್ನಡ-ತೆಲುಗು ಕೋಲುಪದಗಳಲ್ಲಿರುವ ಸಾಮ್ಯ-ಭಿನ್ನತೆಗಳನ್ನು ಕಂಡುಕೊಳ್ಳಲಾಗಿದೆ ಹಾಗೂ ಗಡಿನಾಡ ಕೋಲುಪದಗಳಲ್ಲಿ ಸಾಂಸ್ಕೃತಿಕ ಅನನ್ಯತೆಯನ್ನು ಗುರುತಿಸಲಾಗಿದೆ.

**ಅಧ್ಯಾಯ : ಐದು : ಕೋಲಾಟ ಪದಗಳ ತೌಲನಿಕ ಅಧ್ಯಯನ**

ಈ ಅಧ್ಯಾಯದಲ್ಲಿ ಕರ್ನಾಟಕ - ಆಂಧ್ರ ಗಡಿನಾಡ ಕನ್ನಡ-ತೆಲುಗು ಕೋಲುಪದಗಳಲ್ಲಿರುವ ಏಕರೂಪದ ವಸ್ತುವಿನ ಕುರಿತಾಗಿ ವಿವೇಚಿಸಲಾಗಿದೆ. ಹಾಗೆಯೇ ಗಡಿನಾಡ ಕೋಲುಪದಗಳಲ್ಲಿನ ಸಾಮ್ಯತೆಗಳು ಹಾಗೂ ಕೋಲುಪದಗಳಲ್ಲಿ ನುಡಿ ಬೆರಕೆಯ ಕುರಿತು ಚರ್ಚಿಸಲಾಗಿದೆ. ಗಡಿನಾಡ ಬೇಡರ ಪಂಗಡಗಳಾದ ಮ್ಯಾಸಬೇಡ ಮತ್ತು ಊರುಬೇಡರ ಕೋಲುಪದಗಳಲ್ಲಿರುವ ಸಾಮ್ಯ-ವೈಷಮ್ಯಗಳ ಕುರಿತಾಗಿ ನಿರೂಪಿಸಲಾಗಿದೆ.

**ಅಧ್ಯಾಯ : ಆರು : ಗಡಿನಾಡ ಕೋಲಾಟ ಪದಗಳ ವೈಶಿಷ್ಟ್ಯಗಳು**

ಈ ಅಧ್ಯಾಯದಲ್ಲಿ ಕರ್ನಾಟಕ - ಆಂಧ್ರ ಗಡಿನಾಡ ಪ್ರಾಂತ ಪರಿಸರದಲ್ಲಿ ನೆಲೆಸಿರುವ ಸಮುದಾಯಗಳನ್ನು ಆಯ್ದುಕೊಂಡು ಅಧ್ಯಯನಕ್ಕೊಳಪಡಿಸಲಾಗಿದೆ. ಹಾಗೆಯೇ ಗಡಿ ಪ್ರಾಂತಗಳ ಕೋಲಾಟದಲ್ಲಿ ಜನಪ್ರಿಯವಾಗಿರುವ ಕಾಡುಗೊಲ್ಲ ಮತ್ತು ಮ್ಯಾಸಬೇಡ ಸಮುದಾಯಗಳ ಕೋಲುಪದಗಳಲ್ಲಿ ಸಾಮ್ಯತೆ ಮತ್ತು ಭಿನ್ನತೆಗಳನ್ನು ಕುರಿತು ವಿಶ್ಲೇಷಿಸಿ ಸ್ಪಷ್ಟಪಡಿಸಲಾಗಿದೆ. ಜೊತೆಗೆ ಗಡಿನಾಡ ಕನ್ನಡ-ತೆಲುಗು ಕೋಲುಪದಗಳಲ್ಲಿ ಈ ಎರಡೂ ಭಾಷೆಗಳು ಒಂದಕ್ಕೊಂದು ಹೇಗೆ ಪ್ರಭಾವಿಸಿಕೊಂಡಿವೆ ಎಂಬುದನ್ನು ತಿಳಿಯಲಾಗಿದೆ. ಈ ಗಡಿ ಪ್ರಾಂತಗಳಲ್ಲಿ ನೆಲೆಸಿರುವ ಗಡಿನಾಡ ದೈವಗಳ ಹಿನ್ನೆಲೆಯಲ್ಲಿ ರಚಿಸಲಾದ ಕೋಲುಪದಗಳನ್ನು ವಿಶ್ಲೇಷಣೆ ಮಾಡುವುದರ ಮುಖೇನ ಗಡಿನಾಡ ಕೋಲುಪದಗಳಲ್ಲಿ ಸಾಂಸ್ಕೃತಿಕ ಅನನ್ಯತೆಯನ್ನು ಗುರುತಿಸಲಾಗಿದೆ.

**ಅಧ್ಯಾಯ : ಏಳು : ಕೋಲಾಟದ ಪದಗಳು ಸಾಹಿತ್ಯಿಕ ವಿವೇಚನೆ**

ಈ ಅಧ್ಯಾಯದಲ್ಲಿ ಗಡಿನಾಡ ಕನ್ನಡ-ತೆಲುಗು ಕೋಲುಪದಗಳನ್ನು ಸಾಹಿತ್ಯಿಕವಾಗಿ ವಿಭಾಗಿಸಿಕೊಂಡು ವಿಶ್ಲೇಷಣೆ ಮಾಡಲಾಗಿದೆ. ಹಾಗೆಯೇ ಕೋಲುಪದಗಳಲ್ಲಿ ಸಾಹಿತ್ಯಕ್ಕಿಂತ ಕೋಲು ಹುಯ್ಯುವವರ ಕುಣಿತ, ಕೋಲಿನ ಪೆಟ್ಟುಗಳ ನಾದ ಮತ್ತು ಲಯಗಳು ಪ್ರಮುಖ ಪಾತ್ರವಹಿಸುತ್ತವೆ ಎಂಬುದನ್ನು ಈ ಮೂಲಕ ಕಂಡುಕೊಳ್ಳಲಾಗಿದೆ.

**ಅಧ್ಯಾಯ : ಎಂಟು : ಕೋಲು ಕೋಲೆನ್ನಿರೇ....**

ಕನ್ನಡ-ತೆಲುಗು ಕೋಲುಪದಗಳಲ್ಲಿ ಭಾಷೆ, ಸಂಸ್ಕೃತಿ, ಸಮುದಾಯ ಮತ್ತು ಸಾಹಿತ್ಯಿಕ ಅಂಶಗಳು ಒಳಗೊಂಡಿರುವುದನ್ನು ಪ್ರತಿಪಾದಿಸಲಾಗಿದೆ. ಅಧ್ಯಯನದ ಮೂಲಕ ಕಂಡುಕೊಂಡ ಫಲಿತಗಳು, ವಕ್ತೃ ವಿವರ, ಆಯ್ದ ಕೋಲಾಟದ ಪದಗಳು ಮತ್ತು ಪರಾಮರ್ಶನ ಗ್ರಂಥಗಳನ್ನು ನೀಡಲಾಗಿದೆ.



ಅಧ್ಯಾಯ : ಎರಡು

# ಈವರೆಗಿನ ಅಧ್ಯಯನಗಳ ಸಮೀಕ್ಷೆ

**ಜಾ**ನಪದ ಸಾಹಿತ್ಯದ ಅಧ್ಯಯನ ತಡವಾಗಿಯಾದರೂ ೧೯-೨೦ನೇ ಶತಮಾನದ ಆರಂಭದಿಂದ ಮೌಖಿಕ ಸಾಹಿತ್ಯ ಅಥವಾ ಜಾನಪದ ಕಲೆಗಳ ವೈಜ್ಞಾನಿಕ ಅಧ್ಯಯನ ಆರಂಭವಾಯಿತು. ಹತ್ತೊಂಬತ್ತನೆಯ ಶತಮಾನದಿಂದೀಚೆಗೆ ಕನ್ನಡ - ತೆಲುಗು ಭಾಷೆಗಳಿಗೆ ಸಂಬಂಧಿಸಿ ಶಿಷ್ಟ ಮತ್ತು ಮೌಖಿಕ ಸಾಹಿತ್ಯದ ದ್ವಿಭಾಷಿಕ ಅಧ್ಯಯನ ಮತ್ತು ತೌಲನಿಕ ಅಧ್ಯಯನಗಳು ಪ್ರಾರಂಭವಾದವು. ಕನ್ನಡ - ತೆಲುಗು ಮೂಲತಃ ದ್ರಾವಿಡ ಭಾಷಾ ವರ್ಗಕ್ಕೆ ಸೇರಿದವು. ಎರಡೂ ಭಾಷೆಗಳಿಗೆ ಸಂಬಂಧಿಸಿದಂತೆ ದ್ವಿಭಾಷಿಕತೆ, ಬುರ್ರಕಥಾ, ಸ್ಥಳನಾಮ ಮತ್ತು ವ್ಯಕ್ತಿನಾಮಗಳು, ಗಾದೆಗಳು, ಒಗಟುಗಳು ಮುಂತಾದ ವಿಷಯಗಳಿಗೆ ಸಂಬಂಧಿಸಿ ಕರ್ನಾಟಕ ಮತ್ತು ಆಂಧ್ರಪ್ರದೇಶದ ಗಡಿ ಪರಿಸರದಲ್ಲಿ ಮತ್ತು ಗಡಿಯಾಚೆಗೂ ತಕ್ಕಮಟ್ಟಿಗೆ ತೌಲನಿಕ ಅಧ್ಯಯನಗಳು ನಡೆದಿವೆ.

ಕರ್ನಾಟಕ - ಆಂಧ್ರಪ್ರದೇಶದ(ಸೀಮಾಂಧ್ರ) ಗಡಿ ಪರಿಸರದಲ್ಲಿ ವಿಪುಲವಾದ ಮೌಖಿಕ ಸಾಹಿತ್ಯ ಇದೆ. ಕೋಲಾಟ ಪದಗಳು ಈ ಗಡಿ ಪ್ರಾಂತಗಳಲ್ಲಿ ಕನ್ನಡ - ತೆಲುಗು ಎರಡೂ ಭಾಷೆಗಳಲ್ಲಿ ಹರಿದಾಡುತ್ತಿವೆ. ಹಾಗಾಗಿ ಈ ಕ್ಷೇತ್ರದಲ್ಲಿ ಕೋಲಾಟದ ಅಧ್ಯಯನಕ್ಕೆ ಸಂಬಂಧಿಸಿದಂತೆ ತುಂಬಾ ವಿರಳವಾದ ಅಧ್ಯಯನಗಳಾಗಿರುವುದು ಮೇಲ್ನೋಟಕ್ಕೆ ಕಂಡುಬರುವ ಅಂಶ. ಪ್ರಸ್ತುತ ಪ್ರಬಂಧದಲ್ಲಿ ಈವರೆಗಿನ ಕೋಲಾಟದ ಅಧ್ಯಯನಕ್ಕೆ ಸಂಬಂಧಿಸಿ ವಿಮರ್ಶಾತ್ಮಕ ಸಮೀಕ್ಷೆ ಮಾಡಲಾಗಿದೆ.

ಆಂಧ್ರ ಮತ್ತು ಕರ್ನಾಟಕಗಳ ಗಡಿ ಪ್ರಾಂತ್ಯಗಳಲ್ಲಿ ತೆಲುಗು - ಕನ್ನಡ ಕೋಲಾಟ ಪದಗಳ ಕುರಿತು ತೌಲನಿಕವಾಗಿ ಅಥವಾ ಪ್ರತ್ಯೇಕವಾಗಿ ಅಧ್ಯಯನಗಳು ನಡೆದಿರುವುದು ತುಂಬಾ ಕಡಿಮೆ. ತೆಲುಗು ಮತ್ತು ಕನ್ನಡ ಕೋಲಾಟಕ್ಕೆ ಸಂಬಂಧಿಸಿ ಪ್ರತ್ಯೇಕ ಗ್ರಂಥಗಳು, ಲೇಖನಗಳು, ಮಹಾಪ್ರಬಂಧಗಳು ಅಥವಾ ಪ್ರೌಢ ಪ್ರಬಂಧಗಳು ದೊರಕುತ್ತವೆ. ಅವುಗಳನ್ನು ಸಮೀಕ್ಷೆ ಮಾಡುವುದರ ಮೂಲಕ ಅಧ್ಯಯನವನ್ನು ಸುಗಮಗೊಳಿಸಿಕೊಳ್ಳಲಾಗುವುದು.

* ಹುಟ್ಟಿದ ಹಳ್ಳಿ

ಕನ್ನಡದ ಹಿರಿಯ ಜಾನಪದ ವಿದ್ವಾಂಸರಾದ ಅರ್ಚಕ ಬಿ. ರಂಗಸ್ವಾಮಿ ಅವರು ೧೯೩೩ರ ಕಾಲಕ್ಕೆ ಜಾನಪದ ಅಧ್ಯಯನಕ್ಕೆ ಸಂಬಂಧಿಸಿ ತಮ್ಮದೇ ಹಳ್ಳಿಯಾದ ಬಂಡಿ ಹೊಳೆಯಲ್ಲಿ ಜಾನಪದ ಕಥೆ, ಒಗಟು, ಗೀತೆ, ಗಾದೆ, ಬೀಸುವ ಪದ್ಯಗಳು, ಕೋಲಾಟ ಪದಗಳು, ದೇವರ ಪದಗಳಂಥ ಜಾನಪದದ ಸಹಜ ಹಾಡುಗಳನ್ನು ಸಂಗ್ರಹಿಸುವ ಮೂಲಕ ಜಾನಪದ ಅಧ್ಯಯನಕ್ಕೆ ದಾರಿ ತೋರಿಸಿದರು.

ಕೋಲಾಟ ಪ್ರದರ್ಶನಕ್ಕೂ ಆರಂಭದಲ್ಲಿ ಯಕ್ಷಗಾನ, ಗಾರುಡಿಗರ ಆಟ, ದೊಂಬರ ಆಟದ ಅನುಕರಣವೂ ಜೋಗಿಯ ವೇಷ, ಕೊರವಂಜಿಯ ವೇಷಗಳು, ದಾಸಯ್ಯನ ವೇಷವೂ ಈ ಎಲ್ಲಾ ಜಾನಪದ ಆಟಗಳು ಮುಗಿದ ನಂತರ ಕೋಲಾಟವನ್ನು ಪ್ರದರ್ಶನ ಮಾಡುತ್ತಿದ್ದರು ಎಂದು ಅರ್ಚಕ ಬಿ. ರಂಗಸ್ವಾಮಿ ಹೇಳಿದ್ದಾರೆ.

"ರಂಗ ಕುಣಿದು ಸ್ವಲ್ಪ ಬೇಜಾರಾದರೆ ಕೋಲಾಟ ಆಡುತ್ತಿದ್ದರು" (ಪುಟ ೨೨) ಎಂದು ಹೇಳುತ್ತಾರೆ. ಎಲ್ಲಾ ಆಟಗಳನ್ನು ಆಡಿ, ನೋಡಿ ಮಾನಸಿಕವಾಗಿ ಸುಸ್ತು ಎಂದೆನಿಸಿದಾಗ ಕೋಲಾಟವನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದರು ಎಂಬುದು ಈ ಮಾತಿನ ಅರ್ಥ. ಕೋಲಾಟವನ್ನು ಯಾವುದೇ ಸಂಕೋಚ ಬಿಡೆಗಳಿಲ್ಲದೆ ತುಂಬಾ ಉತ್ಸಾಹದಿಂದ ಪ್ರದರ್ಶನ ಮಾಡುತ್ತಿದ್ದರು ಎಂದಿದ್ದಾರೆ. ಕೋಲಾಟದಲ್ಲಿ ಶೃಂಗಾರ ಮತ್ತು ತಮಾಷೆ, ಹಾಸ್ಯದ ಹಾಡುಗಳು, ಕೋಲು ಹುಯ್ಯುವವರ ಮತ್ತು ಕೋಲಾಟ ವೀಕ್ಷಿಸುವ ಜನರಿಗೂ ಆಸಕ್ತಿ ಮತ್ತು ಉತ್ಸಾಹಗಳನ್ನು ಇಮ್ಮಡಿಗೊಳಿಸುವ ಮತ್ತು ಭರಪೂರ ಮನರಂಜನೆಯನ್ನು ಒದಗಿಸುವ ಏಕೈಕ ಜಾನಪದ ಆಟ ಎನ್ನಬಹುದು. ಕೋಲು ಹುಯ್ಯುವಾಗ ಕೋಲುಪದಗಳು ಮುಗಿದರೆ, ತಕ್ಷಣಕ್ಕೆ ಪದಗಳನ್ನು ಕಟ್ಟಿ ಹಾಡುವ ಚಾಕಚಕ್ಯತೆ ಕೋಲು ಮೇಳಗಾರರಿಗೆ ಸಿದ್ಧಿಸಿರುತ್ತದೆ ಎಂದಿದ್ದಾರೆ. ಕೋಲು ಪದಗಳಲ್ಲಿ ವಸ್ತುವೈವಿಧ್ಯತೆಯನ್ನಾಗಲಿ, ಕೋಲು ಪ್ರಕಾರಗಳನ್ನಾಲಿ ಮತ್ತು ಕೋಲು ಹೊಯ್ಯುವವರ ವೇಷಭೂಷಣಕ್ಕೆ ಸಂಬಂಧಿಸಿದಂತೆ ಯಾವುದೇ ತರಹ ಮಾಹಿತಿಯನ್ನು ನೀಡಲಾಗಿಲ್ಲ.

ಜಾನಪದ ವಿದ್ವಾಂಸರಾದ ಚಂದ್ರಶೇಖರ ಕಂಬಾರ ಅವರು ಸಂಪಾದಿಸಿರುವ 'ಮಾತಾಡುಲಿಂಗವೇ' (೧೯೭೩) ಕೃತಿಯು ಜನಪದದ ವಿವಿಧ ಪ್ರಕಾರಗಳನ್ನು ಒಳಗೊಂಡಿದೆ. ಇವುಗಳಲ್ಲಿ ಕೋಲುಪದಗಳನ್ನು ಒಂದು ಭಾಗವಾಗಿ ಪ್ರಸ್ತಾಪಿಸಲಾಗಿದೆ. 'ಕೋಲು ಕೋಲೆನ್ನ ಕೋಲೆ' ಎಂಬ ಉಪಶೀರ್ಷಿಕೆಯಲ್ಲಿ ಕೋಲುಪದಗಳನ್ನು ಸಂಪಾದಿಸಿಕೊಟ್ಟಿದ್ದಾರೆ ಹಾಗೂ ಕೋಲಾಟದ ಪ್ರಕಾರಗಳನ್ನು ಹೀಗೆ ಹೆಸರಿಸಿದ್ದಾರೆ.

೧. ತಾಳಗಡ್ಡಿ

೨. ಆರಗಡ್ಡಿ

೩. ಎತ್ತುಗಡ್ಡಿ

ಎಂದು ವಿಭಾಗಿಸಿ ಕೋಲು ಪದಗಳ ಅಥವಾ ಹಾಡುಗಳ ಶೀರ್ಷಿಕೆಯ ಕೆಳಭಾಗದಲ್ಲಿ ಇವುಗಳನ್ನು ಹೆಸರಿಸಲಾಗಿದೆ. ಕೋಲಾಟ ಪದಗಳ ಅರ್ಥ, ಸ್ವರೂಪ ಹಾಗೂ ಕೋಲು ಪದಗಳ ವಸ್ತುವಿಷಯ ಮತ್ತು ಕೋಲಾಟದ ಪ್ರದರ್ಶನಕ್ಕೆ ಬೇಕಾದ ಪರಿಕರ ಮತ್ತಿತರ ಅಂಶಗಳನ್ನು ಪ್ರಸ್ತಾಪಿಸಿದ್ದರೆ ಸೂಕ್ತವಾಗಿರುತ್ತಿತ್ತು ಎಂದು ಹೇಳಬಹುದು.

ಜಿ.ಬಿ. ಖಾಡೆ ಅವರ 'ಕಾಡು ಹೂಗಳು' (೧೯೭೩) ಕೃತಿಯು ಜನಪದ ಗೀತ ಸಾಹಿತ್ಯ ಪ್ರಕಾರಗಳನ್ನು ಒಳಗೊಂಡಿದೆ. ಗೀತ ಸಾಹಿತ್ಯದ ಒಂದು ಭಾಗವಾಗಿ ಕೋಲಾಟಕ್ಕೆ ಸಂಬಂಧಿಸಿದಂತೆ 'ಕೋಲಿನ ಪದಗಳು' ಎಂಬ ಉಪಶೀರ್ಷಿಕೆಯಲ್ಲಿ ಕೋಲಾಟದ ಹಾಡುಗಳನ್ನು ಸಂಗ್ರಹಿಸಿ ಕೊಡಲಾಗಿದೆ. ಈ ಸಂಕಲನದಲ್ಲಿ ಬೀಸುವ ಕಲ್ಲಿನ ಪದಗಳು, ಹಂತಿಯ ಹಾಡುಗಳು, ಕೋಲಿನ ಪದಗಳು ಮತ್ತು ಡೊಳ್ಳಿನ ಪದಗಳು ಎಂದು ನಾಲ್ಕು ವಿಭಾಗಗಳನ್ನು ಮಾಡಿಕೊಳ್ಳಲಾಗಿದೆ. ಸಂಗ್ರಹಿತ ಗೀತಗಳು ಇಡಿಯಾಗಿ ಎಲ್ಲರ ಕೈಗೂ ದಕ್ಕುವಂತಾಗಲಿ ಎಂಬುದು ಸಂಪಾದಕರ ಆಶಯವಾಗಿದೆ.

ಖಾಡೆ ಅವರು 'ಕಾಡು ಹೂಗಳು' ಗ್ರಂಥದ ಕುರಿತಾಗಿ ಅರಿಕೆಯಲ್ಲಿ ಹಂತಿ ಹಾಡುಗಳು, ಬೀಸುವ ಕಲ್ಲಿನ ಪದಗಳು ಮತ್ತು ಡೊಳ್ಳಿನ ಪದಗಳು ಕುರಿತಾಗಿ ಪ್ರಾಸ್ತಾವಿಕವಾಗಿ ವಿಚಾರ ಮಾಡುತ್ತಾರೆ. ಆದರೆ ಕೃತಿಯ ಒಂದು ಭಾಗವಾಗಿ ಕೋಲಿನ ಪದಗಳನ್ನು ಸಂಗ್ರಹ ಮಾಡಿದರೂ ಅರಿಕೆಯಲ್ಲಿ ಕೋಲಿನ ಪದಗಳು ಕುರಿತು ಯಾವುದೇ ರೀತಿಯ ಮಾಹಿತಿಯನ್ನು ಪ್ರಸ್ತಾಪ ಮಾಡಿರುವುದಿಲ್ಲ.

ಕೋಲಾಟದ ಕುರಿತು 'ಕೋಲಿನ ಪದಗಳು' ಎಂಬ ಶೀರ್ಷಿಕೆಯಲ್ಲಿ ಕೋಲಾಟ ಪದಗಳನ್ನು ಸಂಗ್ರಹಿಸಿಕೊಟ್ಟಿದ್ದಾರೆ. ಸಂಗ್ರಹದ ಗೀತೆಗಳಲ್ಲಿ ದೇವರು ಸ್ತುತಿ ಗೀತೆಗಳು, ಸೊಸೆ ಮತ್ತು ಸೋದರ ಮಾವನ ನಡುವಿನ ಪ್ರಣಯ ಪ್ರಸಂಗದ ಸನ್ನಿವೇಶಗಳು, ಕುಂತಿಯ ಮಗ ಭೀಮನ ವೀರಾವೇಷ ಕುರಿತು ಹೀಗೆ ಶೃಂಗಾರ, ಪೌರಾಣಿಕ, ಮಹಾಭಾರತ ಮತ್ತು ದೇವರಸ್ತುತಿ ಒಳಗೊಂಡಂತೆಯೇ ವಸ್ತು ವಿಷಯಗಳನ್ನು ಈ ಕೋಲುಪದಗಳಲ್ಲಿ ಕಾಣಬಹುದು.

ಸಂಪಾದಕರಾದ ಖಾಡೆ ಅವರು ಕೋಲಾಟದ ಅರ್ಥ, ಸ್ವರೂಪ, ನಿರೂಪಣಾ ಶೈಲಿ ಮತ್ತು ವಸ್ತುವೈವಿಧ್ಯತೆ, ಕೋಲು ಹುಯ್ಯುವ ಕಲಾವಿದರ ವೇಷಭೂಷಣಗಳು, ಕೋಲಾಟದ ಪ್ರಕಾರಗಳು ಕೋಲಾಟಕ್ಕೆ ಬಳಸುವ ಪರಿಕರಗಳು ಮುಂತಾಗಿ ಕೋಲಾಟಕ್ಕೆ ಸಂಬಂಧಿಸಿದ ವಿಚಾರಗಳನ್ನು ಸಂಕ್ಷಿಪ್ತವಾಗಿ 'ಕಾಡು ಹೂಗಳು' ಅರಿಕೆಯಲ್ಲಿ ಪ್ರಸ್ತಾಪ ಮಾಡಬಹುದಿತ್ತು.

ಈರೇಗೌಡ ಡಿ.ಕೆ. ಅವರು ಸಂಪಾದಿಸಿರುವ 'ಕೋಲಾಟದ ಪದಗಳು'(೧೯೭೫) ಈ ಸಂಕಲನದಲ್ಲಿ ಹಾಸನ ಮತ್ತು ಹೊಳೇನರಸೀಪುರ ನಡುವಿನ ಪ್ರದೇಶದಲ್ಲಿ ಪ್ರಚಲಿತವಾಗಿರುವ ಹಾಡುಗಳನ್ನು ಸಂಗ್ರಹಿಸಲಾಗಿದೆ. ಈ ಕೃತಿಗೆ ಮುನ್ನುಡಿಯನ್ನು ಖ್ಯಾತ ಜಾನಪದ ವಿದ್ವಾಂಸರಾದ ಜೀ.ಶಂ. ಪರಮಶಿವಯ್ಯ ಅವರು ಬರೆದಿದ್ದಾರೆ. ಜೀಶಂಪ ಅವರು ಈರೇಗೌಡರ 'ಕೋಲಾಟದ

ಪದಗಳು' ಸಂಕಲನದ ಕುರಿತು ಮಾತಾಡುವುದಕ್ಕೂ ಮೊದಲು ಇದಕ್ಕಿಂತ ಪೂರ್ವದಲ್ಲಿ ಬಂದ ಕೋಲಾಟ ಪದಗಳ ಕುರಿತು ಬಂದ ಕೃತಿಗಳ ಬಗ್ಗೆ ಸಂಕ್ಷಿಪ್ತ ಪರಿಚಯವನ್ನು ಮಾಡಲಾಗಿದೆ.

ಪ್ರಥಮವಾಗಿ ಅರ್ಚಕ, ಬಿ. ರಂಗಸ್ವಾಮಿ ಅವರ 'ಹುಟ್ಟಿದ ಹಳ್ಳಿ ಹಳ್ಳಿಯ ಹಾಡು' ೧೯೩೩ರಲ್ಲಿ ಪ್ರಕಟವಾದ ಈ ಕೃತಿಯು ಕೋಲಾಟದ ಸಾಹಿತ್ಯ ಎಷ್ಟು ಸಮೃದ್ಧವಾದುದು ಎಂದು ಹೇಳಿ ಹಾಡುಗಳನ್ನು ಉದಾಹರಣೆಯಾಗಿ ನೀಡುತ್ತಾ ಇತರೆ ಜನಪರ ಸಾಹಿತ್ಯ ಕುರಿತು ವಿವೇಚಿಸಿರುವುದಿದೆ ಹಾಗೂ ೧೯೪೦ರಲ್ಲಿ ಪ್ರಕಟವಾದ 'ನಾಡ ಪದಗಳು' ಸಂಕಲನದಲ್ಲಿ ಕೋಲಾಟದ ಕಿರುಪರಿಚಯವನ್ನು ಪ್ರಸ್ತಾಪ ಮಾಡಲಾಗಿದೆ. ಹಾಗೆಯೇ ಗದ್ದಗಿಮಠ ಅವರ 'ಲೋಕಗೀತೆಗಳು', ಕಾ.ರ.ಕೃ. ಅವರ 'ಕೋಲು ಮಲ್ಲಿಗೆ ಕೋಲೆ' ಎಂಬ ಶೀರ್ಷಿಕೆಯಲ್ಲಿ ಪ್ರಕಟವಾದ ಕೃತಿ ಕೋಲಾಟದ ಹಾಡುಗಳ ಸಂಗ್ರಹವಿದೆ. ಎಂ.ಸಿ. ವಸಂತಕುಮಾರ ಅವರ ಕೋಲು ಪದಗಳು ಶ್ರೀ ಆದಿಚುಂಚನಗಿರಿ ಸಂಕಲನದ ಗಂಗಾಧರ ಹಾಗೂ ಭೈರವರನ್ನು ಕುರಿತ 'ಕೋಲು ಪದಗಳು' ಎನ್.ಆರ್. ರಂಗಯ್ಯ ಅವರ 'ಆಯ್ದ ಹಳ್ಳಿಯ ಹಾಡುಗಳು' ಎಂ.ಆರ್. ಲಕ್ಷ್ಮಮ್ಮನವರ 'ಹಗರೆಯ ಕೋಲಾಟ' ಎಂಬ ಲೇಖನ ಹೀಗೆ ಮುಂತಾದ ಕೃತಿಗಳು ಹಾಗೂ ಲೇಖನಗಳನ್ನು ಕೋಲಾಟಕ್ಕೆ ಸಂಬಂಧಿಸಿದ ಹಲವು ಕೃತಿಗಳನ್ನು ಈರೇಗೌಡರ 'ಕೋಲಾಟದ ಪದಗಳು' ಮುನ್ನುಡಿಯಲ್ಲಿ ನೆನೆದಿರುವುದು ಅಥವಾ ಪ್ರಸ್ತಾಪಿಸಿರುವುದನ್ನು ಗಮನಿಸಬಹುದಾಗಿದೆ ಹಾಗೂ ಕೋಲಾಟದ ಪ್ರದರ್ಶನಕ್ಕೆ ಪ್ರಸಿದ್ಧಿ ಪಡೆದ ಸಮುದಾಯಗಳಾದ(ಕಾಡು) ಗೊಲ್ಲರು, ನಾಯಕರು ಮತ್ತು ಕೊರಚ ಸಮುದಾಯಗಳ ಪ್ರಸ್ತಾಪ ಮಾಡಲಾಗಿದೆ. ಹಾಗೆಯೇ ಕೋಲಾಟದ ಪ್ರಾಚೀನತೆ, ಪ್ರಕಾರಗಳು, ವಸ್ತುವೈವಿಧ್ಯತೆ ಮತ್ತು ಕೋಲಾಟಕ್ಕೆ ಅಗತ್ಯವಿರುವ ಪರಿಕರಗಳ ಕುರಿತು ಮುನ್ನುಡಿಯಲ್ಲಿ ಚರ್ಚಿಸಿರುವುದಿದೆ. ಕೋಲಾಟದ ಹಾಡುಗಳನ್ನು ಹಾಡುವ ಧಾಟಿಗಳು ಮತ್ತು ಲಕ್ಷಣಗಳನ್ನು ಕುರಿತಾಗಿ ಹಾಡುಗಳನ್ನು ಉದಾಹರಿಸಿ ವಿವೇಚಿಸಲಾಗಿದೆ.

ಈರೇಗೌಡರು ತಾವು ಸಂಪಾದಿಸಿರುವ 'ಕೋಲಾಟ ಪದಗಳು' ಕೃತಿಯಲ್ಲಿನ ಹಾಡುಗಳಲ್ಲಿ ಚಾರಿತ್ರಿಕ ವಿಷಯಗಳ ಜೊತೆಗೆ ರಾಮಾಯಣ, ಮಹಾಭಾರತ, ಭಾಗವತ ಕತೆಗಳನ್ನು, ಅತ್ಯುತ್ತಮ ಪ್ರೇಮಗೀತೆಗಳು, ವೀರಗೀತೆಗಳು, ಶೃಂಗಾರ, ದೈವಸ್ತುತಿ ಗೀತೆಗಳೆಂದು ವಿಭಾಗಿಸಿ ವಸ್ತುವೈವಿಧ್ಯತೆ ಯನುಸಾರ ವರ್ಗೀಕರಣ ಮಾಡಲಾಗಿದೆ. ಹಾಗೆಯೇ ಹಿರಿಯೂರು, ತುಮಕೂರು, ಸಿರಾ ಮತ್ತು ಹೊಳೆನರಸೀಪುರ ಈ ಪ್ರದೇಶಗಳಲ್ಲಿ ಸಿಗುವಂಥ ಕೋಲುಪದಗಳನ್ನು ಸಂಗ್ರಹಿಸಿ ತೌಲನಿಕವಾಗಿ ಅಧ್ಯಯನ ನಡೆಯುವ ಅಗತ್ಯವಿದೆ ಎಂದು ಪ್ರಸ್ತಾಪಿಸುತ್ತಾ ಇದರಿಂದ ಭಾಷಿಕವಾಗಿ, ಸಾಹಿತ್ಯಕವಾಗಿ, ಸಾಂಸ್ಕೃತಿಕವಾಗಿ ಭಿನ್ನತೆಗಳು, ಸಾಮ್ಯತೆ ಮತ್ತು ಹೋಲಿಕೆಗಳನ್ನು ಹಾಗೂ ಒಂದೇ ರೀತಿಯ ಸಮಾನಾಂಶಗಳನ್ನು ಅರಿಯಬಹುದು ಎಂಬುದನ್ನು ಸಂಪಾದಕರು ವಿವೇಚಿಸಿದ್ದಾರೆ.

ಈರೇಗೌಡರ ಈ ಸಂಪಾದನಾ ಕೃತಿಯು ಅರವತ್ತೊಂದು ಕೋಲಾಟದ ಪದಗಳನ್ನು ಒಳಗೊಂಡಿರುವುದನ್ನು ನೋಡಬಹುದು. ಪ್ರತಿಯೊಂದು ಕೋಲಾಟದ ಪದಕ್ಕೂ ಶೀರ್ಷಿಕೆಯನ್ನು ನೀಡಲಾಗಿದೆ ಹಾಗೂ ಕೃತಿಯ ಕೊನೆಯ ಎರಡು ಪುಟಗಳಲ್ಲಿ ಕೋಲಾಟದ ಪದಗಳಿಗೆ ಸಂಬಂಧಿಸಿದಂತೆ ಕಠಿಣ ಪದಗಳ ಅರ್ಥಕೋಶವನ್ನು ನೀಡಲಾಗಿದೆ.

ಈ ಕೃತಿಯಲ್ಲಿ ಕೋಲಾಟ ಪದಗಳನ್ನು ಸಂಗ್ರಹಿಸಿಕೊಡುವುದರ ಜೊತೆಗೆ ಕೋಲಾಟದ ಕುರಿತು ಬಂದಂಥ ಹಲವು ಕೃತಿಗಳನ್ನು ಮತ್ತು ಲೇಖನಗಳನ್ನು ಇಲ್ಲಿ ಪ್ರಸ್ತಾಪಿಸಿರುವುದು ವಿಶೇಷವೆನಿಸುತ್ತದೆ.

ಎಸ್.ವಿ. ರಂಗಣ್ಣ ಅವರ 'ಕೋಲ್ ಕೋಲ್ ಕೂಡಿ ಬರಲಿ'(೧೯೭೬) ಕೃತಿಯಲ್ಲಿ ಕಥನಗೀತೆಗಳು, ಕೋಲುಪದಗಳು, ಬೀಸುವ ಪದಗಳು ಮತ್ತು ಸಂಕೀರ್ಣ ಪದಗಳು ಎಂದು ನಾಲ್ಕು ವಿಭಾಗ ಮಾಡಿಕೊಂಡು ಜಾನಪದ ಅಧ್ಯಯನಕ್ಕೆ ಬೇಕಾದ ಸರಕನ್ನು ಸಂಗ್ರಹಿಸಿಕೊಡಲಾಗಿದೆ.

ಕೋಲು ಪದಗಳಿಗೆ ಸಂಬಂಧಿಸಿ 'ಕೋಲುಪದಗಳು' ಎಂಬ ಉಪಶೀರ್ಷಿಕೆಯಲ್ಲಿ ಕೋಲು ಪದಗಳನ್ನು ಸಂಗ್ರಹಿಸಿದ್ದಾರೆ. ಈ ಗೀತೆಗಳಲ್ಲಿ ದೇವರ ಸ್ತುತಿ ಹಾಡುಗಳು, ಶೃಂಗಾರ, ತಮಾಷೆ ಅಥವಾ ಹಾಸ್ಯ, ಸಾಂಸ್ಕೃತಿಕ ನಾಯಕರ ಕುರಿತಾಗಿ ಮತ್ತು ಅತ್ತೆ- ಅಳಿಯರ ತಮಾಷೆಗೆ ಸಂಬಂಧಿಸಿದ ಹಾಡು, ಹದಿಹರೆಯ ಹೆಣ್ಣುಮಕ್ಕಳನ್ನು ಕುರಿತ ಕೋಲುಪದಗಳು ಮುಂತಾದ ವಸ್ತುವೈವಿಧ್ಯತೆಯನ್ನು ಈ ಕೃತಿಯ ಹಾಡುಗಳಲ್ಲಿ ಕಾಣಬಹುದು.

ಕೋಲಾಟ ಆಡುವ ವಿಧಾನ ಕುರಿತು ನಿರೂಪಿಸಲಾಗಿಲ್ಲ. ಹಾಗೆಯೇ ಕೋಲಾಟದ ಪ್ರಕಾರಗಳ ಕುರಿತು ಮತ್ತು ಕೋಲು ಹುಯ್ಯುವ ಕಲಾವಿದರ ವೇಷಭೂಷಣ ಮುಂತಾದ ಅಂಶಗಳನ್ನು ಇಲ್ಲಿ ಕಾಣಲಾಗದು.

'ಪದವವೆ ನಮ್ಮ ಎದೆಯಲಿ' (೧೯೭೬) ಎಂಬ ಕೃತಿಯನ್ನು ಸಂಪಾದಿಸಿರುವ ಎಚ್.ಎಲ್. ನಾಗೇಗೌಡ ಅವರು ಇಲ್ಲಿ ಜನಪದ ಸಾಹಿತ್ಯದ ಹಲವು ಪ್ರಕಾರಗಳ ಹಾಡುಗಳನ್ನು ಸಂಗ್ರಹಿಸಿ ಸಂಪಾದಿಸಿ ಕೊಡಲಾಗಿದೆ. ಇವುಗಳಲ್ಲಿ ಒಂದು ಪ್ರಕಾರವಾಗಿ ಕೋಲಾಟದ ಹಾಡುಗಳ ಕುರಿತು ವಿಚಾರ ಮಾಡಲಾಗಿದೆ. ಕೋಲುಪದಗಳು ಎಂಬ ಉಪಶೀರ್ಷಿಕೆಯಲ್ಲಿ ಕೋಲಾಟದ ಪದಗಳನ್ನು ನಾಗಮಂಗಲ ತಾಲೂಕಿನಲ್ಲಿ ಸಂಗ್ರಹಿಸಿಕೊಟ್ಟಿದ್ದಾರೆ. ಇಲ್ಲಿ ಕೋಲಾಟದ ಬಗೆಗಳನ್ನು ಹೆಸರಿಸಿದ್ದಾರೆ.

ಹಾಗೆಯೇ ಕೋಲು ಹುಯ್ಯುವುದಕ್ಕೆ ಬೇಕಾಗುವ ಗೆಜ್ಜೆ, ದಮ್ಮಡಿ, ತಾಳ ಮತ್ತು ಕೋಲು ಹುಯ್ಯುವ ಕಲಾವಿದರ ಕುರಿತಾಗಿ ತಿಳಿಸಲಾಗಿದೆ. ಕೋಲು ಹುಯ್ಯುವುದನ್ನು ಬಿಡುವಾಗ ಅಥವಾ ಆ ದಿನದ ಕೊನೆಗೆ ನಿಲ್ಲಿಸುವ ಸಂದರ್ಭದಲ್ಲಿ ಕೋಲು ಹುಯ್ಯುವ ಕಲಾವಿದರು ಹೇಳುವ ಸೊಲ್ಲುಗಳನ್ನು ಹೀಗೆ ಮನಗಾಣಬಹುದು.

೧. ಸೈಯ್ಯೋ ತಗಣಿತ

೨. ತೈಯೋ ತಗಣಿತ

೩. ತೈಯ್ಯೋ ಅದ್ದೊರಾಜ

೪. ಧೀಂತಕ ಧೀಂತಕ

೫. ಧೀಂ ಧೀಂ ಧೀಂ

ಕೋಲಾಟ ಪ್ರದರ್ಶನ ನೀಡುವಾಗ ಕೋಲು ಹುಯ್ಯುವ ಕಲಾವಿದರು ಕೋಲು ಪ್ರದರ್ಶಿಸುತ್ತಾ ಹಾಡುಗಳನ್ನು ಹಾಡುವುದು ರೂಢಿ ಮತ್ತು ಹಾಡುಗಳನ್ನು ಹಾಡುತ್ತಾ ನಡು ನಡುವೆ 'ಕೋಲಣ್ಣ' ಎಂದು ಅಥವಾ ಹಾಡಿನ ಪಲ್ಲವಿಯನ್ನು ಎರಡೆರಡು ಬಾರಿ ಪುನರಾವರ್ತಿಸವುದಿದೆ ಎಂಬುದನ್ನು ವಿವರಿಸಿದ್ದಾರೆ.

ಸುಂಕಾಪುರ ಎಂ.ಎಸ್. ಅವರು ಸಂಪಾದಿಸಿರುವ 'ಜೀವನ ಜೋಕಾಲಿ ಕೋಲು ಪದ'(೧೯೭೬) ಕೃತಿಯಲ್ಲಿ ಉತ್ತರ ಕರ್ನಾಟಕದ ಕೋಲುಪದಗಳ ಸಂಗ್ರಹವಿದೆ. ಕೃತಿಯ ಪ್ರಸ್ತಾವನೆಯಲ್ಲಿ ಸುಂಕಾಪುರ ಅವರು ಕೋಲಾಟದ ಪ್ರದರ್ಶನದ ಆರಂಭದಿಂದ ಹಿಡಿದು ಮುಕ್ತಾಯ ಮಾಡುವವರೆಗಿನ ಮಾಹಿತಿ ನೀಡಿರುವುದನ್ನು ಇಲ್ಲಿ ಕಾಣಬಹುದು. ಕೋಲಾಟ ಎಂದರೆ "ಕೋಲಿನಿಂದ ಕೋಲಿಗೆ ಕುಟ್ಟಿ ಅದನ್ನೇ ತಾಳ ಲಯವನ್ನಾಗಿ ಮಾಡಿಕೊಂಡು, ಅದಕ್ಕೆ ಸರಿಯಾಗಿ ಹೆಜ್ಜೆ ಹಾಕಿ ಹಾಡುತ್ತಲೇ ಕುಣಿಯುವುದು ಕೋಲಾಟ" ಎಂದು ವ್ಯಾಖ್ಯಾನಿಸಿರುವುದಿದೆ.

ಕೋಲಾಟ ಹುಯ್ಯುವ ಕಾಲಕ್ಕೆ ಕಲಾವಿದರು ಸಮಸಂಖ್ಯೆಯಲ್ಲಿರಬೇಕು ಎಂದು ಸೂಚಿಸಿರುವುದಿದೆ. ಕೋಲು ಹುಯ್ಯುವ ಪ್ರತಿಯೊಬ್ಬ ಕಲಾವಿದನ ಹತ್ತಿರ ಎರಡು ಕೋಲುಕಡ್ಡಿಗಳಿದ್ದು, ಕೋಲುಪದಗಳಿಗೆ ಅನುಗುಣವಾಗಿ ಕೋಲು ಪ್ರದರ್ಶನ ಮಾಡಲಾಗುವುದು ಎಂಬುದಾಗಿ ಪ್ರಸ್ತಾಪಿಸಲಾಗಿದೆ ಮತ್ತು ಕೋಲು ಹುಯ್ಯುವುದರಲ್ಲಿ ಹತ್ತು ಹಲವು ತೆರನಾದ ಕೋಲು ಪ್ರಕಾರಗಳಿವೆ ಎಂದು ತಿಳಿಸುತ್ತಾ, ಕತ್ತರಿಗೋಲು, ಸುತ್ತುಗೋಲು, ಸಣ್ಣಕೋಲು, ಅಡಗೋಲು, ಮೂರಾಳಿನ ಕೋಲು ಮುಂತಾದವುಗಳನ್ನು ಹೆಸರಿಸಲಾಗಿದೆ. ಹಾಗೆಯೇ ಕೋಲಾಟವು ರಾಜಸ್ಥಾನ ಮತ್ತು ಗುಜರಾತಗಳ ಸಂಪರ್ಕವು ಕನ್ನಡ ನಾಡಿನೊಂದಿಗೆ ಮೊದಲಿನಿಂದಲೂ ಇತ್ತು. ಹಾಗೆಯೇ ಬಾದಾಮಿ ಚಾಲುಕ್ಯರು ಗುಜರಾತ ಮೇಲೆ ಅಧಿಪತ್ಯ ಸಾಧಿಸಿದ್ದರು. ಆಗ ಇವೆರಡು ಪ್ರಾಂತಗಳ ನಡುವೆ ಕಲೆಯ ದೃಷ್ಟಿಯಿಂದ ಕೊಡುಪಡೆ ಸಹಜವಾಗಿ ನಡೆದಿದೆ. ಸೌರಾಷ್ಟ್ರದ ಲಮಾಣಿಗಳು ಕರ್ನಾಟಕಕ್ಕೆ ವಲಸೆ ಬಂದು ಅವರ ಕಲೆಗಳಲ್ಲಿ ಒಂದಾದ ಕೋಲಾಟವು ನಮ್ಮವರ ಕಲೆಗಳ ಮೇಲೆ ಪ್ರಭಾವ ಬೀರಿದೆ ಎಂಬುದನ್ನು ಇಲ್ಲಿ ವಿವೇಚಿಸಲಾಗಿದೆ ಹಾಗೂ ಕೋಲಾಟವು ಆರಂಭಿಸುವಾಗ ಇಷ್ಟದೇವತೆಯ ಸ್ತುತಿಯೊಂದಿಗೆ ಆರಂಭವಾಗುತ್ತದೆ ಎಂದು ತಿಳಿಸಲಾಗಿದೆ. ಹಾಗೆಯೇ ಕೋಲಾಟ ಪದಗಳಲ್ಲಿ ವಸ್ತುವೈವಿಧ್ಯತೆ ಅಥವಾ ವಸ್ತುವಿಷಯದ ಕುರಿತು ಸರ್ವ ವಿಷಯಗಳು ಕೋಲಾಟದಲ್ಲಿ ವಸ್ತುವಾಗಬಲ್ಲವು ಎಂಬುದನ್ನು ಸೂಚ್ಯವಾಗಿ ಸೂಚಿಸಿದ್ದಾರೆ. ಮತ್ತೊಂದು ಪ್ರಮುಖ ಅಂಶವೆಂದರೆ ಕೋಲುಪದಗಳ ಮುಖ್ಯ ಧ್ಯೇಯವೆಂದರೆ ಮನೋರಂಜನೆ ಮತ್ತು ಸಾಮಾಜಿಕ ಜೀವನದಲ್ಲಿ ನೀತಿಯನ್ನು ಪ್ರಸಾರ ಮಾಡುವುದೇ ಆಗಿದೆ ಎಂಬುದನ್ನು ವಿವೇಚಿಸಲಾಗಿದೆ.

ಮಳಲಿವಂತಕುಮಾರ ಅವರು 'ಕೋಲುಪದಗಳು' (೧೯೭೮) ಎನ್ನುವ ಕೃತಿಯನ್ನು ಸಂಪಾದಿಸಿದ್ದಾರೆ. ಕೋಲು ಪದಗಳ ಸಂಗ್ರಹದ ಜೊತೆಗೆ ಕೋಲಾಟದ ಜನಪ್ರಿಯತೆಯನ್ನು

ಹೀಗೆ ವಿವರಿಸಿದ್ದಾರೆ. ಭಾರತದಾದ್ಯಂತ ಕೋಲಾಟವು ವ್ಯಾಪಿಸಿದರೂ ಕರ್ನಾಟಕ, ಕೇರಳ ಮತ್ತು ತಮಿಳುನಾಡುಗಳಲ್ಲಿ ಹೆಚ್ಚಾಗಿ ಕಂಡು ಬರುವುದರಿಂದ ಇದನ್ನು ದ್ರಾವಿಡ ಕಲೆ ಎಂದೂ ಕರೆಯಬಹುದು ಎಂದಿದ್ದಾರೆ.

ಮಳಲಿ ಅವರು ಕೋಲಾಟದ ಅರ್ಥ, ಸ್ವರೂಪ, ಹಿನ್ನೆಲೆ ಹಾಗೂ ಸಂಕ್ಷಿಪ್ತ ಪರಿಚಯ ಮಾಡಿಕೊಟ್ಟಿದ್ದಾರೆ ಮತ್ತು ಕೋಲಾಟದ ಪ್ರದರ್ಶನದಲ್ಲಿ ಬಳಸುವ ಪರಿಕರಗಳನ್ನು ಹೀಗೆ ಸೂಚಿಸಿದ್ದಾರೆ.

೧. ಗೆಜ್ಜೆ

೨. ತಾಳ

೩. ದಮ್ಮಡಿ

೪. ಕೋಲುಕಡ್ಡಿಗಳು

೫. ಹಾಡುಗಳು

೬. ಕೋಲು ಹುಯ್ಯುವ ಕಲಾವಿದರು

ಕೋಲಾಟದ ಪ್ರಕಾರಗಳನ್ನು ಹೆಸರಿಸಿ ಅವುಗಳನ್ನು ಹೇಗೆ ನಿರ್ವಹಿಸುತ್ತಾರೆ ಎಂಬುದನ್ನು ವಿವರಿಸುತ್ತಾ ಪ್ರತಿಯೊಂದು ಪ್ರಕಾರಕ್ಕೂ ಕೋಲುಪದದ ಮುಖಾಂತರ ಉದಾಹರಣೆಯನ್ನು ನೀಡಿದ್ದಾರೆ.

ಕೋಲು ಪ್ರಕಾರಗಳನ್ನು ಹೀಗೆ ಸೂಚಿಸಿದ್ದಾರೆ.

೧. ಉಯ್ಯಾಲೆ ಕೋಲು

೨. ಗೀಜುಗನ ಕೋಲು

೩. ಬಾಗ್ಗೋಲು

೪. ಚಿತ್ತಾರ್‌ಗೊಂಬೆ ಕೋಲು

೫. ಹರಿಗೋಲು

೬. ತೇರುಗೋಲು

೭. ಜಡೇಕೋಲು

೮. ಸೋಬಾನದ ಕೋಲು

೯. ದಂಡೆ ಕೋಲು

೧೦. ಸುತ್ಕೋಲು

೧೧. ನಿಲ್‌ಕೋಲು

೧೨. ಹಾರ್‌ಗಟಕು

೧೩. ತಾಳ್‌ಗಟಕು

೧೪. ಕೊರವಂಜಿ ಕೋಲು ... ಇತ್ಯಾದಿ ಬಗೆಗಳನ್ನು ಸೂಚಿಸುತ್ತಾ ವಿವರಣೆಯನ್ನು ನೀಡಿದ್ದಾರೆ ಮತ್ತು ಕೋಲಾಟದಿಂದ ದೇಹ ಮತ್ತು ಮನಸ್ಸುಗಳು ಸದೃಢತೆಯಿಂದ, ಆರೋಗ್ಯದಿಂದ ಇರುತ್ತವೆ ಎಂಬ ಮಾತನ್ನು ಹೇಳಿದ್ದಾರೆ.

ಬಸವರಾಜ ಮಲಶೆಟ್ಟಿ ಅವರು ಸಂಪಾದಿಸಿರುವ 'ಕೋಲಾಟದ ಪದಗಳು'(೧೯೮೧) ಕನ್ನಡ ಕೋಲಾಟ ಪದಗಳ ಸಂಗ್ರಹವಿರುವ ಕೃತಿ. ಕೋಲಾಟದ ಪ್ರಕಾರಗಳಿಗೆ ಸಂಬಂಧಿಸಿದಂತೆ ೧. ಸುತ್ತುಕೋಲು, ೨. ಕೋಪಗೋಲು - ಎಂಬುದಾಗಿ ಎರಡು ವಿಧಗಳನ್ನು ಹೆಸರಿಸಿ, ಅವುಗಳನ್ನು ಹೇಗೆ ನಿರ್ವಹಿಸುತ್ತಾರೆ ಎಂದು ವಿವರಿಸಿರುವುದನ್ನು ಗಮನಿಸಬಹುದು. ನಂತರ ಕೋಲು ಪದಗಳಲ್ಲಿ ೧. ದೈವಸ್ತುತಿ, ೨. ಪ್ರಣಯ, ೩. ತಮಾಷೆ ಅಥವಾ ಹಾಸ್ಯ, ೪. ಸಂಕೀರ್ಣ ಎಂದು ನಾಲ್ಕು ವಿಧವಾದ ವಸ್ತುವಿಷಯಗಳನ್ನು ವರ್ಗೀಕರಿಸಿದ್ದಾರೆ. ಈ ವಸ್ತುವೈವಿಧ್ಯತೆಯ ಹಾಡುಗಳಲ್ಲಿ ಕ್ರಮವಾಗಿ,

೧. ದೈವಸ್ತುತಿಗೆ ಸಂಬಂಧಿಸಿದ ಹಾಡುಗಳಲ್ಲಿ, ಹಂಪಿ ವಿರೂಪಾಕ್ಷ, ಕುಮಾರಸ್ವಾಮಿ, ಮಳೆರಾಯ(ವರುಣ) ಗಾಳೆಮ್ಮ, ಜಲದುರುಗಿ ಮತ್ತು ಹನುಮಂತನ ಕುರಿತಾದ ಪ್ರಾರ್ಥನೆ ಮಾಡುವುದಿದೆ.

೨. ಪ್ರಣಯಕ್ಕೆ ಸಂಬಂಧಿಸಿದ ಗೀತೆಗಳಲ್ಲಿ ಗಂಡ-ಹೆಂಡತಿಯರ ಸರಸ-ಸಲ್ಲಾಪಗಳು, ವಿರಸಗಳು, ಗೆಳೆಯ - ಗೆಳತಿಯರ ಶೃಂಗಾರಾಲಾಪಗಳು, ಹುಸಿಮುನಿಸು ಕೋಪಗಳು, ಗಂಡನನ್ನು ತೊರೆದ ಹೆಂಡತಿ ಪರಪುರುಷನ ಸೇರುವುದು ಅಥವಾ ಕೂಡುವುದು. ಹೆಂಡತಿಯನ್ನು ದೂರ ಮಾಡಿ ಪರಸ್ತ್ರೀಯನ್ನು ಸೇರುವ ಗಂಡ, ಮಾವ-ಸೊಸೆಯರ ಪ್ರಣಯಕ್ಕೆ ಸಂಬಂಧಿಸಿದಂತೆ ಇತ್ಯಾದಿಯಾಗಿ ಪ್ರಣಯದ ವಸ್ತುವಿಷಯವನ್ನು ಗಮನಿಸಬಹುದು.

೩. ಹಾಸ್ಯಕ್ಕೆ ಸಂಬಂಧಿಸಿದ ಹಾಡುಗಳಲ್ಲಿ ಮಾವ-ಸೊಸೆ, ಅತ್ತೆ-ಅಳಿಯ, ಸೋದರಳಿಯ-ಸೋದರಮಾವ-ಅತ್ತೆ ಮುಂತಾದವರ ನಡುವಿನ ಜೀವಿತದ ನೈಜ ಸನ್ನಿವೇಶಗಳೇ ಕೋಲುಪದಗಳಲ್ಲಿ ಹಾಸ್ಯಕ್ಕೆ ವಸ್ತುವಿಷಯವಾಗಬಲ್ಲದು ಎಂಬುದನ್ನು ಸೂಚಿಸಲಾಗಿದೆ.

೪. ಸಂಕೀರ್ಣ - ಸಂಬಂಧಿ ಕೋಲಾಟ ಪದಗಳು. ಈ ಗೀತೆಗಳಲ್ಲಿ ಗಂಡು-ಹೆಣ್ಣಿನ ನಡುವೆ ಸ್ವಾಭಿಮಾನ ಪ್ರಶ್ನೆ ಎದುರಾದಾಗ ವಾದ - ಪ್ರತಿವಾದ ಅಥವಾ ಸವಾಲ್-ಜವಾಬ್ ತರಹದ ಪದಗಳು ಸಹ ಕೋಲಾಟಕ್ಕೆ ವಸ್ತುವಾಗುತ್ತದೆ ಎಂದು ಮನಗಾಣಬಹುದು.

ಎಸ್.ಕೆ. ಕರೀಂಖಾನ್ ಸಂಪಾದಿಸಿರುವ 'ಕನ್ನಡ ಜನಪದ ಗೀತೆಗಳು(೧೯೯೪) ಕನ್ನಡ ಕೋಲಾಟ ಪದಗಳ ಸಂಗ್ರಹವಿರುವ ಕೃತಿ ಈ ಹಾಡುಗಳಲ್ಲಿ ದೇವರುಗಳಿಗೆ ಸಂಬಂಧಿಸಿದ

ಹಾಡುಗಳು, ಗೆಳೆಯ - ಗೆಳತಿಯರ ಪ್ರೇಮಕ್ಕೆ ಸಂಬಂಧಿಸಿದ ಹಾಡುಗಳು, ತಾಯಿ-ಮಕ್ಕಳ ವಾತ್ಸಲ್ಯಮಯಿ-ಬಂಧುತ್ವಕ್ಕೆ ಸಂಬಂಧಿಸಿದ ಹಾಡುಗಳು, ಸಾಂಸ್ಕೃತಿಕ ನಾಯಕ-ನಾಯಕಿಯರ ಕುರಿತ ಗೀತೆಗಳು, ಸೊಸೆ - ಮಾವನಿಗೆ ಸಂಬಂಧಿಸಿದ ಗೀತೆಗಳು, ಮಹಾಭಾರತದ ಪಾಂಡವರ ಕುರಿತ ಗೀತೆಗಳು ಮತ್ತು ಬಾಲ್ಯವಿವಾಹವಾದ ಹುಡುಗಿ ಸಣ್ಣ ವಯಸ್ಸಿನಲ್ಲಿ ಗಂಡನನ್ನು ಕಳೆದುಕೊಂಡು ವಿಧವೆಯ ಕುರಿತ ಹಾಡು ಇತ್ಯಾದಿ ದುರಂತಮಯ ವಸ್ತುವಿಷಯಗಳನ್ನು ಈ ಕೃತಿ ಒಳಗೊಂಡಿದೆ.

ಕೋಲಾಟಕ್ಕೆ ಸಂಬಂಧಿಸಿದಂತೆ ಹಾಡುಗಳ ಸಂಗ್ರಹ ಮಾತ್ರವಿದೆ. ಆದರೆ ಕೋಲಾಟದ ಅರ್ಥ, ಸ್ವರೂಪ, ಹಿನ್ನೆಲೆ ಮತ್ತು ಕೋಲು ಹುಯ್ಯುವ ವಿಧಾನ, ಪ್ರಕಾರಗಳು, ಕಲಾವಿದರ ವೇಷಭೂಷಣಗಳು ಮತ್ತಿತರ ಕೋಲಾಟಕ್ಕೆ ಸಂಬಂಧಿಸಿ ಯಾವುದೇ ರೀತಿಯ ಮಾಹಿತಿಯು ನೀಡಿರುವುದಿಲ್ಲ. ಉಳಿದಂತೆ ಸಾಂಸ್ಕೃತಿಕ ನಾಯಕ-ನಾಯಕಿಯರಾದ ಕೆಂಚವ್ವ ಮತ್ತು ಜುಂಜಪ್ಪನನ್ನು ಸ್ತುತಿಸುವ ಗೀತೆಗಳಿವೆ ಮತ್ತು ದೈವಸ್ತುತಿಗೆ ಸಂಬಂಧಿಸಿ ಈಶ್ವರ, ಶಿವ, ಕೃಷ್ಣ, ಬೀರೆದೇವರು, ಆಂಜನೇಯ, ಸರಸ್ವತಿ, ಬಸವಣ್ಣ ಮುಂತಾದ ದೇವರುಗಳನ್ನು ಸ್ತುತಿಸುವ, ಪ್ರಾರ್ಥನೆ ಮಾಡುವ ಗೀತೆಗಳು ಹೆಚ್ಚಾಗಿರುವುದು ಕಂಡುಬರುತ್ತದೆ.

ಸೋಮನಾಥ ನುಚ್ಚಾ ಅವರು ಸಂಪಾದಿಸಿರುವ 'ಕೋಲಾಟದ ಪದಗಳು'(೨೦೦೬) ಕನ್ನಡ ಕೋಲಾಟದ ಪದಗಳ ಸಂಗ್ರಹವಿರುವ ಕೃತಿ. ನುಚ್ಚಾ ಅವರು ಸ್ವತಃ ಸಂಗ್ರಹಿಸಿದ ಕೋಲುಪದಗಳೊಂದಿಗೆ ಇತರ ವಿದ್ವಾಂಸರಾದ ಅರ್ಚಕ ಬಿ. ರಂಗಸ್ವಾಮಿ, ಎಸ್.ವಿ. ರಂಗಣ್ಣ ಮಳಲಿ ವಸಂತಕುಮಾರ, ಎಚ್.ಎಲ್. ನಾಗೇಗೌಡ ಮತ್ತು ಎಸ್.ಪಿ. ಪದ್ಮಪ್ರಸಾದ್ ಮುಂತಾದ ವಿದ್ವಾಂಸರ ಸಂಪಾದನಾ ಕೃತಿಗಳಿಂದ ಆಯ್ದ ಹಲವು ಮಾದರಿಯ ಕೋಲು ಪದಗಳನ್ನು ಸೇರಿಸಿ 'ಕೋಲಾಟದ ಪದಗಳು' ಎನ್ನುವ ಕೃತಿಯನ್ನು ಸಂಪಾದಿಸಿದ್ದಾರೆ.

ಈ ಕೃತಿಯ ಪ್ರಸ್ತಾವನೆಯಲ್ಲಿ ಕೋಲಾಟದ ಅರ್ಥ, ಸ್ವರೂಪ, ಹಿನ್ನೆಲೆ ಮತ್ತು ಪ್ರಾಚೀನತೆಯ ಕುರಿತು ವಿವೇಚಿಸಲಾಗಿದೆ ಮತ್ತು ಭಾರತದಾದ್ಯಂತ ಕೋಲಾಟವು ಪ್ರಸಿದ್ಧಿ ಪಡೆದಿರುವುದಲ್ಲದೆ ಕರ್ನಾಟಕದ ಪ್ರತಿಯೊಂದು ಹಳ್ಳಿಯಲ್ಲೂ ಕೋಲಾಟದ ತಂಡಗಳು ಕಾಣಸಿಗುತ್ತವೆ ಎಂದು ಹೇಳಿರುವುದನ್ನು ಗಮನಿಸಿದರೆ ಈ ಆಟದ ಜನಪ್ರಿಯತೆಯನ್ನು ಮನಗಾಣಬಹುದು.

ಕೋಲುಪದಗಳನ್ನು ವಸ್ತುವೈವಿಧ್ಯತೆಯನುಸಾರ ವಿಭಾಗಿಸಿರುವುದನ್ನು ಈ ರೀತಿಯಾಗಿ ನೋಡಬಹುದಾಗಿದೆ.

೧. ದೇವರು ಸಂಬಂಧಿ ಹಾಡುಗಳು

೨. ಪೌರಾಣಿಕ ಹಾಡುಗಳು

೩. ಪ್ರಣಯ ಹಾಡುಗಳು

೪. ಹಾಸ್ಯ ಹಾಡುಗಳು

೫. ಸಂಕೀರ್ಣ ಸಂಬಂಧಿ ಹಾಡುಗಳು

ಹೀಗೆ ಹಾಡುಗಳನ್ನು ಐದು ಭಾಗಗಳಾಗಿ ವರ್ಗೀಕರಿಸಿಕೊಂಡು ಅವುಗಳಂತೆಯೇ ಕೋಲು ಪದಗಳನ್ನು ಸಂಪಾದಿಸಿದ್ದಾರೆ. ಕೋಲಾಟಕ್ಕೆ ಬಳಸುವ ಪರಿಕರಗಳನ್ನು ಹೆಸರಿಸಿ ಹೇಗೆ ಬಳಸುತ್ತಾರೆ ಎನ್ನುವಂಥ ಮಾಹಿತಿಯನ್ನು ತಿಳಿಸುತ್ತದೆ.

ಮತ್ತಿಘಟ್ಟ ಕೃಷ್ಣಮೂರ್ತಿ ಅವರ 'ಹೊನ್ನಹೊತ್ತಿಗೆ' (೨೦೦೭) ಎಂಬ ಗ್ರಂಥವು ಜನಪದ ಗೀತ ಸಾಹಿತ್ಯಕ್ಕೆ ಸಂಬಂಧಿಸಿದಂಥ ಕೃತಿಯಾಗಿದೆ. ಜನಪದದ ಹಲವು ಪ್ರಕಾರಗಳಾದ ಕೋಲುಪದ, ಬೀಸುವ ಪದಗಳು, ಒಸಗೆ ಮತ್ತು ಸೋಬಾನೆ ಪದಗಳು, ನಾಲ್ಕು ಹಬ್ಬಗಳು, ಬಸವನ ಪೂಜೆ ಹಾಡುಗಳು, ತಿಂಗಳ ಮಾವನ ಪೂಜೆ ಮತ್ತು ಕೊಂತ್ಯಮ್ಮನ ಪೂಜೆಗೆ ಸಂಬಂಧಿಸಿದಂತೆ ಸಂಗ್ರಹಿಸಿರುವ ಜಾನಪದ ಗೀತೆಗಳ ಕೃತಿಯಾಗಿದೆ. ಈ ಕೃತಿಯಲ್ಲಿ ಕೋಲುಪದ, ಬೀಸುವ ಪದಗಳ ಮತ್ತಿತರ ಜನಪದ ಪ್ರಕಾರಗಳನ್ನು ಕುರಿತು ಮತ್ತು ಅವುಗಳ ಅರ್ಥ, ಸ್ವರೂಪ, ಹಿನ್ನೆಲೆ, ಕೋಲು ಪ್ರದರ್ಶನ ಮಾಡುವ ವಿಧಾನ ಇತ್ಯಾದಿ ಅಂಶಗಳ ಕುರಿತು ಸಂಕ್ಷಿಪ್ತ ಪರಿಚಯ ಮಾಡಿಕೊಡುತ್ತದೆ.

ಕೋಲುಪದಗಳಿಗೆ ಸಂಬಂಧಿಸಿದಂತೆ 'ಕೋಲುಪದ' ಎಂಬ ಉಪಶೀರ್ಷಿಕೆಯಿಂದ ಹಾಡುಗಳನ್ನು ಸಂಗ್ರಹಿಸಲಾಗಿದೆ. ಈ ಗೀತೆಗಳಲ್ಲಿ ದೇವರುಗಳನ್ನು ಸ್ತುತಿಸುವ ಹಾಡುಗಳು, ಸಾಂಸ್ಕೃತಿಕ ನಾಯಕರಾದ ಓಬಯ್ಯ, ತಿಪ್ಪೇಸ್ವಾಮಿ, ಕೆಂಗಪ್ಪ, ಜುಂಜಪ್ಪರನ್ನು ಸ್ತುತಿಸುವ ಹಾಡುಗಳು, ಶಕ್ತಿ ದೇವತೆಗಳ ಕುರಿತ ಹಾಡುಗಳು, ಹಾಸ್ಯ, ತಮಾಷೆ, ಪ್ರೇಮ, ಶೃಂಗಾರ ಮತ್ತು ಸಾಮಾಜಿಕ ಸಂದೇಶಗಳನ್ನು ಸಾರುವಂತಹ, ಕೋಲುಪದಗಳನ್ನು ಪ್ರಸ್ತಾಪಿಸಲಾಗಿದೆ.

ಕೋಲಾಟವು ಗುಂಪಿನ ಆಟವಾದ್ದರಿಂದ ಕೋಲುಮೇಳ ಎಂದು ಉಲ್ಲೇಖಿಸಿದ್ದಾರೆ. ಕೋಲು ಹುಯ್ಯುವುದನ್ನು ಹೇಗೆ ಪ್ರದರ್ಶಿಸುತ್ತಾರೆ ಎಂಬುದು ವಿವರಿಸಿದ್ದಾರೆ ಮತ್ತು ಕೋಲು ಪ್ರಕಾರಗಳಾದ ತಾಳಗಡ್ಡಿ, ಹಾರುಗಡ್ಡಿ, ಗೀರುಕಡ್ಡಿ, ಒಂದಾಳು ಸುತ್ತು, ಎರಡಾಳು ಸುತ್ತು, ಬಾಗುಕೋಲು, ತೊಟ್ಟಿಲು ಕೋಲು, ತೇರುಗೋಲು, ಜಡೆಕೋಲು, ವಸ್ತ್ರಗೋಪು, ಚಿತ್ರಗೋಪು, ಚಕ್ರಗೋಪು ಮುಂತಾದ ಕೋಲು ಪ್ರಕಾರಗಳನ್ನು ಹೆಸರಿಸಿದ್ದಾರೆ ಮತ್ತು ಕೋಲುಪದಗಳಲ್ಲಿ ಉತ್ತಮ ಭಾವಗೀತೆಗಳು ಇವೆ ಎಂಬುದನ್ನು ಇದು ತಿಳಿಸುತ್ತದೆ.

ಚಕ್ಕೆರೆ ಶಿವಶಂಕರ್ ಅವರು ಬರೆದಿರುವ 'ದಕ್ಷಿಣ ಕರ್ನಾಟಕ ಜನಪದ ಕಲೆಗಳು'(೨೦೦೮) ಎನ್ನುವ ಕಿರುಹೊತ್ತಿಗೆಯು ಜನಪದ ಕಲೆಗಳ ಬಗೆಗಿನ ಕುರಿತಾಗಿ ಸಂಕ್ಷಿಪ್ತ ಪರಿಚಯ ಮಾಡಿಕೊಡುತ್ತದೆ. ಈ ಹೊತ್ತಗೆಯಲ್ಲಿ ಕರಗ, ಕೀಲುಕುದುರೆ ಕುಣಿತ, ಕೋಲಾಟ, ಗಾರುಡಿಗೊಂಬೆ ಕುಣಿತ, ಪಂಜಿನ ಕುಣಿತ, ತಮಟೆಕುಣಿತ ಮತ್ತು ಪಟಾಕುಣಿತ ಈ ಎಲ್ಲಾ ಪ್ರದರ್ಶನ ಕಲೆಗಳ ಬಗೆಗೆ ಸಂಕ್ಷಿಪ್ತ ಪರಿಚಯ ಮಾಡಿಕೊಡುತ್ತದೆ.

ಕೋಲಾಟಕ್ಕೆ ಸಂಬಂಧಿಸಿದಂತೆ ಕೋಲು ಹುಯ್ಯುವ ವಿಧಾನ. ಕೋಲುಕಡ್ಡಿಗಳನ್ನು ತಯಾರಿಸಲು ಬಳಸುವ ಗಿಡ-ಮರಗಳ ಬಗೆಗೆ ಮಾಹಿತಿ ನೀಡುತ್ತದೆ.

ಕೋಲು ಹುಯ್ಯುವ ಕಲಾವಿದರರ ವೇಷಭೂಷಣಗಳ ಕುರಿತು ಮತ್ತು ಕೋಲಾಟದ ಪ್ರಕಾರಗಳಾದ ಗೀರುಕೋಲು, ಜಡೇಕೋಲು, ಉಯ್ಯಾಲೆಕೋಲು, ಕೊರವಂಜಿ ಕೋಲು, ಸುತ್ತುಕೋಲು, ಹಾರ್‌ಗಡ್ಡಿ, ಗೆಜ್ಜೆಕೋಲು, ಚಿತ್ತಾರದ ಕೋಲು, ತೇರುಕೋಲು, ಕತ್ತಿಕೋಲು, ನೀರುಕೋಲು ಮುಂತಾದ ಹಲವು ಪ್ರಕಾರಗಳಿವೆ ಎಂಬುದನ್ನು ಸೂಚಿಸಿದ್ದಾರೆ. ಹಾಗೆಯೇ ವಸ್ತುವಿಷಯಕ್ಕೆ ಸಂಬಂಧಿಸಿದಂತೆ ಪ್ರಣಯ, ವಿನೋದ, ಶೃಂಗಾರ ಮತ್ತು ದುರಂತ ಕಥೆ ವಸ್ತುಗಳನ್ನು ಒಳಗೊಂಡ ಕೋಲುಪದಗಳು ಕೋಲಾಟದ ಅವಿಭಾಜ್ಯ ಅಂಗವಾಗಿವೆ ಎಂದು ತಿಳಿಸಿದ್ದಾರೆ.

ಕೋಲಾಟದ ಪ್ರಮುಖ ಪ್ರಕಾರಗಳಾದ ಜಡೆಕೋಲಾಟ ಮತ್ತು ಕೊರವಂಜಿ ಕೋಲಾಟವನ್ನು ಹೇಗೆ ಪ್ರದರ್ಶನ ಮಾಡುತ್ತಾರೆ ಎಂಬ ಮಾಹಿತಿಯನ್ನು ಇಲ್ಲಿ ಮನಗಾಣಬಹುದು. ಕೋಲಾಟದ ಕುರಿತ ಎಲ್ಲಾ ರೀತಿಯ ಸಂಪೂರ್ಣ ಮಾಹಿತಿಯನ್ನು ನೀಡದಿದ್ದರೂ ತಕ್ಕಮಟ್ಟಿನ ಮಾಹಿತಿಯನ್ನು ನೀಡುತ್ತದೆ.

ಎಸ್.ಎಸ್. ಅಂಗಡಿ ಅವರು ಬರೆದಿರುವ 'ಜನಪದ ಸಾಹಿತ್ಯ ಭಾಷೆ'(೨೦೦೮) ಎನ್ನುವ ಕೃತಿಯು ಹಲವು ಜಾನಪದ ಲೇಖನಗಳ ಸಂಗ್ರಹವಿರುವ ಕೃತಿ. ಈ ಕೃತಿಯಲ್ಲಿ 'ಕೋಲು ಮತ್ತು ಹೋಳಿ ಪದಗಳು: ಭಾಷೆಯ ರಚನೆ' ಎನ್ನುವಂಥ ಲೇಖನದಲ್ಲಿ ಕೋಲಾಟದ ಅರ್ಥ, ಸ್ವರೂಪ ಮತ್ತು ಕೋಲಾಟ ಪ್ರದರ್ಶನವನ್ನು ಕಲಾವಿದರು ಹೇಗೆ ನಿರ್ವಹಿಸುತ್ತಾರೆ ಮತ್ತು ಕೋಲಾಟದಲ್ಲಿ ಎಂಟು ಇಲ್ಲವೆ ಹನ್ನೆರಡು ಮಂದಿ ಕಲಾವಿದರು ಇದ್ದರೆ ಸೂಕ್ತ ಎನ್ನುವ ಅಂಶಗಳನ್ನು ಇಲ್ಲಿ ಗಮನಿಸಬಹುದಾಗಿದೆ.

ಕೋಲುಪದಗಳಲ್ಲಿ ಯಾವುದೇ ನಡೆದ ಘಟನೆಯೂ ಕೂಡ ವಸ್ತುವಾಗಬಹುದು, ಐತಿಹಾಸಿಕ ವಾಗಿರಬಹುದು, ಪೌರಾಣಿಕವಾಗಿರಬಹುದು ಅಥವಾ ಮುಂದೆ ನಡೆಯುವಂಥ ಕಾಲಜ್ಞಾನವೂ ಆಗಿರಬಹುದು. ಅಂಥ ಯಾವುದೇ ಘಟನೆಗಳಾಗಿರಲಿ, ಯಾವುದೇ ವಸ್ತುವಾಗಿರಲಿ, ಶೃಂಗಾರ, ಪ್ರಣಯ, ಹಾಸ್ಯ, ದುರಂತ, ದೈವಸ್ತುತಿ ಯಾವುದೇ ಇರಲಿ ಕೋಲುಪದಗಳಲ್ಲಿ ಪ್ರಸ್ತುತ ಪಡಿಸಬೇಕೆಂಬುದೇ ಕೋಲು ಮೇಳಗಾರರ ಅಥವಾ ಕೋಲು ಕಲಾವಿದರ ಉದ್ದೇಶ ಎಂಬುದನ್ನು ಇಲ್ಲಿ ಪ್ರಸ್ತಾಪಿಸಿದ್ದಾರೆ.

ಕೋಲಾಟವು ಕರ್ನಾಟಕದಾದ್ಯಂತ ಪ್ರಸಿದ್ಧಿ ಪಡೆದ ಕಲೆಯಾಗಿದೆ ಎಂಬುದನ್ನು ಹೇಳಿದ್ದಾರೆ. ಹಾಗೆಯೇ ಉತ್ತರ ಕರ್ನಾಟಕದ ಕೋಲು ಪ್ರಕಾರಗಳನ್ನು ಹೆಸರಿಸಿದ್ದಾರೆ. ಅವುಗಳು ಇಂತಿವೆ. ಸಣ್ಣಕೋಲು, ಅಡ್ಡಕೋಲು, ಕತ್ತರಿಕೋಲು, ಸುತ್ತುಕೋಲು, ಮೂರಾಳಿನ ಕೋಲು, ಒಂದು ಸಾಲಿನ ಕೋಲು, ಪಳಿತುಕೋಲು, ಇನ್ನೂ ಮುಂತಾದ ಹಲವು ಪ್ರಕಾರಗಳಿವೆ ಎಂದು ಸೂಚಿಸಿದ್ದಾರೆ. ಹಾಗೆಯೇ ಲೇಖನದಲ್ಲಿ ಕೆಲವೊಂದು ಕೋಲು ಪದಗಳನ್ನು ಉದಾಹರಣೆ ಸಮೇತ ನೀಡಿ ಉತ್ಸಾಹದ ಮಟ್ಟುವಿನಲ್ಲಿ ದ್ವಿಪದಿಯಲ್ಲಿ ಕೋಲುಪದಗಳು ಸಾಗುತ್ತವೆ ಎಂಬುದನ್ನು ವಿವರಿಸಿದ್ದಾರೆ.

ಮುತ್ತಯ್ಯ ಎಸ್.ಎಸ್. ಅವರು ಸಂಪಾದಿಸಿರುವ 'ಬಡಗಿ ಕಟ್ಟಿದ ಬೆಡಗಿನ ಮಾಳಿಗೆ'(೨೦೧೨) ಕೃತಿಯು ಕನ್ನಡ-ತೆಲುಗು ಕೋಲಾಟ ಪದಗಳ ಸಂಗ್ರಹವಿರುವುದಾಗಿದೆ. ಈ ಕೋಲುಪದಗಳನ್ನು ಸಂಪಾದಕರು ಆಂಧ್ರದ ಗಡಿಭಾಗಕ್ಕೆ ಹೊಂದಿಕೊಂಡಿರುವ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನ ನೆಲಗೇತನಹಟ್ಟಿ ಎನ್ನುವ ಒಂದು ಹಳ್ಳಿಯಲ್ಲಿ ಸಂಪಾದಿಸಿದ್ದಾರೆ. ಈ ಹಟ್ಟಿಯಲ್ಲಿ ಮ್ಯಾಸಬೇಡ ಬುಡಕಟ್ಟಿನವರು ವಾಸ ಮಾಡುತ್ತಿದ್ದು ಜೊತೆಗೆ ಮಾದಿಗರು ನೆಲೆಸಿದ್ದಾರೆ. ಇಲ್ಲಿ ಕನ್ನಡ - ತೆಲುಗು ಎರಡನ್ನೂ ಸಮಪ್ರಮಾಣವಾಗಿ ಮಾತನಾಡುತ್ತಾರೆ. ಈ ಎರಡೂ ಸಮುದಾಯದವರು ಎರಡೂ ಭಾಷೆಗಳನ್ನು ಮಾತನಾಡುವುದಿದೆ ಮತ್ತು ಈ ಪ್ರಾಂತಗಳಲ್ಲಿ ತೆಲುಗು - ಕನ್ನಡ ಎರಡು ಭಾಷೆಗಳಲ್ಲಿ ಕೋಲುಪದಗಳನ್ನು ಹಾಡುತ್ತಾರೆ ಮತ್ತು ಪ್ರದರ್ಶನ ಮಾಡುವುದಿದೆ.

ಪ್ರಮುಖವಾಗಿ ಇಲ್ಲಿನ ಹಾಡುಗಳನ್ನು ಎಂಟು ಭಾಗಗಳಾಗಿ ವರ್ಗೀಕರಿಸಲಾಗಿದೆ.

೧. ಸ್ತುತಿ ಪದಗಳು

೨. ತಾಳಪುಕಡ್ಡಿ ಪದಗಳು

೩. ಹೆಜ್ಜೆ ಕೋಲುಪದಗಳು

೪. ವಿಶಿಷ್ಟ ಕೋಲಾಟಪದಗಳು

೫. ಮುತ್ತಯ್ಯಗಳ ಕೋಲಾಟ ಪದಗಳು

೬. ಕೊಂಡಾಡುವ ಪದಗಳು

೭. ಮಂಗಳಾರತಿ ಪದಗಳು

೮. ದೇವರ ಪದಗಳು

ಹೀಗೆ ಸಂಪಾದಕರು ಕೋಲುಪದಗಳನ್ನು ಎಂಟು ಭಾಗಗಳಾಗಿ ವಿಂಗಡಿಸಿ ಅವುಗಳನ್ನು ಸಂಗ್ರಹಿಸಿಕೊಡಲಾಗಿದೆ.

ಕೋಲು ಹುಯ್ಯುವ ಪ್ರತಿ ತಂಡದಲ್ಲಿ ಹೊರಗಿನ ಗುಂಪು, ಒಳಗಿನ ಗುಂಪು ಎಂಬುದಾಗಿ ಎರಡು ಗುಂಪುಗಳಿರುವುದಾಗಿ ಹೇಳುತ್ತಾ, ಎರಡೂ ಗುಂಪಿನವರೂ ಕೋಲು ಬಡಿಯುತ್ತಾ, ಹಾಡುತ್ತಾ, ಮಂಡಲಾಕಾರದಲ್ಲಿ ಕುಣಿತವು ಸಾಗುತ್ತದೆ ಎಂದು ಕೋಲಾಟದ ಸಾಮಾನ್ಯ ಸ್ವರೂಪವನ್ನು ವಿವರಿಸಿದ್ದಾರೆ. ಹಾಗೆಯೇ ಕೋಲು ಹುಯ್ಯುವ ವಿಧಾನದಲ್ಲಿ ಕೋಲು ಪ್ರಕಾರಗಳನ್ನು ಹೀಗೆ ಹೆಸರಿಸಿದ್ದಾರೆ. ಅವುಗಳು ತಾಳಗಡ್ಡಿ, ಗೀರ್‌ಕಡ್ಡಿ, ಎತ್ತುಗಡ್ಡಿ, ಹೆಜ್ಜೆಕೋಲುಕಡ್ಡಿ, ಮುತ್ತಯ್ಯಗಳ ಕೋಲುಕಡ್ಡಿ ಎನ್ನುವ ಕ್ರಮಗಳಿವೆ ಎಂದು ಹೇಳುತ್ತಾ, ಪ್ರತಿ ಕೋಲಾಟವು ತಾಳಪುಕಡ್ಡಿ ಹಾಡುಗಳಿಂದ ಆರಂಭಗೊಳ್ಳುತ್ತದೆ ಎಂದು ತಿಳಿಸಿದ್ದಾರೆ. ತಾಳಪುಕಡ್ಡಿ ಕೋಲಾಟದಲ್ಲಿ ನಿಧಾನಗತಿಯ ನೃತ್ಯ ಜೊತೆಗೆ ಹಾಡುಗಳು ಪ್ರಧಾನವಾಗಿರುತ್ತವೆ. ಇದಾದ ನಂತರ ನೃತ್ಯ ಹಾಗೂ ಹಾಡುಗಳು ವೇಗ ಪಡೆದು ತೀವ್ರಗತಿಯ ಸ್ಥಿತಿಯನ್ನು ತಲುಪುತ್ತವೆ ಎಂಬುದಾಗಿ ಪ್ರಸ್ತಾಪಿಸಲಾಗಿದೆ.

ಹಾಡುಗಳನ್ನು ಸಂಗ್ರಹಿಸಿರುವ ಹಟ್ಟಿಯಲ್ಲಿನ ಜನರು ಕನ್ನಡ ಮಿಶ್ರಿತ ತೆಲುಗು ಭಾಷೆ ಮಾತನಾಡುವುದಿದೆ. ಮ್ಯಾಸಬೇಡರ ಮನೆಮಾತು ತೆಲುಗು ಹಾಗೂ ವ್ಯವಹಾರಿಕ ಮಾತು ಕನ್ನಡ. ಹಾಗಾಗಿ ಈ ಎರಡೂ ಭಾಷೆಗಳ ಮಿಶ್ರಣದಿಂದಾದ ಭಾಷೆಯನ್ನು ಭಾಷಾ ವಿಜ್ಞಾನಿಗಳು ಮತ್ತು ಜಾನಪದ ತಜ್ಞರು 'ಕಂದೆಲುಗು' ಎಂದು ಕರೆದಿರುವುದಿದೆ. ಕಂದೆಲುಗು ಭಾಷಿಕರಾದ ಮ್ಯಾಸಬೇಡರೆ ಹಾಡಿರುವ ಕೋಲುಪದಗಳನ್ನು ಈ ಹಟ್ಟಿಯಲ್ಲಿ ಸಂಗ್ರಹಿಸಿರುವುದನ್ನು ಮನಗಾಣಬಹುದು ಮತ್ತು ಗಡಿಭಾಗದ ಜನರು ದ್ವಿಭಾಷಿಕರು ಮತ್ತು ಬಹುಸಂಸ್ಕೃತಿಯನ್ನು ಒಳಗೊಂಡವರು ಎಂಬುದಕ್ಕೆ ಇದೊಂದು ಉದಾಹರಣೆ ಎಂದು ತಿಳಿಯಬಹುದು. ಹಟ್ಟಿಯಲ್ಲಿ ಸಂಪಾದಿಸಿರುವ ತೆಲುಗು ಹಾಡುಗಳನ್ನು ಕನ್ನಡ ಭಾಷಿಕರ ಅರ್ಥ ಗ್ರಹಿಕೆಗೆ ಯಾವುದೇ ರೀತಿಯ ತೊಂದರೆಯಾಗದಂತೆ ಕನ್ನಡದಲ್ಲಿಯೇ ನೀಡಲಾಗಿದೆ ಹಾಗೂ ತೆಲುಗಿನ ಪದಗಳಿಗೆ ಕನ್ನಡ ಲಿಪಿಯನ್ನು ಬಳಸಿರುವುದನ್ನು ಕಾಣಬಹುದಾಗಿದೆ.

ಎನ್. ಮೋಹನ್‌ಕುಮಾರ್ ಅವರು ಸಂಪಾದಿಸಿರುವ 'ಕಾಡುಗೊಲ್ಲರ ಕೋಲಾಟದ ಪದಗಳು' (೨೦೧೩) ಕನ್ನಡ ಕೋಲಾಟ ಪದಗಳು ಸಂಗ್ರಹವಿರುವ ಕೃತಿ. ಇಲ್ಲಿ ಕಾಡುಗೊಲ್ಲ ಬುಡಕಟ್ಟು ಸಮುದಾಯದ ರೂಢಿ-ಸಂಪ್ರದಾಯಗಳ ಪ್ರತೀಕದಂತಿರುವ ಕೋಲುಪದಗಳನ್ನು ಸಂಗ್ರಹಿಸಿದ್ದಾರೆ. ಜೊತೆಗೆ ಅವರ ಆಚರಣೆಗಳು, ಉಡುಗೆ-ತೊಡುಗೆ, ಹಬ್ಬ-ಹರಿದಿನ, ಕ್ರೀಡೆ, ರೂಢಿ, ಸಂಪ್ರದಾಯಗಳು ಮತ್ತು ಅವರ ಜೀವನ ಶೈಲಿ, ಒಟ್ಟಾರೆ ಸಂಸ್ಕೃತಿಯನ್ನು ಅವರದೇ ಕೋಲಾಟ ಪದಗಳ ಮುಖಾಂತರ ಅನಾವರಣಗೊಳಿಸಿದ್ದಾರೆ. ಹಾಗೆಯೇ ಕೋಲುಪದಗಳನ್ನು ೧. ದೇವರ ಪದಗಳು, ೨. ಕೊರವಂಜಿ ಪದಗಳು, ೩. ತಮಾಷೆಯ ಪದಗಳು, ೪. ಇತರ ಪದಗಳು ಎಂದು ನಾಲ್ಕು ಭಾಗಗಳಾಗಿ ವರ್ಗೀಕರಿಸಿದ್ದಾರೆ.

ಕೋಲುಪದಗಳಿಗೆ ಶೀರ್ಷಿಕೆಯನ್ನು ನೀಡುತ್ತಾ ಶೀರ್ಷಿಕೆಯ ಕೆಳಭಾಗದಲ್ಲಿ ಕೋಲಾಟದ ಬಗೆಗಳನ್ನು ಸೂಚಿಸಿದ್ದಾರೆ ಅವುಗಳು ಇಂತಿವೆ. ತಾಳಗಡ್ಡಿ, ಪರ್ಲು ಅಥವಾ ಚೋಳೂರಬಾವಿ, ಎಡಗೈಚಿಟ್ಕಿ ಬಲಗೈಚಿಟ್ಕಿ, ಜೋಡುಮಲ್ಕು, ತಾಳುವರಸೆಕೋಲು, ಗೀರ್ಕಡ್ಡಿಕೋಲು, ಒಂಟು ವರಸೆ ಕೋಲು, ಕಾಲಡೆ ಕೋಪು, ಜೋಡು ಒಂಟ್ಕೋಲು, ಹೆಜ್ಜಡ್ಡಿ ಮುಕ್ತಾಯ, ಒಂಟ್ಯಾಗು, ಚಿಕ್ಕುಡಾಗರ ಕೋಪು, ಜೋಡು-ಚಿಂತಾಮಣಿ, ಕೊರವಂಜಿಕೋಲು ಮತ್ತು ಆರ್ಗಡ್ಡಿ ಕೋಲು, ಹೀಗೆ ಸುಮಾರು ಇಪ್ಪತ್ತು ಪ್ರಕಾರದ ಕೋಲಿನ ವರಸೆಗಳನ್ನು ಸೂಚಿಸಿದ್ದಾರೆ.

ಈ ಕೋಲುಪದಗಳಲ್ಲಿ ಶೃಂಗಾರ, ಪ್ರಣಯ, ಮಾವ-ಸೊಸೆಯರ ಸರಸ-ಸಲ್ಲಾಪ, ಗಂಡ-ಹೆಂಡತಿಯರ ಸರಸ-ವಿರಸ, ದೈವಸ್ತುತಿಯಂಥ ವಸ್ತುವೈವಿಧ್ಯತೆಯನ್ನು ಸೂಚಿಸುವ ಗೀತೆಗಳಿವೆ. ಕೃತಿಯ ಕೊನೆಯ ಭಾಗದಲ್ಲಿ ಕೋಲುಪದಗಳಲ್ಲಿನ ಕಠಿಣ ಪದಗಳ ಅರ್ಥವನ್ನು ಸೂಚಿಸಿದ್ದು ಓದುಗರಿಗೆ-ಹಾಡುಗರಿಗೆ ತಿಳಿಯಲು ಸುಲಭವಾಗಿಸಿದೆ ಮತ್ತು ಕೃತಿಯಲ್ಲಿ ಕೋಲಾಟದ ಪ್ರದರ್ಶನ ಕುರಿತು, ಕೋಲು ಹುಯ್ಯುವ ಕಲಾವಿದರ ವೇಷಭೂಷಣ ಇತ್ಯಾದಿ ಅಂಶಗಳ ಕುರಿತಾಗಿ ಪ್ರಸ್ತಾಪ ಮಾಡಿರುವುದಿಲ್ಲ.

ಪುರುಷೋತ್ತಮ ಬಿಳಿಮಲೆ ಅವರು ಬರೆದಿರುವ 'ಹಂಪಿ ಜಾನಪದ'(೧೯೯೬) ಕೃತಿಯಲ್ಲಿ ಹಂಪಿ ಸುತ್ತಮುತ್ತಲ ಪ್ರಾಂತಗಳಲ್ಲಿ ಕೋಲಾಟವು ತುಂಬಾ ಜನಪ್ರಿಯತೆ ಪಡೆದಿದೆ ಎಂಬುದನ್ನು ವಿವೇಚಿಸುತ್ತದೆ. ಕೋಲಾಟ ಪ್ರದರ್ಶನವನ್ನು, ಹಬ್ಬ-ಹರಿದಿನ, ಉತ್ಸವ ಜಾತ್ರೆ ಮುಂತಾದ ಸಾಂಸ್ಕೃತಿಕ ಆಚರಣೆಗಳ ಸಂದರ್ಭದಲ್ಲಿ ಆಡುವುದಿದೆ ಎಂಬುದನ್ನೂ ಪ್ರಸ್ತಾಪಿಸಲಾಗಿದೆ. ಗೌರಿ ಹುಣ್ಣಿಮೆಯ ಸಮಯದಲ್ಲಿ ಚಿಕ್ಕ, ಚಿಕ್ಕ ಹೆಣ್ಣುಮಕ್ಕಳು, ಗೌರಿ ಹುಣ್ಣಿಮೆ ಪದಗಳನ್ನು ಹಾಡುತ್ತಾ, ಓಣಿಗಳಲ್ಲಿ ಕೋಲು ಹಾಕುತ್ತಾ, ಮನೆ ಮನೆಗೆ ಹೋಗಿ ಹಣ ಸಂಗ್ರಹಿಸುತ್ತಾರೆ ಮತ್ತು ಹಂಪಿ ಸುತ್ತಮುತ್ತಲ ಪ್ರದೇಶಗಳಾದ, ಮರಿಯಮ್ಮನಹಳ್ಳಿ, ನಾಗಲಾಪುರ, ಗರಗ, ರಾಮಸಾಗರ, ಬುಕ್ಕಸಾಗರ, ವೆಂಕಟಾಪುರ ತಾಂಡ, ಇತ್ಯಾದಿ ಪ್ರದೇಶಗಳಲ್ಲಿ ಈಗಲೂ ಮಹಿಳೆಯರೂ ಕೋಲಾಟವಾಡುತ್ತಾರೆ ಹಾಗೂ ಹಂಪಿಯ ದೇಗುಲಗಳಲ್ಲಿ ಹೆಣ್ಣುಮಕ್ಕಳು ಕೋಲಾಟವಾಡುವ ಚಿತ್ರಗಳನ್ನು ಕೆತ್ತಲಾಗಿದೆ. ಅವುಗಳು ವಿರೂಪಾಕ್ಷ ದೇವಾಲಯ, ಮಹಾನವಮಿದಿಬ್ಬ, ಹಜಾರರಾಮಸ್ವಾಮಿ ದೇವಾಲಯ, ಹಳೇಪಟ್ಟಣದ ಕೆಲವು ಕಟ್ಟಡಗಳ ತಳಭಾಗಗಳಲ್ಲಿ ಕೋಲಾಟವಾಡುವ ಭಂಗಿಯಿದೆ.

ಹಂಪಿಯ ಸುತ್ತಮುತ್ತಲ ಪ್ರದೇಶಗಳ ಕೋಲಾಟದ ವಿಶೇಷತೆಯನ್ನು ಲೇಖಕರು ಇಲ್ಲಿ ವಿವೇಚಿಸಿದ್ದಾರೆ. ಅದೇನೆಂದರೆ ಕೋಲಾಟದಲ್ಲಿ ಆರು, ಎಂಟು, ಹತ್ತು ಮತ್ತು ಹನ್ನೆರಡು ಮಂದಿ ಕಲಾವಿದರಿದ್ದು, ಪ್ರಮುಖವಾಗಿ ಎರಡು ಗುಂಪುಗಳಿರುತ್ತವೆ. ಮೊದಲನೆಯದು ಕೋಲಾಟವಾಡುವವರು, ಎರಡನೆಯದು ಕೋಲಾಟದ ಹಾಡುಗಳನ್ನು ಹಾಡುವವರು ಎಂಬುದಾಗಿ ಪ್ರಸ್ತುತ ಪಡಿಸಲಾಗಿದೆ. ಹಾಗೆಯೇ ಕೋಲುಕಡ್ಡಿಗಳನ್ನು ಶ್ರೀಗಂಧ, ಹೊನ್ನೆ, ಬೈನೆ, ಕಾರೆ, ಕೊಡಸು ಮುಂತಾದ ಮರಗಳಿಂದ ಸಿದ್ಧಪಡಿಸುತ್ತಾರೆ ಎಂಬುದಾಗಿ ತಿಳಿಸಲಾಗಿದೆ ಮತ್ತು ಕೋಲಾಟದ ಹಾಡುಗಳಲ್ಲಿ, ರಾಮಾಯಣ, ಮಹಾಭಾರತ, ಪೌರಾಣಿಕ, ಸಮಕಾಲೀನ ಜೀವನದ ತತ್ವಾದರ್ಶಗಳಂಥ ಸಂಗತಿಗಳು, ಹಾಸ್ಯ, ಕರುಣೆ, ರೌದ್ರ, ಪ್ರೇಮ, ಕಾಮ, ಸಂತೋಷ ಮತ್ತು ಪ್ರೇಮಿಗಳ ವಿರಹವೇದನೆ, ಗಂಡ-ಹೆಂಡಿರ ಸರಸ-ಸಲ್ಲಾಪಗಳು ಮುಂತಾದವುಗಳು ಕೋಲುಪದಗಳಲ್ಲಿ ವಸ್ತುವಿಷಯವಾಗಿರುವುದನ್ನು ಪ್ರಸ್ತಾಪಿಸಲಾಗಿದೆ. ಹಾಗೆಯೇ ಕೋಲಾಟದ ವಿವಿಧ ಪ್ರಕಾರಗಳನ್ನು ಹೆಸರಿಸಲಾಗಿದೆ.

ಹಂಪಿಯ ಸುತ್ತಮುತ್ತಲ ಪ್ರಾಂತಗಳಲ್ಲಿ ಸಂಗ್ರಹಿಸಿದ ಕೋಲುಪದಗಳನ್ನು ಉದಾಹರಣೆ ಸಮೇತ ನೀಡಲಾಗಿದ್ದು, ಈ ಹಾಡುಗಳಲ್ಲಿ ಹಂಪೆಯ ವಿರೂಪಾಕ್ಷ, ಗಾಳೆಮ್ಮ, ದುರುಗಮ್ಮ, ಸರಸ್ವತಿ, ಹನುಮಂತ ಅಥವಾ ಆಂಜನೇಯ, ಆನೆಗೊಂದಿ ಮುಂತಾದ ದೇವರುಗಳ ಕುರಿತು ಸ್ತುತಿಸಿರುವ ಕೋಲುಪದಗಳನ್ನು ಸಂಗ್ರಹಿಸಿಕೊಡಲಾಗಿದೆ. 'ಉದ್ದಾನೆಹನುಮಂತ' ಎನ್ನುವ ಕೋಲುಪದದಲ್ಲಿ ಪ್ರಸ್ತುತ ವೀರಭದ್ರನ ದೇವಸ್ಥಾನವು ಹಿಂದೆ ಹನುಮಂತ ದೇವರು ನೆಲೆಸಿರುವ ಸ್ಥಳವಾಗಿತ್ತು. ಕ್ರಮೇಣ ಹನುಮಂತನ ವಿಗ್ರಹವನ್ನು ತೆಗೆದು ಹಾಕಿ ವೀರಭದ್ರನ ವಿಗ್ರಹಗಳನ್ನು ಪ್ರತಿಷ್ಠಾಪಿಸಿರಲು ಸಾಧ್ಯವಿದೆ ಎಂಬುದನ್ನು ಕೋಲುಪದಗಳಂಥ ಸಾಹಿತ್ಯದಲ್ಲಿ ತಿಳಿಯಬಹುದು ಎಂಬುದನ್ನು ಇಲ್ಲಿ ಮನಗಾಣಬಹುದಾಗಿದೆ.

ಮಂಜುನಾಥ ಬೇವಿನಕಟ್ಟಿ ಅವರು ಬರೆದಿರುವ 'ದೇಸಿ ಚಹರೆ'(೨೦೦೪) ಕೃತಿಯಲ್ಲಿ ಜನಪದ ಕಲೆ, ಜನಪದ ಚಿತ್ರಕಲೆ, ನಂಬಿಕೆಗಳ ಬಗೆಗೆ ವಿವೇಚಿಸಲಾಗಿದೆ ಹಾಗೂ ಬಳ್ಳಾರಿ ಜಿಲ್ಲಾ ಜನಪದ ಕಲೆಗಳ ಕುರಿತು ಪ್ರಸ್ತಾಪಿಸುತ್ತಾ ಸಮೃದ್ಧಿ ಮತ್ತು ಫಲವಂತಿಕೆಯ ಆರಾಧನೆಯ ಕಲೆಗಳ ಕುರಿತಾಗಿ ಹೇಳುವಾಗ ಕೋಲಾಟದ ಪ್ರಸ್ತಾಪ ಮಾಡಲಾಗಿದೆ. ಕೋಲಾಟವನ್ನು ಫಲವಂತಿಕೆ ಮತ್ತು ಸಮೃದ್ಧಿಯ ಹಿನ್ನೆಲೆಯಲ್ಲಿ ಪ್ರದರ್ಶನ ಮಾಡುತ್ತಾರೆ ಎಂಬುದನ್ನು ಇಲ್ಲಿ ವಿವೇಚಿಸಲಾಗಿದೆ. ಹಾಗೆಯೇ ಕೋಲಾಟದ ಅರ್ಥ, ಸ್ವರೂಪ ಇವುಗಳ ಕುರಿತು ಪ್ರಸ್ತಾಪ ಮಾಡಲಾಗಿದೆ. ಕೋಲುಪದಗಳು ಮತ್ತು ಕೋಲು ಹುಯ್ಯುವ ವೈವಿಧ್ಯತೆಗಳ ಬಗೆಗೂ ವಿವೇಚಿಸಲಾಗಿದೆ.

ಎಂ.ಜಿ. ನಾಗರಾಜ ಅವರ 'ಕೊಡಗಿನ ಸಾಂಸ್ಕೃತಿಕ ಜಾನಪದ ನೆಲೆಗಳು(೨೦೧೦) ಎನ್ನುವಂಥ ಕೃತಿಯ 'ಹುತ್ತರಿ ಮತ್ತು ಹುತ್ತರಿ ಕೋಲಾಟ' ಎಂಬ ಲೇಖನದಲ್ಲಿ ಕೋಲಾಟದ ಕುರಿತು ಪ್ರಸ್ತಾಪಿಸಲಾಗಿದೆ. ಹುತ್ತರಿ ಹಬ್ಬದ ಸಮಯದಲ್ಲಿ ಕೋಲಾಟ ಪ್ರದರ್ಶನ ಮಾಡುವುದರಿಂದ 'ಹುತ್ತರಿ ಕೋಲು' ಎಂದು ವ್ಯಾಖ್ಯಾನಿಸಲಾಗಿದೆ. ಕೋಲಾಟದ ಅರ್ಥ, ಸ್ವರೂಪ ಕುರಿತು ವಿವೇಚಿಸುತ್ತಾ ಕೋಲಾಟಕ್ಕೆ ಬಳಸುವ ಕೋಲುಕಡ್ಡಿಗಳು, ತಾಳ, ಗೆಜ್ಜೆ ಮತ್ತು ಡೋಲನ್ನು ವಿಶೇಷವಾಗಿ ಬಳಕೆ ಮಾಡುವುದಿದೆ ಎಂಬುದರ ಕುರಿತು ಪ್ರಸ್ತಾಪಿಸಲಾಗಿದೆ. ಹಾಗೆಯೇ ಕೊಡಗಿನ ಕೋಲಾಟವು ಇತರೆ ಕೋಲಾಟಗಳಿಗಿಂತ ಭಿನ್ನ ಎಂಬುದನ್ನು ಇಲ್ಲಿ ತಿಳಿಸಿಕೊಡಲಾಗಿದೆ. ಕೋಲಾಟ ಪ್ರದರ್ಶನ ಮಾಡುವ ಕಾಲಕ್ಕೆ ಕೋಲು ಹುಯ್ಯುವ ಕಲಾವಿದರು ನಾಲ್ಕು ಸುತ್ತುಗಳಲ್ಲಿ ತಿರುಗುತ್ತಾ ಕೋಲು ಹುಯ್ಯುತ್ತಾ ಪ್ರದರ್ಶನವು ಮುಂದುವರೆಯುತ್ತದೆ ಎಂಬುದು ಛಾಯಾಚಿತ್ರಗಳನ್ನು ನೀಡುವುದರ ಮುಖಾಂತರ ವಿವೇಚಿಸಿರುವುದು ಕಂಡುಬರುತ್ತದೆ.

ಆರ್ವಿಯಸ್ ಸುಂದರಂ ಅವರು 'ಬಿ. ರಾಮರಾಜು ಅವರ ತೆಲುಗಿನ ಕೃತಿಯನ್ನು 'ಆಂಧ್ರಪ್ರದೇಶದ ಜಾನಪದ'(೧೯೮೭) ಎಂಬ ಹೆಸರಿನಿಂದ ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಈ ಕೃತಿಯಲ್ಲಿ ಆಂಧ್ರಪ್ರದೇಶದ ಜನಪದ ಪ್ರದರ್ಶನ ಕಲೆಗಳನ್ನು ಮತ್ತು ಆಂಧ್ರದ ಹಬ್ಬ-ಹರಿದಿನಗಳು, ಜಾತ್ರೆಗಳು ಇತ್ಯಾದಿ ಸಾಂಸ್ಕೃತಿಕ ಆಚಾರ-ವಿಚಾರ, ರೂಢಿ, ಸಂಪ್ರದಾಯಗಳ ಕುರಿತು ವಿವೇಚಿಸಲಾಗಿದೆ. ನಂತರ ಕೋಲಾಟದ ಕುರಿತು "ಜನಪದ ಸಂಗೀತ ಹಾಗೂ ನೃತ್ಯ' ಎನ್ನುವ ಒಂದು ಲೇಖನದಲ್ಲಿ ಕೋಲಾಟವನ್ನು ನೃತ್ಯ ಮಾದರಿಯ ಕಲೆಗಳ ಜೊತೆ ಪ್ರಸ್ತಾಪ ಮಾಡಿರುವುದಿದೆ.

ನೃತ್ಯ ಗ್ರಂಥಗಳಲ್ಲಿ ದಂಡಿಕಾ ಹಾಗೂ ದಂಡಲಾಸ್ಯ ಹೆಸರಿನಿಂದ ಕರೆಯುತ್ತಾರೆ. ಈ ಆಟವು ಆಂಧ್ರ ಮತ್ತು ಕರ್ನಾಟಕ ರಾಜ್ಯಗಳಲ್ಲಿ ಸಾಮಾನ್ಯವಾಗಿ ಕಂಡು ಬರುತ್ತದೆ ಎಂಬ ವಿಚಾರ ಕುರಿತು ಪ್ರಸ್ತಾಪಿಸಿರುವುದನ್ನು ಪರಿಗಣಿಸಿದರೆ ಕೋಲಾಟವು ಎರಡೂ ರಾಜ್ಯಗಳಲ್ಲಿಯೂ ಅತ್ಯಂತ ಪ್ರಸಿದ್ಧಿ ಪಡೆದ ಕಲೆಯಾಗಿದೆ ಎಂಬುದು ತಿಳಿಯುತ್ತದೆ.

ಆಂಧ್ರ ಮತ್ತು ಕರ್ನಾಟಕದಲ್ಲಿ ಕೋಲಾಟವನ್ನು ಗಂಡಸರು ಒಳಗೊಂಡಂತೆಯೇ ಹೆಂಗಸರೂ ಪ್ರದರ್ಶನ ಮಾಡುವುದಿದೆ ಎಂಬುದನ್ನು ಪ್ರಸ್ತಾಪಿಸಲಾಗಿದೆ ಹಾಗೂ ಕೋಲಾಟಕ್ಕೆ ಸಂಬಂಧಿಸಿದ

ಪರಿಕರಗಳ ಕುರಿತು ಮತ್ತು ಕೋಲು ಹುಯ್ಯುವ ಕಲಾವಿದರ ವೇಷಭೂಷಣಗಳ ಕುರಿತು ತಿಳಿಸಿರುವುದನ್ನು ಇಲ್ಲಿ ಮನಗಾಣಬಹುದು. ಕೋಲಾಟದಲ್ಲಿ ೩೦-೪೦ ರೀತಿಯ ಶೈಲಿಗಳನ್ನು ಬಳಸಲಾಗುತ್ತದೆ ಎಂದಿದ್ದಾರೆ.

ಕೋಲಾಟದ ಪ್ರದರ್ಶನಕ್ಕೆ ಕೋಲುಪದಗಳನ್ನು ಬಳಸುವುದಿದೆ. ಕೋಲಾಟಕ್ಕೆ ಕೋಲುಪದಗಳನ್ನು ಸೇರಿಸಿಯೂ ಕೀರ್ತನೆಗಳನ್ನು, ಭಜನೆ ಪದಗಳನ್ನು ಮತ್ತು ರಾಧಾಕೃಷ್ಣರ ಯುಗಳ ಗೀತೆಗಳನ್ನು ಹಾಡುತ್ತಾ ಕೋಲು ಪ್ರದರ್ಶನ ಮಾಡುವುದಿದೆ ಎಂಬುದಾಗಿ ಈ ಕೃತಿಯಿಂದ ತಿಳಿದುಬಂದಿದೆ ಹಾಗೂ ಆಂಧ್ರಪ್ರದೇಶದಲ್ಲಿ ಕೋಲಾಟದ ಒಂದು ವಿಧವಾದ ಜಡೇಕೋಲಾಟವನ್ನು ವೇಣಿಕೋಲಾಟ ಎಂಬುದಾಗಿ ಕರೆಯುತ್ತಾರೆ(ವೇಣಿ ಎಂದರೆ ಸಂಸ್ಕೃತದಲ್ಲಿ ಜಡೆ ಎಂದರ್ಥ) ಎಂಬುದು ತಿಳಿದುಬರುತ್ತದೆ.

ಕಾಳೇಗೌಡ ನಾಗವಾರ ಅವರು ಸಂಪಾದಿಸಿರುವ 'ಜೀಶಂಪ ಅವರ ಜಾನಪದ ಬರಹಗಳು' (೨೦೦೦) ಜಾನಪದಕ್ಕೆ ಸಂಬಂಧಿಸಿ ಕಥೆ, ಗಾದೆ, ಒಗಟು, ನಂಬಿಕೆ ಮತ್ತು ನೃತ್ಯ ಹೀಗೆ ಜನಪದದ ಹತ್ತು ಹಲವು ಪ್ರಕಾರಗಳನ್ನು ಕುರಿತು ಚರ್ಚಿಸಲಾಗಿದೆ. ಇಲ್ಲಿ 'ಕೋಲಾಟ' ಎನ್ನುವ ಉಪಶೀರ್ಷಿಕೆಯ ಅಡಿಯಲ್ಲಿ ಕೋಲಾಟದ ಕುರಿತು ಸಂಕ್ಷಿಪ್ತ ಪರಿಚಯ ಮಾಡಿಕೊಡಲಾಗಿದೆ. ಹಾಗೆಯೇ ಕೋಲಾಟ ಪದಗಳ ಕುರಿತಾಗಿ ಸಾಂಸ್ಕೃತಿಕ, ಭೌಗೋಳಿಕ ಹಾಗೂ ಭಾಷಿಕ ಘಟಕಗಳಾಗಿ ಆಯ್ಕೆ ಮಾಡಿಕೊಂಡು ಸಂಶೋಧನಾ ಅಧ್ಯಯನ ನಡೆಸುವ ಸಾಧ್ಯತೆಗಳನ್ನು ಕುರಿತು ಚರ್ಚಿಸಲಾಗಿದೆ ಮತ್ತು ಇದುವರೆಗೆ ಕೋಲಾಟದ ಬಗೆಗೆ ಬಂದ ಬಹುಮುಖ್ಯ ವಿದ್ವಾಂಸರ ಸಂಪಾದನಾ ಕೃತಿಗಳನ್ನು ಮತ್ತು ಇತರ ಲೇಖಕರ ಲೇಖನಗಳನ್ನು ಹೆಸರಿಸಿ ಕೆಲವು ಹಾಡುಗಳ ಸಾಲುಗಳನ್ನು ಉದಾಹರಣೆ ಸಹಿತ ನೀಡುತ್ತಾ ವಿವರಣೆ ನೀಡಿರುವುದಿದೆ ಮತ್ತು ಪ್ರಮುಖ ಕೋಲುಪದ ಸಂಗ್ರಹವಿರುವ ಕೃತಿಗಳಿಂದ ಕೆಲವೊಂದು ಕೋಲುಪದಗಳನ್ನು ಉದಾಹರಿಸಲಾಗಿದೆ. ಹಾಗೆಯೇ ಕೋಲಾಟವನ್ನು ಬೇರೆ ಬೇರೆ ರಾಜ್ಯಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ ಎಂಬುದರ ಕುರಿತಾಗಿ ಪ್ರಸ್ತಾಪಿಸಲಾಗಿದೆ ಮತ್ತು ಜನಾಂಗದ ಹೆಸರಿನಿಂದ ಕರೆಯುತ್ತಾರೆಂಬುದರ ಕುರಿತಾಗಿಯೂ ವಿವೇಚಿಸಲಾಗಿದೆ ಹಾಗೂ ಕೋಲುಪದಗಳು ಮತ್ತು ಕೋಲಾಟದ ಪ್ರಾಚೀನತೆ ಕುರಿತಾಗಿ ಚರ್ಚಿಸುತ್ತಾ, ಕೋಲಾಟವನ್ನು ಕಾಡುಗೊಲ್ಲರು, ನಾಯಕರು ಮತ್ತು ಕೊರಮ ಸಮುದಾಯಗಳಲ್ಲಿ ತುಂಬಾ ವಿಶೇಷತೆಗಳಿಂದ ಆಡುತ್ತಾರೆಂದು ಪ್ರಸ್ತಾಪಿಸಿರುವುದಿದೆ.

ಇಲ್ಲಿ ಕೋಲಾಟ ಸಂಪ್ರದಾಯವನ್ನು ಎರಡು ಮುಖಗಳಿಂದ ಗುರುತಿಸಿದ್ದಾರೆ. ಒಂದು ಕೋಲಾಟದ ಕ್ರೀಡಾಮುಖ, ಎರಡು ಕೋಲಾಟದ ಸಾಹಿತ್ಯ, ನಂತರ ಕೋಲಾಟದ ಹತ್ತು ಹಲವು ಪ್ರಕಾರಗಳನ್ನು ಹೆಸರಿಸಿದ್ದಾರೆ ಮತ್ತು ಕೋಲಾಟದ ವಸ್ತುವೈವಿಧ್ಯತೆಗಳ ಕುರಿತಾಗಿ, ಸರಸ-ವಿರಸ, ಹಾಸ್ಯ-ತಮಾಷೆ, ದೇವರು ಸ್ತುತಿಗೀತೆಗಳು, ಪ್ರಣಯ ಗೀತೆಗಳು, ಹಾಸ್ಯ-ವಿಡಂಬನೆ, ಸಾಮಾಜಿಕ ವಿಡಂಬನೆ, ಐತಿಹಾಸಿಕ ವ್ಯಕ್ತಿಗಳ ಸಾಹಸಗಾಥೆ, ಪುರಾಣ ಪುರುಷ ಜೀವನಗಾಥೆ ಇತ್ಯಾದಿ ವಸ್ತುವೈವಿಧ್ಯತೆಗಳನ್ನು ಪ್ರಸ್ತಾಪಿಸಿರುವುದು ಗಮನಾರ್ಹವಾದ ಸಂಗತಿಯಾಗಿದೆ.

ಜಿ.ಎಸ್. ಮೋಹನ್ ಅವರು ಬರೆದಿರುವ 'ಜಾನಪದ ವಿಜ್ಞಾನಾಧ್ಯಯನಂ' ಎನ್ನುವ ತೆಲುಗು ಕೃತಿಯು ಜಾನಪದ ಕಲಾರೂಪಗಳಿಗೆ ಸಂಬಂಧಿಸಿ ಬರೆದ ಕೃತಿಯಾಗಿದೆ. ಈ ಕೃತಿಯಲ್ಲಿ 'ಜಾನಪದ ನೃತ್ಯಂ' ಎಂಬ ಲೇಖನದಲ್ಲಿ ಹಲವು ನೃತ್ಯಗಳನ್ನು ಹೆಸರಿಸಲಾಗಿದೆ. ನೃತ್ಯಗಳಲ್ಲಿ ಕೋಲಾಟವು ಸಹ ಒಂದಾಗಿದೆ. ಹಾಗೆಯೇ 'ಜಾನಪದ ಕಳಾ ರೂಪಾಲು' ಎನ್ನುವ ಲೇಖನದಲ್ಲಿ ಕೋಲಾಟದ ಅರ್ಥ, ಸ್ವರೂಪದ ಕುರಿತು ವಿವೇಚಿಸಿದ್ದಾರೆ. ಕೋಲಾಟದ ಒಂದು ಪ್ರಕಾರವಾದ ಜಡೇಕೋಲಾಟದ ಕುರಿತು ಪ್ರಸ್ತಾಪಿಸುತ್ತಾ, ಈ ಆಟದಲ್ಲಿ ಸಮಸಂಖ್ಯೆಯಲ್ಲಿ ಕೋಲು ಹುಯ್ಯುವ ಕಲಾವಿದರು ಇರಬೇಕಾಗುತ್ತದೆ ಎಂಬುದನ್ನು ತಿಳಿಸಲಾಗಿದೆ. ಸಂಖ್ಯಾನುಗುಣ ವಾಗಿ ಎಂಟು, ಹನ್ನೆರಡು, ಹದಿನಾರು ಇಪ್ಪತ್ತು ಮತ್ತು ಇಪ್ಪತ್ನಾಲ್ಕು ಕಲಾವಿದರು ಪಾಲ್ಗೊಳ್ಳಬಹುದು ಎಂದು ಹೇಳಲಾಗಿದೆ. ಹಾಗೆಯೇ ಇದನ್ನು ಪ್ರದರ್ಶಿಸುವ ಕಾಲಕ್ಕೆ ಗಿಡ ಅಥವಾ ಮರದ ಕೆಳಗೆ ಪ್ರದರ್ಶನ ನೀಡುತ್ತಾರೆ ಎಂದು ತಿಳಿಸಲಾಗಿದೆ. ಆದರೆ ಇತ್ತೀಚಿನ ದಿನಗಳಲ್ಲಿ ಜಡೆ ಕೋಲಾಟವನ್ನು ಎರಡು ಮರದ ಕಂಬಗಳನ್ನು ನಿಲ್ಲಿಸಿ ಒಂದು ಕಂಬವನ್ನು ಅವುಗಳಿಗೆ ಆನಿಸಿ ಜಡೆ ನೇಯುವ ಹಗ್ಗಗಳನ್ನು ಮಧ್ಯದ ಕಂಬಕ್ಕೆ ಕಟ್ಟುತ್ತಾರೆ. ನಂತರ ಕೋಲು ಹುಯ್ಯುವ ಕಲಾವಿದರ ಸೊಂಟಕ್ಕೆ ಅಥವಾ ಅವರ ಬಲ ಕೈಗೆ ಹಗ್ಗವನ್ನು ಕಟ್ಟಿಕೊಂಡು ಜಡೆ ಕೋಲಾಟ ಹುಯ್ಯುವುದು ರೂಢಿಯಲ್ಲಿದೆ.

ಈ ಕೃತಿಯಲ್ಲಿ ಜಡೇಕೋಲಾಟವನ್ನು ಪ್ರಸ್ತಾಪಿಸುವಾಗ ಕನ್ನಡ ನಾಡಿನ ಕುರಿತು ಉಲ್ಲೇಖ ಬರುತ್ತದೆ ಅದು 'ಜಡೇಕೋಲಾಟಾನ್ನಿ ಕನ್ನಡ ದೇಶಂಲೋ ಜಡೇಕೋಲು ಅಂಟಾರು' ಎಂಬುದಾಗಿ ಪ್ರಸ್ತಾಪಿಸಲಾಗುತ್ತದೆ. ಅಂದರೆ ಜಡೆಕೋಲಾಟವನ್ನು ಕನ್ನಡ ರಾಜ್ಯದಲ್ಲಿ ಜಡೇಕೋಲು ಎನ್ನುತ್ತಾರೆ ಎಂಬುದು ಕನ್ನಡಾನುವಾದವಾಗಿದೆ. ಹಾಗೆಯೇ ಕೋಲಾಟಕ್ಕೆ ಬೇಕಾಗುವ ಪರಿಕರಗಳ ಪ್ರಸ್ತಾಪವಿದೆ. ಕೋಲು ಹುಯ್ಯುವ ಕಾಲಕ್ಕೆ ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲಿ ಗಂಡಸರು ಮತ್ತು ಹೆಂಗಸರ ಪ್ರದರ್ಶನಗಳನ್ನು ಕಾಣಬಹುದು. ಜಡೆಕೋಲಾಟವನ್ನು ಎರಡು ರಾಜ್ಯಗಳಲ್ಲಿ ಜಡೆಕೋಲಾಟ ಎಂದು ಕರೆಯುವುದೇ ಎರಡು ರಾಜ್ಯಗಳಲ್ಲಿ ಸಾಮ್ಯತೆಗಳಿವೆ ಎಂಬುದನ್ನು ತಿಳಿಸುತ್ತದೆ. ಕೋಲಾಟದಲ್ಲಿ ಹಲವು ರೀತಿಯಲ್ಲಿ ಸಮಾನಾಂಶಗಳು ಕಾಣಬರುತ್ತವೆ.

ಜಾನಪದ ಜಗತ್ತು(ಜೂನ್ ೨೦೧೫) ಮಾಸಪತ್ರಿಕೆ, ಸಂ. ರಾಜೇಗೌಡ ಹೊಸಹಳ್ಳಿ, ಸಂಪುಟ-೩೯, ಸಂಚಿಕೆ-೨ ಲೇಖಕರಾದ ಸಿದ್ಧಲಿಂಗಪ್ಪ ಎಸ್. ದೇಶ್‌ಮುಖ್ ಅವರು 'ಚಿಂಚೋಳಿ ತಾಲೂಕಿನ ಜಾನಪದ ಕಲೆಗಳು' ಎನ್ನುವ ಲೇಖನದಲ್ಲಿ 'ಕೋಲಾಟ' ಎನ್ನುವ ಉಪಶೀರ್ಷಿಕೆಯಲ್ಲಿ ಕೋಲಾಟ ಕುರಿತು ಪ್ರಸ್ತಾಪಿಸಿದ್ದಾರೆ. 'ಕೋಲಾಟದ ಮುಖ್ಯ ಉದ್ದೇಶ ಮನೋರಂಜನೆಯಾಗಿದೆ ಎಂದು ತಿಳಿಸಿದ್ದಾರೆ.

ನೆರೆರಾಜ್ಯವಾದ ಆಂಧ್ರಪ್ರದೇಶದಲ್ಲಿ ಕೋಲಾಟ ಕಲೆಯು 'ಚಿಟಿಕೆ ಕೋಲಾಟವಾಗಿ' ಪ್ರಸಿದ್ಧಿ ಪಡೆದಿರುವಿದೆ. ಈ ಕೋಲಾಟಕ್ಕೆ ಕನಕದಾಸ ಮತ್ತು ಪುರಂದರದಾಸರ ಪದಗಳನ್ನು ಬಳಸಿಕೊಳ್ಳುವುದು

ಒಳಗೊಂಡಂತೆ ಅವರ ಹಾಗೆಯೇ ತಾಳ, ವಾದ್ಯಗಳ ವೇಷಭೂಷಣ ಧರಿಸಿಕೊಂಡು ಕೋಲಾಟ. ಪ್ರದರ್ಶನ ಮಾಡುವುದು ಕಂಡುಬರುತ್ತದೆ ಎಂದು ವಿವರಿಸಿದ್ದಾರೆ.

ಕೋಲಾಟದ ಹಲವು ಪ್ರಕಾರಗಳನ್ನು ಲೇಖನದಲ್ಲಿ ಸೂಚಿಸಿದ್ದಾರೆ. ಅವುಗಳು,

ಓನಾಮ ಚುಟುಕಿ

ದೀಡ್ ಚುಟುಕಿ

ಏಳ ಪುಟಕಿ

ರೇಭಾಕ ದಾಂಡ

ಹೀಗೆ ಚುಟುಕಿ ಕೋಲಾಟದಲ್ಲಿ ನಾಲ್ಕು ಪ್ರಕಾರಗಳನ್ನು ಹೆಸರಿಸಿದ್ದಾರೆ ಮತ್ತು ಕೋಲಾಟದ ಒಂದು ಪ್ರಕಾರವಾದ ದಾಂಡ ಕುಣಿತದ ವ್ಯಾಖ್ಯಾನವನ್ನು ನೀಡಿದ್ದಾರೆ. ಈ ದಾಂಡ ಕುಣಿತವನ್ನು, ಚಿತ್ರದುರ್ಗ, ಬಳ್ಳಾರಿ ಮತ್ತು ತುಮಕೂರು ಮತ್ತಿತ್ತರ ಪ್ರಾಂತಗಳಲ್ಲಿ ಜಡೆಕೋಲಾಟ ಎಂದು ಕರೆಯುವುದು ರೂಢಿಯಲ್ಲಿದೆ. ಜಡೆಕೋಲಾಟದ ಮತ್ತೊಂದು ಹೆಸರೇ ದಾಂಡ ಕುಣಿತ ಎಂಬುದಾಗಿದೆ.

ಜನಪ್ರಿಯ ಕಲೆಗಳಲ್ಲಿ ಕೋಲಾಟ ಅತ್ಯಂತ ಪ್ರಸಿದ್ಧಿ ಮತ್ತು ಜನಮನ್ನಣೆ ಪಡೆದ ಕಲಾ ಪ್ರಕಾರವಾಗಿದೆ ಎಂಬುದನ್ನು ಸೂಚ್ಯವಾಗಿ ನಿರೂಪಿಸಿದೆ.

ಆದೆಪ್ಪ ಎ. ಅವರು 'ಅನಂತಪುರಂ ಜಿಲ್ಲಾ ವಾಲ್ಮೀಕುಲ ಸಾಂಸ್ಕೃತಿಕ ಅಧ್ಯಯನಂ' ಎನ್ನುವ ಮಹಾಪ್ರಬಂಧವನ್ನು(೧೯೯೭) ಕೃಷ್ಣದೇವರಾಯ ವಿಶ್ವವಿದ್ಯಾಲಯಕ್ಕೆ(ಅನಂತಪುರಂ) ಸಾದರಪಡಿಸಿದ್ದಾರೆ.

'ಅನಂತಪುರಂನ ವಾಲ್ಮೀಕುಲ ಸಾಂಸ್ಕೃತಿಕ ಅಧ್ಯಯನ'ವನ್ನು ಮಾಡುವ ಕಾಲಕ್ಕೆ ವಾಲ್ಮೀಕಿ ಸಮುದಾಯದಲ್ಲಿರುವ ಜಾನಪದ ಕಲೆಗಳನ್ನು ಹೆಸರಿಸಿ ವಿವರಿಸಿರುವುದು ಕಾಣಬರುತ್ತದೆ. ಅವುಗಳಲ್ಲಿ ಕೋಲಾಟ ಕಲಾರೂಪವೂ ಸಹ ಒಂದಾಗಿದೆ. ಈ ಪ್ರಬಂಧದಲ್ಲಿ ಕರ್ನಾಟಕ ಮತ್ತು ಆಂಧ್ರಪ್ರದೇಶ ಎರಡೂ ರಾಜ್ಯಗಳ ಗಡಿ ಪ್ರಾಂತ್ಯಗಳಿಗೆ ಹೊಂದಿಕೊಂಡಿರುವ ಅನಂತಪುರಂ ಜಿಲ್ಲೆಯಲ್ಲಿ ಕೋಲಾಟ ಕುರಿತು ಅಧ್ಯಯನ ಮಾಡಿರುವುದನ್ನು ಕಾಣಬಹುದು. ಅನಂತಪುರವು ಆಂಧ್ರಪ್ರದೇಶಕ್ಕೆ ಸೇರಿದ್ದರೂ ತೆಲುಗನ್ನು ಎಷ್ಟು ಪ್ರಮಾಣದಲ್ಲಿ ಮಾತನಾಡುತ್ತಾರೋ ಅಷ್ಟೇ ಪ್ರಮಾಣದಲ್ಲಿ ಕನ್ನಡ ಮಾತಾನಾಡುವ ಜನರಿದ್ದಾರೆ ಮತ್ತು ಇಲ್ಲಿನ ಜಾನಪದ ಕಲೆಗಳಲ್ಲಿ ದ್ವಿಭಾಷಿಕತೆಯನ್ನು ಒಳಗೊಂಡಿರುವುದು ಗಮನಿಸಬಹುದಾಗಿದೆ.

ಈ ಮಹಾಪ್ರಬಂಧದ ಅಧ್ಯಾಯ ಐದರಲ್ಲಿ ೫.೫ ಮತ್ತು ೫.೧೦ ಎನ್ನುವ ಉಪ ಅಧ್ಯಾಯಗಳನ್ನು ಮಾಡಿಕೊಳ್ಳಲಾಗಿದೆ. ಈ ಉಪ ಅಧ್ಯಾಯಗಳನ್ನು 'ಕೋಲನ್ನ ಪಾಟ' ಮತ್ತು 'ಕೋಲಾಟಂ ಗೇಯಾಲು' ಎಂದು ಹೆಸರಿಸಿಕೊಳ್ಳಲಾಗಿದೆ. ಕೋಲಾಟವನ್ನು ಚಂದ್ರನ ಬೆಳಕಿನಲ್ಲಿ ಆಡುತ್ತಾರೆಂದು ತಿಳಿಸುತ್ತಾ ಹೆಣ್ಣುಮಕ್ಕಳು ಆಡುವ ಕೋಲಾಟವನ್ನು ವಿವರಿಸಿದ್ದಾರೆ.

ಕೋಲು ಪದಗಳನ್ನು ಉದಾಹರಿಸುತ್ತಾ ವಸ್ತುವೈವಿಧ್ಯತೆ ಅಥವಾ ವಸ್ತುವಿಷಯವನ್ನು ಹೀಗೆ ಹೇಳಲಾಗಿದೆ. ಗಂಡನನ್ನು ಕಳೆದುಕೊಂಡ ಸ್ತ್ರೀಯ ಸಂವೇದನೆ, ಪ್ರಿಯಕರ ಅಥವಾ ಪ್ರಿಯತಮೆಯನ್ನು ಅಗಲಿದ ಪ್ರೇಮಿಯ ಸಂಕಟ, ನೋವು ವಿರಹ ವೇದನೆ, ದುರಂತತೆಯನ್ನು ಚಿತ್ರಿಸುವ ಮತ್ತು ಹಾಸ್ಯ ಅಥವಾ ತಮಾಷೆಗಳನ್ನು ವ್ಯಕ್ತಪಡಿಸುವ ಹಾಡುಗಳನ್ನು ಇಲ್ಲಿ ಕೊಡಲಾಗಿದೆ. ಅಂದರೆ ಕೋಲಾಟದ ಹಾಡುಗಳಿಗೆ ಯಾವುದೇ ವಸ್ತುವಾಗಿರಲಿ ಅದನ್ನು ವ್ಯಕ್ತಪಡಿಸುವುದು ಕೋಲಾಟದಲ್ಲಿ ಮಾತ್ರ ಸಾಧ್ಯ ಎಂಬಂತೆ ಸೂಚ್ಯವಾಗಿ ನಿರೂಪಿಸಿದ್ದಾರೆ.

೫.೧೪ರ ಉಪ ಅಧ್ಯಾಯದಲ್ಲಿ 'ಕೋಲಾಟಂ ಗೇಯಾಲು' ಶೀರ್ಷಿಕೆಯಿರಿಸಿ ಕೋಲಾಟ ಪದಗಳ ವಸ್ತುವಿಷಯ ವಿಶ್ಲೇಷಣೆ ಮತ್ತು ಸಂಗ್ರಹಣೆ ಮಾಡಿದ್ದಾರೆ. ಈ ಪದಗಳನ್ನು ಮುಖ್ಯವಾಗಿ ವಾಲ್ಮೀಕಿ ಸಮುದಾಯದವರ ಕಲೆಗಳಲ್ಲಿ ಒಂದಾದ ಕೋಲುಪದಗಳಿಂದ ಸಂಗ್ರಹಿಸಿರುವುದನ್ನು ಕಾಣಬಹುದು.

ಕೋಲಾಟವನ್ನು ಅನಂತಪುರದಲ್ಲಿ ಚಂದ್ರನ ಬೆಳಕಿನಲ್ಲಿ, ಹಬ್ಬ-ಹರಿದಿನಗಳಲ್ಲಿ ಉತ್ಸವ, ಜಾತ್ರೆಗಳಲ್ಲಿ ಕೋಲಾಟ ಆಡುವುದು ಸಾಮಾನ್ಯವಾಗಿದೆ. ಕೋಲು ಪ್ರದರ್ಶನಕ್ಕೆ ಇಪ್ಪತ್ತುಮಂದಿ ಕಲಾವಿದರು ಇದ್ದರೆ ಸೂಕ್ತ ಎಂಬುದನ್ನು ಸೂಚಿಸಿದ್ದಾರೆ ಮತ್ತು ಕೋಲಾಟದಲ್ಲಿ ನಾಯಕನನ್ನು ಈ ಪ್ರಾಂತದಲ್ಲಿ ಉದ್ದಿಕಾರ(ಉದ್ದಿಗಾಡು) ಎಂಬುದಾಗಿ ಕರೆಯುತ್ತಾರೆಂದು ತಿಳಿಸಿದ್ದಾರೆ. ಕನ್ನಡ ಪ್ರಾಂತಗಳಲ್ಲಿ ಕೋಲುಮೇಳಗಾರ ಅಥವಾ ಕೋಲುಗುರುಗಳು ಎಂದು ಕರೆಯುವುದು ವಾಡಿಕೆ.

ಪುರುಷರು ಈ ಭಾಗದಲ್ಲಿ ಎರಡು ಕೋಲುಕಡ್ಡಿಗಳ ಸಹಾಯದಿಂದ ಕೋಲು ಪ್ರದರ್ಶನ ಮಾಡುತ್ತಾರೆ. ಆದರೆ ಸ್ತ್ರೀಯರು ಒಂಟಿ ಕೋಲಿನ ಸಹಾಯದಿಂದ ಕೋಲು ಹುಯ್ಯುವುದಿದೆ. ಹಾಗೆಯೇ ಸ್ತ್ರೀಯರು ಕೆಲವೊಮ್ಮೆ ಕೋಲುಕಡ್ಡಿಗಳು ಇಲ್ಲದೆಯೆ ತಮ್ಮ ತಮ್ಮ ಕೈಗಳ ಸಹಾಯದಿಂದ ಕೈಗೆ ಕೈ ತಾಕಿಸುತ್ತಾ ಕೋಲಾಡುವುದು ರೂಢಿಯಲ್ಲಿದೆ ಎಂಬುದನ್ನು ಇಲ್ಲಿ ಮನಗಾಣಬಹುದು.

ಕೋಲಾಟವು ಅನಂತಪುರದಲ್ಲಿ ಪ್ರಸಿದ್ಧಿ ಪಡೆದ ಕಲೆಯಾಗಿದೆ. ವಿಶೇಷವಾಗಿ ಈ ಗಡಿ ಪ್ರಾಂತದಲ್ಲಿ ವಾಲ್ಮೀಕಿ ಸಮುದಾಯವು ಕನ್ನಡ ಮತ್ತು ತೆಲುಗು ಎರಡೂ ಭಾಷೆಗಳಲ್ಲೂ ಪದಗಳನ್ನು ಹಾಡುತ್ತಾ, ಕೋಲು ಪ್ರದರ್ಶನ ಮಾಡುವುದನ್ನು ಈ ಪ್ರಾಂತ ಪರಿಸರದಲ್ಲಿ ಕಾಣಬಹುದಾಗಿದೆ. ಈ ಪ್ರಬಂಧದಲ್ಲಿರುವ ಹಾಡುಗಳಿಗೂ, ಹಾಡುವ ವಿಧಾನಕ್ಕೂ ಧಾಟಿ ಲಯಗಳಿಗೂ ತುಂಬಾ ಸಾಮ್ಯತೆಗಳಿರುವುದು ಕಂಡು ಬಂದಿದೆ.

ತಿಪ್ಪೇಸ್ವಾಮಿ ಡಿ.ಎಸ್. ಅವರು 'ಬಳ್ಳಾರಿ ಜಿಲ್ಲೆಯ ಜನಪದ ಗೀತ ಸಂಪ್ರದಾಯಗಳು'(೨೦೦೬) ಅಪ್ರಕಟಿತ ಪ್ರಬಂಧವು ಎಂಟು ಅಧ್ಯಾಯಗಳನ್ನು ಒಳಗೊಂಡಿದೆ. 'ಬಳ್ಳಾರಿ ಜಿಲ್ಲೆಯ ಧಾರ್ಮಿಕ ಆಚರಣೆಯ ಪದಗಳು' ಎನ್ನುವಂಥ ಐದನೆಯ ಅಧ್ಯಾಯದಲ್ಲಿ 'ಕೋಲಾಟ ಸಂಪ್ರದಾಯ' ಎನ್ನುವ ಶೀರ್ಷಿಕೆಯಡಿ ಕೋಲಾಟದ ಪರಿಚಯ ಮಾಡಿಕೊಡಲಾಗಿದೆ.

ಕೋಲು ತರುವ ಸಂಪ್ರದಾಯವಾದ ಹುಣ್ಣಿಮೆ ಅಥವಾ ಅಮವಾಸ್ಯೆಯ ದಿನದಂದು ಕೋಲು ಕಡಿಯಲು ಕಾಡಿಗೆ ಹೋಗಿ ಪೂಜೆ ಮಾಡಿದ ಗಿಡದಿಂದ ಎರಡು ಕೋಲುಗಳನ್ನು

ಕಡಿಯುತ್ತಾರೆ ಎಂಬುದು ಸಂಪ್ರದಾಯವಾಗಿದೆ. ಆದರೆ ಇದರ ಪರಿಣಾಮವೆಂದರೆ ಒಂದೇ ಮರದಿಂದ ಅಥವಾ ಗಿಡದಿಂದ ಎಲ್ಲರಿಗೂ ಬೇಕಾಗುವ ಕೋಲುಗಳನ್ನು ಕಡಿದರೆ ಮರ ಅಥವಾ ಗಿಡ ನಾಶವಾಗುತ್ತದೆ ಎಂಬ ಮುಂದಾಲೋಚನಾ ಕ್ರಮದ ವಿಧಾನವೇ ಸಂಪ್ರದಾಯವಾಗಿ ರೂಢಿಯಲ್ಲಿರುವ ಸಾಧ್ಯತೆ ಇದೆ ಮತ್ತು ಇದೇ ಸರಿಯಾದ ವಿಧಾನವೂ ಕೂಡ. ಆ ದಿನ ಜನಪದರು ವೈಚಾರಿಕವಾಗಿ ಯೋಚನೆ ಮಾಡಿರುವುದು ಪ್ರಸ್ತುತವಾಗಿ ಸಂಪ್ರದಾಯವಾಗಿರುವುದು ಗಮನಾರ್ಹವಾದುದಾಗಿದೆ.

ಕೋಲಾಟದ ತಂಡಗಳ ಕಲಾವಿದರು ವೇಷಭೂಷಣ, ಕೋಲು ಹುಯ್ಯುವ ವಿಧಾನ ಮತ್ತು ಕೋಲು ಹುಯ್ಯುವ ಪೂರ್ವದಲ್ಲಿ ಕೋಲುಕಡ್ಡಿಗಳನ್ನು ಮಂಡಲದಲ್ಲಿ ಇರಿಸಿ ಪೂಜಿಸಿ ಕೋಲು ಕಲಿಸಿದ ಕೋಲು ಮೇಳಗಾರರಿಗೆ ನಮಿಸುವುದಿದೆ. ಈ ಸಂಪ್ರದಾಯದ ಕುರಿತು ವಿವೇಚಿಸಿರುವುದಲ್ಲದೆ ಕೋಲು ಹುಯ್ಯುವುದು, ಗಣಸ್ತುತಿ ಅಥವಾ ಗಣಪತಿಯ ಪ್ರಾರ್ಥನಾಗೀತೆಯಿಂದ ಕೋಲಾಟ ಆರಂಭಿಸುವುದು ಸಂಪ್ರದಾಯವಾಗಿದೆ ಎಂದು ಪ್ರಸ್ತಾಪಿಸಲಾಗಿದೆ. ಗಣಸ್ತುತಿಯ ನಂತರ ಊರುದೇವರುಗಳ ಸ್ತುತಿ, ಸಾಂಸ್ಕೃತಿಕ ನಾಯಕ-ನಾಯಕಿಯರ ಮತ್ತು ಹೆಣ್ಣುದೇವತೆಗಳ ಕುರಿತಾಗಿಯೂ ಕೋಲುಪದಗಳಲ್ಲಿ ಸ್ತುತಿಸುವುದಿದೆ ಎಂಬುದನ್ನು ಪ್ರಸ್ತಾಪಿಸಲಾಗಿದೆ. ಹಾಗೆಯೇ ಈ ಕೋಲುಪದಗಳಲ್ಲಿ, ಹಾಸ್ಯ, ಕರುಣೆ, ಪ್ರೇಮ, ಪ್ರಣಯ, ಕಾಮ, ಸಂತೋಷದ ಘಟನಾವಳಿಗಳನ್ನು ವಸ್ತುವಿಷಯವಾಗಿ ಒಳಗೊಂಡಿವೆ ಹಾಗೂ ಕೋಲಾಟದ ಪ್ರಕಾರಗಳಾದ ಕತ್ತಿಕೋಲು, ಜೋಡಿಕೋಲು, ಒಂಟಿಕೋಲು, ಸಾಲುಕೋಲು, ಚಿತ್ರಗೋಲು, ಬಾಗ್ಗೋಲು, ಹೂವಿನಕೋಲು, ದಂಡಿಕೋಲು ಇತ್ಯಾದಿ ಪ್ರಕಾರಗಳನ್ನು ಹೆಸರಿಸಲಾಗಿದೆ. ಬಳ್ಳಾರಿ ಪರಿಸರದಲ್ಲಿ ಗಂಡಸರಂತೆ ಸ್ತ್ರೀಯರು ಕೋಲಾಟ ಪ್ರದರ್ಶನ ಮಾಡುತ್ತಾರೆ ಮತ್ತು ನಾಯಕ ಸಮುದಾಯದವರು ಹೆಚ್ಚಾಗಿ ಕೋಲಾಟ ಪ್ರದರ್ಶನ ಮಾಡುವುದಿದೆ ಎಂಬುದನ್ನು ಸೂಚ್ಯವಾಗಿ ಸೂಚಿಸಲಾಗಿದೆ.

ತಿಪ್ಪೇಸ್ವಾಮಿ ಅವರು ಸ್ನಾತಕೋತ್ತರ ಪದವಿಗೆ ಸಲ್ಲಿಸಿದ ಪೂರಕ ಪ್ರೌಢ ಪ್ರಬಂಧ "ಸಂವಹನ ಮಾಧ್ಯಮವಾಗಿ ಕೋಲಾಟ ಚಳ್ಳಕೆರೆ ತಾಲೂಕಿನ ಒಂದು ಅಧ್ಯಯನ"(೨೦೦೯)ದಲ್ಲಿ ಕೋಲಾಟಕ್ಕೆ ಬಳಸುವ ಉಪಕರಣಗಳಾದ ಕೋಲುಕಡ್ಡಿಗಳು, ಗೆಜ್ಜೆ, ತಾಳ ಮತ್ತು ದಮ್ಮಡಿಗಳನ್ನು ಹೆಸರಿಸಿದ್ದಾರೆ. ಕೋಲಾಟ ಪ್ರದರ್ಶನ ವೇಳೆ ಜಾತ್ರೆ, ಉತ್ಸವಗಳಲ್ಲಿ ಗಂಡಸರ ವೇಷಭೂಷಣಗಳು ಚಡ್ಡಿ ಅಥವಾ ಮೊಣಕಾಲಿನವರೆಗೆ ಏರುಗಟ್ಟಿದ ಪಂಚೆ, ಬನಿಯನ್, ಸೊಂಟಕ್ಕೆ ವಸ್ತ್ರ ಕಟ್ಟಿದರೆ, ಹೆಂಗಸರು ಸೀರೆಯನ್ನು ಮೊಣಕಾಲಿನವರೆಗೂ ಏರುಗಟ್ಟಿ ಸೆರಗನ್ನು ಸೊಂಟಕ್ಕೆ ಕಟ್ಟಿರುತ್ತಾರೆಂದು ವಿವರಿಸಲಾಗಿದೆ.

ಜಾನಪದದ ಅವಿಭಾಜ್ಯ ಅಂಗವಾಗಿರುವ ಕೋಲಾಟಕ್ಕೆ ಮಾಧ್ಯಮದ ಸ್ಥಾನವನ್ನು ಕಲ್ಪಿಸಿ ಕೊಡಲಾಗಿದೆ. ಸಮಾಜದ ಯಾವುದೇ ಹಬ್ಬ, ಜಾತ್ರೆ, ಉತ್ಸವ, ಮದುವೆ ಇನ್ನಿತರ ಎಂತಹುದೇ ಸಾಂಸ್ಕೃತಿಕ ಆಚರಣೆಗಳಲ್ಲಿ ಕೋಲಾಟದ ಪ್ರದರ್ಶನ ಜನರಿಗೆ ಮನರಂಜನೆ ನೀಡುವ ಆಟವಾಗಿರುವುದರಿಂದ ಕೋಲಾಟ ಕಲೆಯನ್ನು ಸಮೂಹ ಮಾಧ್ಯಮವಾಗಿ ಅಥವಾ ಕುಣಿತವಾಗಿ ಪರಿವರ್ತಿಸಬಹುದಾಗಿದೆ ಎಂಬುದನ್ನು ಇಲ್ಲಿ ವಿಚಾರ ಮಾಡಲಾಗಿದೆ.

ಕೋಲಾಟದ ಪದಗಳಲ್ಲಿ ಶೃಂಗಾರ ಮತ್ತು ದೇವರ ಕುರಿತ ಪ್ರಾರ್ಥನೆ, ಆರೋಗ್ಯದ ಅರಿವು ಮೂಡಿಸುವಂತಹ ಗೀತೆಗಳು ಕೋಲುಪದಗಳಲ್ಲಿ ವಸ್ತುವಿಷಯವಾಗಿರುವುದರಿಂದ ಕೋಲಾಟದ ಪದಗಳ ಮೂಲಕ ಸಮಾಜಕ್ಕೆ ಸಂದೇಶ ರವಾನಿಸುತ್ತದೆ. ಕೋಲು ಪ್ರಕಾರಗಳನ್ನು ಹೀಗೆ ನಿರೂಪಿಸಿದ್ದಾರೆ.

ಗೀಜಗನ ಕೋಲು

ಹರಿಗೋಲು

ತೇರುಗೋಲು

ಜಡೆಕೋಲು

ಕುಳಿತು ಒಡೆಯುವ ಕೋಲು – ಎಂಬುದಾಗಿ ಹೆಸರಿಸಲಾಗಿದೆ.

ಕೋಲಾಟವು ಕುಟುಂಬ ಯೋಜನೆ, ಹಸಿರು ಕ್ರಾಂತಿ, ಪಲ್ಸ್‌ಪೋಲಿಯೋ, ಏಡ್ಸ್ ರಾಷ್ಟ್ರೀಯ ಭಾವೈಕ್ಯತೆ ಮತ್ತು ಅನಕ್ಷರತೆ ದುಷ್ಟಟಗಳ ಪರಿಣಾಮ ಮುಂತಾದ ಹಲವು ವಿಷಯಗಳ ಪ್ರಚಾರ ಮತ್ತು ಜನಜಾಗೃತಿ ಮೂಡಿಸುವುದರೊಂದಿಗೆ ದೇಶ-ವಿದೇಶಗಳಲ್ಲಿ ರಾಷ್ಟ್ರೀಯ-ಅಂತಾರಾಷ್ಟ್ರೀಯ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವುದರ ಮೂಲಕ ಸಮೂಹ ಮಾಧ್ಯಮಗಳು ಮಾಡುವ ಕೆಲಸವನ್ನು ಕೋಲಾಟ ತಂಡಗಳೇ ಒಂದು ಮಾಧ್ಯಮವಾಗಿ ಕಾರ್ಯ ನಿರ್ವಹಿಸುತ್ತವೆ ಎಂಬುದನ್ನು ತಿಳಿಸಲಾಗಿದೆ.

ಕೋಲಾಟದಂಥ ಜಾನಪದ ಕಲೆಯು ವೃತ್ತಪತ್ರಿಕೆ, ಮಾಸಪತ್ರಿಕೆ, ದಿನಪತ್ರಿಕೆ, ದೂರದರ್ಶನ ಮೊದಲಾದ ಸಮೂಹ ಮಾಧ್ಯಮಗಳು ಮಾಡುವ ಸಾಮಾಜಿಕ ಸಂದೇಶವನ್ನು ರವಾನಿಸುವುದ ರೊಂದಿಗೆ ಕುಣಿತದ ಜೊತೆಗೆ ಹಾಡುಗಳ ಮುಖಾಂತರ ಜನರಲ್ಲಿ ಸಾರ್ವಜನಿಕ ಮತ್ತು ಸಮೂಹ ಪ್ರಜ್ಞೆಯನ್ನು ಮೂಡಿಸುವ ಕಾರ್ಯವನ್ನು ಮಾಡುತ್ತದೆ ಎಂದು ತಿಳಿದು ಬರುತ್ತದೆ.

ಕೋಲಾಟವು ಕೇವಲ ಮನೋರಂಜನೆಯನ್ನು ಒದಗಿಸುವ ಆಟವಾಗಿರದೆ ಅದರಾಚೆಗೂ ಸಮಾಜದ ಒಂದು ಮಾಧ್ಯಮವಾಗಿ ಕಾರ್ಯ ನಿರ್ವಹಿಸುತ್ತದೆ ಎಂಬುದನ್ನು ಗಮನಿಸಿದರೆ ಕೋಲಾಟದ ಜನಪ್ರಿಯತೆ ನಮಗೆ ಅರಿವಾಗುತ್ತದೆ.

ಎಚ್.ಟಿ. ಪೋತೆ ಅವರು ಸಂಶೋಧನೆ ಮಾಡಿ ಪ್ರಕಟಿಸಿರುವ ಮಹಾಪ್ರಬಂಧ 'ಹೈದ್ರಾಬಾದ್ ಕರ್ನಾಟಕದ ಜನಪದ ಪ್ರದರ್ಶನ ಕಲೆಗಳು'. ಇದರಲ್ಲಿ ಹೈದ್ರಾಬಾದ್ ಕರ್ನಾಟಕದ ಪ್ರದರ್ಶನ ಕಲೆಗಳನ್ನು ಏಳು ಭಾಗಗಳಾಗಿ ವಿಭಾಗಿಸಿಕೊಂಡಿರುವುದಿದೆ. ಅವುಗಳು

೧. ಗೀತಾ ಪ್ರಧಾನ ಕಲೆಗಳು

೨. ನೃತ್ಯ ಪ್ರಧಾನ ಕಲೆಗಳು

೩. ವಾದ್ಯ ಪ್ರಧಾನ ಕಲೆಗಳು

೪. ಆರಾಧನಾ ಪ್ರಧಾನ ಕಲೆಗಳು

೫. ಪ್ರಾಣಿ ಸಂವಹನಾ ಪ್ರಧಾನ ಕಲೆಗಳು

೬. ಅನುಕರಣ ಪ್ರಧಾನ ಕಲೆಗಳು

೭. ಶೃಂಗಾರ ಪ್ರಧಾನ ಕಲೆಗಳೆಂದು ವರ್ಗೀಕರಿಸಿಕೊಂಡಿರುವುದಿದೆ. ಹಾಗೆಯೇ ಕೋಲಾಟಕ್ಕೆ ಸಂಬಂಧಿಸಿದಂಥ ಮಾಹಿತಿಯನ್ನು ನೃತ್ಯ ಪ್ರಧಾನ ಕಲೆಗಳು ಎನ್ನುವ ಅಧ್ಯಾಯದಲ್ಲಿ ಪ್ರಸ್ತಾಪ ಮಾಡಲಾಗಿದೆ. ಪೋತೆ ಅವರು ಕೋಲಾಟದ ಕುರಿತ ವ್ಯಾಖ್ಯಾನವನ್ನು ಹೀಗೆ ಮಾಡಿದ್ದಾರೆ. "ಕೋಲಾಟವು ನೃತ್ಯ, ಸಾಹಿತ್ಯ, ಸಂಗೀತ ಈ ಮೂರರ ಸಂಗಮವೇ ಕೋಲಾಟ" ಎಂದಿದ್ದಾರೆ. ಕೋಲಾಟಕ್ಕೆ ಬಳಸುವ ಕೋಲುಕಡ್ಡಿಗಳನ್ನು ಜಾಲಿಯ ಮರದಿಂದ ಸಿದ್ಧಪಡಿಸುತ್ತಾರೆ ಎಂದು ಹೇಳಲಾಗಿದೆ ಮತ್ತು ಕೋಲಾಟ ಆಡುವ ಕಲಾವಿದರ ವೇಷಭೂಷಣ ಕುರಿತು ಪ್ರಸ್ತಾಪಿಸಲಾಗಿದೆ. ಕೋಲಾಟದ ಹಲವು ಪ್ರಕಾರಗಳನ್ನು ಹೆಸರಿಸಲಾಗಿದೆ. ಹಾಗೆಯೇ ಕೋಲುಪದಗಳಲ್ಲಿನ ವಸ್ತುವೈವಿಧ್ಯತೆಗಳನ್ನು ಕುರಿತಾಗಿ ವಿಚಾರ ಮಾಡಲಾಗಿದೆ. ಪ್ರಣಯ, ಹಾಸ್ಯ ಅಥವಾ ತಮಾಷೆ, ಶೃಂಗಾರ, ದೇವರು, ಪ್ರಾಕೃತಿಕ, ಪೌರಾಣಿಕ, ಗಂಡ-ಹೆಂಡತಿಯರ ಸರಸ-ವಿರಸಗಳು ಮತ್ತು ಸಾಂಸರಿಕ ಪ್ರಸಂಗಗಳು, ನೋವು-ನಲಿವುಗಳು ಮತ್ತು ಗೆಳೆಯ-ಗೆಳತಿಯರ ಸರಸ ಸಲ್ಲಾಪಗಳು, ಸಮಾಜದಲ್ಲಿ ನಡೆಯುವ ವ್ಯಂಗ್ಯ-ವಿಡಂಬನೆಗಳು ಇಂಥ ಹಲವು ರೀತಿಯ ವಸ್ತುವಿಷಯಗಳನ್ನು ಕೋಲುಪದಗಳು ಒಳಗೊಂಡಿರುತ್ತವೆ. ಹೀಗೆ ಪ್ರಬಂಧದಲ್ಲಿ ಸಂಶೋಧಕರು ಕೋಲುಪದಗಳ ವಸ್ತುವಿಷಯ, ಪ್ರಕಾರಗಳು ಮತ್ತು ಕೋಲು ಹುಯ್ಯುವ ವಿಧಾನ ಇತ್ಯಾದಿಗಳನ್ನು ಕುರಿತಾಗಿ ಸಂಕ್ಷೇಪವಾಗಿ ವಿವೇಚಿಸಿರುವುದು ಕಂಡು ಬರುತ್ತದೆ.

ಕೋಲಾಟ ಪದಗಳ ಕುರಿತಾಗಿ ಅಧ್ಯಯನಗಳು ನಡೆದಿರುವುದು ವಿರಳ. ಕನ್ನಡ ಕೋಲುಪದಗಳಿಗೆ ಸಂಬಂಧಿಸಿದಂತೆ ಸೋಮನಾಥ ನುಚ್ಚಾ ಅವರು ೧೯೯೫ರಲ್ಲಿ 'ಬೀದರ ಜಿಲ್ಲೆಯ ಕೋಲಾಟ ಪದಗಳು' ಕುರಿತು ಅಧ್ಯಯನ ನಡೆದಿದೆ. ಉಳಿದಂತೆ ಜನಪದದ ಕುರಿತು ನಡೆದಿರುವ ಅಧ್ಯಯನಗಳಲ್ಲಿ ಉಪ ಅಧ್ಯಾಯಗಳಾಗಿ ಅಥವಾ ಸಂಕ್ಷಿಪ್ತ ಪರಿಚಯಗಳು ನಡೆದಿವೆ. ಅವುಗಳಲ್ಲಿ ತಿಪ್ಪೇಸ್ವಾಮಿ ಅವರ 'ಬಳ್ಳಾರಿ ಜಿಲ್ಲೆಯ ಜನಪದ ಗೀತ ಸಂಪ್ರದಾಯಗಳು', ಎಚ್.ಟಿ. ಪೋತೆಯವರ 'ಹೈದ್ರಾಬಾದ್ ಕರ್ನಾಟಕದ ಜನಪದ ಪ್ರದರ್ಶನ ಕಲೆಗಳು' ಹಾಗೂ 'ತೆಲುಗು ಕೋಲಾಟ ಪದಗಳು' ಕುರಿತು ಆದೆಪ್ಪ ಅವರು 'ಅನಂತಪುರಂ ಜಿಲ್ಲಾ ವಾಲ್ಮೀಕಾಲ ಸಾಂಸ್ಕೃತಿಕ ಅಧ್ಯಯನಂ' ಮಹಾಪ್ರಬಂಧದಲ್ಲಿ 'ಕೋಲಾಟಂ ಗೇಯಾಲು' ಎಂಬುದಾಗಿ ಪ್ರಸ್ತಾಪಿಸಲಾಗಿದೆ ಹಾಗೂ ಕನ್ನಡ ಕೋಲಾಟ ಪದಗಳು ಕುರಿತು ಪದಗಳನ್ನು ಮಾತ್ರ ಸಂಗ್ರಹ ಮಾಡಿರುವ ಕೃತಿಗಳು. ಅರ್ಚಕ, ಬಿ. ರಂಗಸ್ವಾಮಿ ಅವರ ಹುಟ್ಟಿದ ಹಳ್ಳಿ ಹಳ್ಳಿಯ ಹಾಡು, ಎಚ್.ಎಲ್. ನಾಗೇಗೌಡರ 'ಪದವವೆ ನಮ್ಮ ಎದೆಯಲ್ಲಿ' ಮಳಲಿ ವಸಂತಕುಮಾರ ಅವರ ಕೋಲುಪದಗಳು, ಮತ್ತಿಘಟ್ಟ ಕೃಷ್ಣಮೂರ್ತಿ, ಅವರ ಹೊನ್ನ ಹೊತ್ತಿಗೆ, ಎಸ್.ಪಿ. ಪದ್ಮಪ್ರಸಾದ್ ಅವರ 'ಕೋಲು ಮತ್ತು ಕೋಲಿನ ಪದಗಳು', ಕರೀಂಖಾನ್ ಅವರ 'ಕನ್ನಡ ಜನಪದ ಗೀತೆಗಳು', ಚಂದ್ರಶೇಖರ

ಕಂಬಾರ ಅವರ 'ಮಾತಾಡುಲಿಂಗವೇ', ಜಿ.ಬಿ. ಖಾಡೆ ಅವರ 'ಕಾಡು ಹೂಗಳು', ಸೋಮನಾಥ ನುಚ್ಚಾ ಅವರ 'ಕೋಲಾಟದ ಪದಗಳು' ಮತ್ತು ಇತ್ತೀಚಿನ ಸಂಗ್ರಹ ಕೃತಿಗಳು ಎಸ್.ಎಂ. ಮುತ್ತಯ್ಯ ಅವರ 'ಬಡಗಿ ಕಟ್ಟಿದ ಬೆಡಗಿನ ಮಾಳಿಗೆ', ಮೋಹನ್‌ಕುಮಾರ್ ಅವರ 'ಕಾಡುಗೊಲ್ಲರ ಕೋಲಾಟದ ಪದಗಳು', ಕೋಲಾಟ ಕುರಿತು ಪ್ರಸ್ತಾಪವಿರುವ ಗೊ.ರು. ಚನ್ನಬಸಪ್ಪ ಅವರ 'ಕರ್ನಾಟಕದ ಜನಪದ ಕಲೆಗಳು', ಸ.ಚಿ. ರಮೇಶ್ 'ದಕ್ಷಿಣ ಭಾರತದ ಜನಪದ ಕಲೆಗಳ ಕೋಶ', ಹಿ.ಚಿ. ಬೋರಲಿಂಗಯ್ಯ ಅವರ 'ಕರ್ನಾಟಕ ಜನಪದ ಕೃತಿಗಳ ಕೋಶ' ಮುಂತಾದವರು ಕನ್ನಡ ಕೋಲಾಟ ಪದಗಳ ಕುರಿತು ಲೇಖನಗಳನ್ನು, ಕೃತಿಗಳನ್ನು ಬರೆದಿರುವರು. ಇವುಗಳ ಸಹಾಯದಿಂದ ಮತ್ತು ಅಧ್ಯಯನದ ಕಾಲಕ್ಕೆ ಕ್ಷೇತ್ರಕಾರ್ಯ ಮಾಡಿ ಸಂಗ್ರಹಿಸಿದ ಕೋಲು ಪದಗಳನ್ನು ಅಧ್ಯಯನಕ್ಕೊಳಪಡಿಸುವುದರ ಮೂಲಕ ಕೋಲುಪದಗಳ, ವಿಶೇಷತೆಗಳು, ಸಮಾನ ಅಂಶಗಳು ಹಾಗೂ ಯಾವ ಯಾವ ಸಮುದಾಯಗಳಲ್ಲಿ ಕೋಲುಪದಗಳೊಂದಿಗೆ ರೂಢಿ-ಸಂಪ್ರದಾಯ, ಸಾಂಸ್ಕೃತಿಕ ಆಚರಣೆಗಳು ಇಂದಿಗೂ ತಳವೂರಿದೆ ಎಂಬುದು ಅಧ್ಯಯನ ಮಾಡುವುದಿದೆ. ಹಾಗೆಯೇ ಕರ್ನಾಟಕ-ಆಂಧ್ರ ಗಡಿ ಪರಿಸರದ ಕೋಲುಪದಗಳನ್ನು ಸಂಗ್ರಹಿಸುವುದರ ಜೊತೆಗೆ ಸಮಕಾಲೀನ ಸಂಸ್ಕೃತಿಯನ್ನು ಅಧ್ಯಯನ ಮಾಡುವುದಾಗಿದೆ. ಈ ಭಾಗದಲ್ಲಿ ಕನ್ನಡ-ತೆಲುಗು ಮೌಖಿಕ ಸಾಹಿತ್ಯ ಕುರಿತು ಅಧ್ಯಯನ ನಡೆದಿವೆ. ಆದರೆ ಕೋಲಾಟ ಪದಗಳ ಕುರಿತಾಗಿ ಅಧ್ಯಯನ ನಡೆದಿಲ್ಲ. ಹಾಗಾಗಿ ಗಡಿ ಪರಿಸರದ ಕೋಲುಪದಗಳಲ್ಲಿ ಸಾಂಸ್ಕೃತಿಕ ಭಿನ್ನತೆ, ಸಮಾನಾಂಶಗಳು, ಭಾಷಿಕ, ಭಿನ್ನತೆ ಮತ್ತು ಸಾಮುದಾಯಿಕವಾಗಿ ಮತ್ತು ಸಾಹಿತ್ಯಿಕ ವಿಚಾರಗಳ ಕುರಿತಾಗಿ ಆಳವಾದ ಅಧ್ಯಯನದ ಅವಶ್ಯಕತೆ ಇದೆ. ಗಡಿ ಪರಿಸರದ ಭಾಷೆ, ಸಾಹಿತ್ಯ, ಸಮುದಾಯ ಸಂಸ್ಕೃತಿಗಳನ್ನು ಕನ್ನಡ-ತೆಲುಗು ಕೋಲಾಟ ಪದಗಳಲ್ಲಿ ತಿಳಿಯುವ ನಿಟ್ಟಿನಲ್ಲಿ ಅಧ್ಯಯನ ಮಾಡುವ ಅಗತ್ಯವಿದೆ.



ಅಧ್ಯಾಯ : ಮೂರು

# ಕೋಲಾಟದ ವೈವಿಧ್ಯತೆ

೩.೧. ಕೋಲಾಟದ ಪ್ರಾಚೀನತೆ

೩.೨. ಭಾರತದಲ್ಲಿ ಕೋಲಾಟ

೩.೩. ಕರ್ನಾಟಕಾಂಧ್ರದಲ್ಲಿ ಕೋಲಾಟ

೩.೪. ಕೋಲಾಟದ ಪರಿಕರಗಳು

೩.೪.೧. ಕೋಲು ಹುಯ್ಯುವ ಕಲಾವಿದರು

೩.೪.೨. ಕೋಲುಪದಗಳು

೩.೪.೩. ಕೋಲುಕಡ್ಡಿಗಳು

೩.೪.೪. ಗೆಜ್ಜೆ ಸರ

೩.೪.೫. ತಪ್ಪಡಿ ಅಥವಾ ಹಲಗೆ

೩.೪.೬. ತಾಳಗಳು

೩.೫. ಕೋಲಾಟದ ವಸ್ತುವಿಷಯ

೩.೫.೧. ಪ್ರಾರ್ಥನೆ ಅಥವಾ ದೇವರ ಸಂಬಂಧಿ ಕೋಲುಪದಗಳು

೩.೫.೨. ಶೃಂಗಾರ ಅಥವಾ ಪ್ರಣಯ ಸಂಬಂಧಿ ಕೋಲುಪದಗಳು

೩.೫.೩. ಚಾರಿತ್ರಿಕ ಅಥವಾ ಐತಿಹಾಸಿಕ ಸಂಬಂಧಿ ಕೋಲುಪದಗಳು

೩.೫.೩.೧. ನಾಯಕನಹಟ್ಟಿ ತಿಪ್ಪೇಸ್ವಾಮಿಯ ಚಾರಿತ್ರಿಕತೆ

೩.೫.೩.೨. ಮದಕರಿನಾಯಕ

೩.೫.೩.೩. ಒನಕೆ ಓಬವ್ವ

೩.೫.೪. ಹಾಸ್ಯ ಅಥವಾ ತಮಾಷೆ ಸಂಬಂಧಿ ಕೋಲುಪದಗಳು

೩.೫.೫. ಇತರೆ ಕೋಲುಪದಗಳು

## ಅಧ್ಯಾಯ : ಮೂರು

# ಕೋಲಾಟದ ವೈವಿಧ್ಯತೆ

### ಪ್ರಸ್ತಾವನೆ

ಮಾನವರು ಆದಿಕಾಲದಿಂದ ಕಂಡುಂಡ ತಮ್ಮ ಬದುಕಿನ ಒಂದೊಂದು ಮೆಟ್ಟಿಲನ್ನು ಪ್ರಕೃತಿಯ ಮಡಿಲಲ್ಲಿ ಸವಿದು ಬೆಳೆದಿರುವುದರಿಂದ, ಪ್ರಕೃತಿಯಲ್ಲಿನ ಹಲವು ಸನ್ನಿವೇಶ, ಘಟನೆಗಳಿಗೆ ತಾನೇ ಸಾಕ್ಷಿಯಾಗಿರುವಂತೆ ಪ್ರಕೃತಿಯತ್ತ ಒಮ್ಮೆ ಹಿಂತಿರುಗಿ ನೋಡಿದಾಗ ಕಿವಿಯಗಲಿಸಿ ಆಲಿಸಿದಾಗ ಎಲ್ಲೆಡೆ ಗಿಡಮರಗಳ ಮೈಮಣಿತ, ಹಕ್ಕಿ ಪಕ್ಕಿಗಳ ಕಲರವ ಹೊಳೆ-ಹಳ್ಳಗಳ ವಕ್ರರೂಪಕಲಾಸ್ಯ, ನದ-ನದಿ ಸಮುದ್ರಗಳ ಭೋರ್ಗರೆತ ಮುಂತಾದವು ನೃತ್ಯ ಸಂಗಮದಲ್ಲಿ ತನ್ಮಯವಾಗಿರುವಂತೆ ಭಾಸವಾಗುತ್ತದೆ. ಪರಿಸರದ ಮಡಿಲಲ್ಲಿ ಹುಟ್ಟಿ ಬದುಕುವ ಮಾನವನಿಗೆ ತನಿದಾದ ತಂಗಾಳಿಯು ಸೋಕಿದಾಗ, ಗಿಡ-ಮರ-ಬಳ್ಳಿಗಳು ತೂಗಿದಾಗ, ತೊನೆದಾಗ, ಮುಂಗಾರಿನ ಗುಡುಗಿಗೆ ನವಿಲು ರೆಕ್ಕೆ ಬಿಚ್ಚಿ ಕುಣಿದಾಗ, ಮೇಕೆ, ಕುರಿ ಅಥವಾ ಹಸುವಿನ ಹಸುಳೆಯೊಂದು ಪುಟ ನೆಗೆದು ಓಡಿದಾಗ, ಗಿಳಿ ಕೋಗಿಲೆಗಳ ಗಾನವು ಕೇಳಿದಾಗ, ನದ-ನದಿಗಳ ಲಾಸ್ಯ ಆಲಿಸಿದಾಗ, ಅವುಗಳಂತೆಯೇ ತಾನು ಹಾಡಬೇಕು, ನರ್ತನ ಮಾಡಬೇಕು ಎಂದು ಅನಿಸದೆ ಇರಲಾರದು. ಪರಿಸರದ ಪ್ರತಿ ಕ್ಷಣವನ್ನು, ಪ್ರತಿ ಸನ್ನಿವೇಶವನ್ನು ಅವಲೋಕಿಸಿದ ಮಾನವನು ಪ್ರಕೃತಿಯೊಳಗಿರುವುದೆಲ್ಲವನ್ನು ಅನುಕರಿಸಿ ಅದೇ ತನ್ನ ಗುರುಕುಲ ಎಂದು ಭಾವಿಸಿಕೊಂಡು ಆದಿಕಾಲದಿಂದ ವಾಸ್ತವದ ದಿನದವರೆಗೂ ಇಂದಿಗೂ ಹಾಡುತ್ತಾ ಕುಣಿದನು. ಕುಣಿಯುತ್ತಾ ಹಾಡಿದನು. ಹೀಗೆ ಮಾನವರ ಬಾಳಲ್ಲಿ ಗಾಯನ ಹಾಗೂ ನರ್ತನಗಳು ಏಕವಾಗಿ ಒಂದಕ್ಕೊಂದು ಪೂರಕವಾಗಿ ಸಂಗಮಿಸಿರಬಹುದು ಎಂದು ಕಾಣುತ್ತದೆ.

ಗಾಯನ ಮತ್ತು ಕುಣಿತಗಳು ಪ್ರಕೃತಿಯಲ್ಲಿನ ದೃಶ್ಯ ಕಾವ್ಯಗಳ ಮೂಲಕ ಮಾನವನಲ್ಲಿ ಮೇಳೈಸಿವೆ. ಪ್ರಾಕೃತಿಕ ಮಡಿಲಿನ ಪ್ರಾಣಿ-ಪಕ್ಷಿಗಳ ಕೂಗು, ಕುಣಿತ, ಕೇಕೆ, ಅರಚುವಿಕೆಗಳೇ ಮಾನವನ ಕುಣಿತ - ಗಾಯನಗಳಿಗೆ ಹೊಸ ಭಾಷ್ಯ ಬರೆದಿರುವುದು ಸತ್ಯ ಸಂಗತಿಯಾಗಿದೆ.

ಮಾನವನು ಕುಣಿತ, ಗಾಯನಗಳನ್ನು ಕಂಡುಕೊಂಡ ನಂತರ ಬದುಕಿನ ತೀರಾ ಜಂಜಾಟಗಳನ್ನು ಕಳೆಯಲು ತನ್ನ ಬದುಕಿನಲ್ಲಿ ದುಡಿದು ದಣಿದು ಬೇಸರಾದಾಗ, ಯಾವುದೋ

ಒಂದು ಘಟನೆ, ಸನ್ನಿವೇಶಗಳನ್ನು ಮರೆಮಾಚಲು, ತನ್ನ ಮನಸ್ಸಿನ ಸ್ಥಿತಿಯನ್ನು ತಿಳಿಯಾಗಿ ಇಟ್ಟುಕೊಳ್ಳಲು ಅಥವಾ ಬದುಕಿನ ಒಂಟಿತನ ಹಾಗೂ ಏಕತಾನತೆಗಳನ್ನು ನಿವಾರಿಸಿಕೊಳ್ಳಲು ಈ ಗಾಯನ, ನರ್ತನಗಳೊಂದಿಗೆ ಕೆಲವೊಂದು ಆಟಗಳನ್ನು ಕಲಿತನು. ಈ ಹಾಡು, ಕುಣಿತ, ಆಟಗಳು ಮಾನವನ ಬರಡಾದ ಬದುಕಿನಲ್ಲಿ ಓಯಸಿಸ್ಸಿನಂತೆ ಸುಖ, ಸಂತೋಷ, ನೆಮ್ಮದಿಯಿಂದಿರುವಂತೆ ಮಾಡುತ್ತವೆ. ಹಾಗಾಗಿ ಅವನು ತನ್ನ ಬಾಳಲ್ಲಿ ಬೇಸರವಾದಾಗ ಏಕಾಂಗಿತನ, ಒಂಟಿತನ ಕಾಡಿದಾಗ, ಹಾಡು, ಕುಣಿತ ಮತ್ತು ಆಟಗಳ ಮೊರೆ ಹೋಗಿರಲು ಸಾಧ್ಯವೆನಿಸುತ್ತದೆ.

ಈ ಹಾಡು, ಕುಣಿತ ಮತ್ತು ಆಟಗಳು ಸಂಗೀತದೊಂದಿಗೆ ಸೇರಿ ಹೋಗಿವೆ. ಇವುಗಳಲ್ಲಿ ಹಲವು ತೆರನಾದ ವೈವಿಧ್ಯತೆಗಳಿವೆ. ಕುಣಿತ ಮತ್ತು ಹಾಡುಗಳು, ಆಟಗಳು ಕೇವಲ ಸಂತೋಷ, ಮನೋರಂಜನೆಗೆ ವ್ಯಾಪ್ತಿಯನ್ನು ಸೀಮಿತಗೊಳಿಸಿಕೊಂಡಿಲ್ಲ. ಇವು ದೈವಿಕ ಆರಾಧನೆಯಾಗಿ ಸಾಂಸ್ಕೃತಿಕ ಆಚರಣೆಗಳಲ್ಲಿ ಪಾಲ್ಗೊಳ್ಳುವಿಕೆಯು ಬುಡಕಟ್ಟು ಸಮುದಾಯಗಳಲ್ಲಿ ಇಂದಿಗೂ ನೆಲೆಯೂರಿರುವುದು ಕಂಡು ಬರುತ್ತದೆ.

ಕುಣಿತ, ಗಾಯನಗಳನ್ನು ಕಂಡುಕೊಂಡ ಮಾನವನು ಬರಬರುತ್ತಾ ಅವುಗಳ ಶೈಲಿಯನ್ನು ವಿಸ್ತರಿಸಿಕೊಳ್ಳುತ್ತಾ ನಡೆದಿರುವುದು ಕಾಣಸಿಗುತ್ತದೆ. ಹಸು, ಕರು, ದನ, ನಾಯಿ, ನವಿಲು, ಗಿಳಿ, ಕೋಗಿಲೆ ಮುಂತಾದ ಪ್ರಾಣಿ-ಪಕ್ಷಿಗಳ ಕೂಗು-ಮೊರೆತಗಳನ್ನು ಆಲಿಸಿದ ಮಾನವ ಅವುಗಳ ಪ್ರತಿಯೊಂದು ಚಟುವಟಿಕೆಯನ್ನು ಅನುಸರಿಸಿದನು. ಹಾಗೆಯೇ ಅವುಗಳನ್ನು ತನ್ನ ಬಾಳಲ್ಲಿ ಸೇರಿಸಿಕೊಂಡು ಅವುಗಳೇ ತಾನಾಗಿ ಅವನ್ನು ತನ್ನ ಮನಸ್ಸಿನ ನೆಮ್ಮದಿಗಾಗಿ, ಆತ್ಮಸಂತೋಷಕ್ಕಾಗಿ, ಬಂಧು-ಬಳಗದ ಜೊತೆಗೂಡಿ ಮಾಡಿಕೊಂಡ ಹಬ್ಬ-ಹರಿದಿನ, ಹುಣ್ಣಿಮೆ ರಾತ್ರಿಗಳಲ್ಲಿ ಈ ಹಾಡು, ಕುಣಿತಗಳನ್ನು ಅಭಿವ್ಯಕ್ತಿಸುತ್ತಾ ಬಂದನು. ಈ ಹಾಡು, ಕುಣಿತಗಳು ಮುಂದೆ ವಿಭಿನ್ನತೆ ಪಡೆದುಕೊಂಡು ವಿಧ-ವಿಧವಾದ ಕುಣಿತಗಳಿಗೆ ಬೇರೆ, ಬೇರೆ ಹೆಸರುಗಳನ್ನು ಇಟ್ಟುಕೊಂಡು ತನಗೆ ಹೇಗೆ ಬೇಕೋ ಹಾಗೆ ಬದಲಾವಣೆ ಮಾಡಿಕೊಂಡಿರುವುದಲ್ಲದೆ, ಮುಂದೆ ಅವುಗಳನ್ನು ಹೇಗೆ ನಿಭಾಯಿಸಿಕೊಂಡು ಹೋಗಬೇಕು ಎಂಬುದರ ಕುರಿತಾಗಿ ಈ ಹಾಡು, ಕುಣಿತಗಳಿಗೆ ಬೇರೆ ಬೇರೆ ಹೆಸರುಗಳನ್ನು ಇಟ್ಟು ಪ್ರತ್ಯೇಕ ಸ್ಥಾನಮಾನ ನೀಡಿರುವಂತೆ ತೋರುತ್ತದೆ. ಈ ಹಾಡು, ಕುಣಿತಗಳನ್ನು ಆಯಾ ಚಟುವಟಿಕೆಗಳನ್ನಾಧರಿಸಿ ವಿಭಾಗಿಸಿರುವುದಿದೆ. ಉದಾಹರಣೆಗೆ 'ದಾಸರಿಂದ ಆಡುವ ಆಟವನ್ನು ದಾಸರಾಟ' ಎಂದೂ, ಬಯಲಿನಲ್ಲಿ ರಾಮಾಯಣ, ಮಹಾಭಾರತದ ಸನ್ನಿವೇಶಗಳಿಗೆ ವೇಷಭೂಷಣ ಹಾಕುತ್ತಾ ಆಡುವ ಆಟವನ್ನು ಬಯಲಾಟ ಎಂದೂ, ಒಂದು ಪೊಗದಸ್ತಾದ ಹೋರಿಯನ್ನು ಪಳಗಿಸಿ ಆಡಿಸುವ ಆಟವನ್ನು ಕೋಲೆ ಬಸವನಾಟ ಎಂದೂ ಹಾಗೂ ಕೋಲುಕಡ್ಡಿಗಳನ್ನು ಹಿಡಿದುಕೊಂಡು ವರ್ತುಲಾಕಾರವಾಗಿ ಸುತ್ತುತ್ತಾ ಹಾಡುಗಳಿಗೆ ಸರಿಯಾಗಿ ಹೆಜ್ಜೆ ಹಾಕುವ ಆಟವನ್ನು ಕೋಲಾಟ ಎಂದೂ ಹೀಗೆ ತನ್ನ ಅನುಕೂಲಕ್ಕಾಗಿ ಪ್ರತ್ಯೇಕ ಹೆಸರುಗಳನ್ನು ನೀಡಿದ ಮಾನವನು ಅವುಗಳ ಜನಪ್ರಿಯತೆಗಾಗಿ

ತಾನು ಅವುಗಳಲ್ಲಿ ಸೇರಿ ಪ್ರದರ್ಶನ ಮಾಡುತ್ತಾ ಅವುಗಳಲ್ಲಿ ಒಂದಾದನು. ಹೀಗೆ ಕೋಲಾಟ, ದಾಸರಾಟ, ಬಯಲಾಟ, ಕೋಲೆ ಬಸವನಾಟ, ಮೋಡಿ ಆಟ, ಬೇಡರ ಕುಣಿತ ಮತ್ತು ಬುರ್ರಕಥಾ ಮುಂತಾದ ಕುಣಿತಗಳು ಸಮಷ್ಠಿಯಿಂದ ವ್ಯಷ್ಠಿಯತ್ತ ಹೆಜ್ಜೆ ಇರಿಸಿರುವುದು ಕಾಣಬಹುದು.

ಜನಪದ ಕಲೆಗಳಲ್ಲಿ ಒಂದೊಂದು ನೃತ್ಯ ಕಲೆಗೂ ಅದರದ್ದೇ ಪ್ರಾಚೀನತೆ ಇದ್ದೇ ಇರುತ್ತದೆ. ಪ್ರತಿಯೊಂದು ನೃತ್ಯ ಕಲೆಗಳು ಭಾರತಾದ್ಯಂತ ಪ್ರಚಲಿತದಲ್ಲಿವೆ. ಈ ಕುಣಿತಗಳಲ್ಲಿ ಒಂದಾದ ಕೋಲಾಟವು ಸರ್ವವ್ಯಾಪಿಯಾಗಿ ಜನಪ್ರಿಯ ಪಡೆದಿರುವ ಕಲೆ ಎನಿಸಿಕೊಂಡಿದೆ.

ಜನಪದ ನೃತ್ಯ ಕಲೆಯಾದ ಕೋಲಾಟವು ಆರಂಭದಲ್ಲಿ ಮನರಂಜನೆಯನ್ನು ನೀಡುವ ಕಲೆ ಎನಿಸಿಕೊಂಡಿದ್ದು ಬರಬರುತ್ತಾ ಈ ಆಟಕ್ಕೆ ದೈವಿಕತೆ ಮತ್ತು ಧಾರ್ಮಿಕ ಸ್ಪರ್ಶ ನೀಡಿರುವುದು ಗೋಚರಿಸುತ್ತದೆ. ಕೋಲಾಟವು ತ್ರೇತಾಯುಗದ ಕೃಷ್ಣನೊಂದಿಗೆ ಕಲ್ಪಿಸಿ, ಕೃಷ್ಣನು ಬೃಂದಾವನದಲ್ಲಿ ಗೋಪಿಕಾ ಸ್ತ್ರೀಯರೊಂದಿಗೆ ಕೋಲಾಟವಾಡಿದ ಎಂಬುದರ ಬಣ್ಣನೆಗಳು ಭಾರತೀಯ ಸಾಹಿತ್ಯ ಚರಿತ್ರೆಯಲ್ಲಿ ವ್ಯಾಪಿಸಿರುವುದನ್ನು ಕಾಣಬಹುದು.

ಜನಸಾಮಾನ್ಯರ ಕುಣಿತವೆನಿಸಿಕೊಂಡಿರುವ ಕೋಲಾಟಕ್ಕೆ ಮಹತ್ವದ ಸ್ಥಾನ ನೀಡುವುದಕ್ಕಾಗಿ ಶ್ರೀಕೃಷ್ಣನೊಂದಿಗೆ ಕೋಲಾಟ ಸಂಬಂಧ ಕಲ್ಪಿಸಿರುವುದು ಕಂಡು ಬರುತ್ತದೆ. ಹಾಗೆಯೇ ಕೃಷ್ಣನ ಕೂಡಿ - ಗೊಲ್ಲತಿಯರು ಕೋಲಾಟವಾಡುವುದು, ಗೊಲ್ಲರು ಆರಾಧ್ಯದೇವನಾಗಿ ಕೃಷ್ಣನನ್ನು ಪೂಜಿಸುವುದನ್ನು ನೋಡಿದಾಗ, ಗೊಲ್ಲ ಸಮುದಾಯವು ಶ್ರೀಕೃಷ್ಣನ ಒಕ್ಕಲುಗಳು ಎಂದು ತಿಳಿಸುವುದಲ್ಲದೆ, ಕೋಲಾಟದಲ್ಲಿ ಗೊಲ್ಲ ಸಮುದಾಯವು ಪ್ರಾಚೀನತೆಯನ್ನು ಪಡೆದಿರುವುದು ಸ್ಪಷ್ಟವಾಗಿ ತಿಳಿಯುತ್ತದೆ. ಹಾಗೆಯೇ ಈ ಸಮುದಾಯದವರು ಅಥವಾ ಬೇರೆ ಸಮುದಾಯದವರು ಹಾಡುವ ಕೋಲಾಟದ ಪದಗಳಲ್ಲಿ ಕೃಷ್ಣ ಮತ್ತು ಗೊಲ್ಲತಿಯರ ಕುರಿತು ಕೋಲುಪದಗಳನ್ನು ಅನಾವರಣ ಮಾಡುವುದಿದೆ. ಬೇರೆ, ಬೇರೆ, ಸಮುದಾಯದವರಾದ ನಾಯಕ, ಒಕ್ಕಲಿಗ, ಕೊರಮ, ಕೊರಚ, ಲಂಬಾಣಿ ಮುಂತಾದ ಸಮುದಾಯದವರ ಕೋಲಾಟದಲ್ಲಿ ಊರದೇವರುಗಳನ್ನು, ಸಾಂಸ್ಕೃತಿಕ-ನಾಯಕ-ನಾಯಕಿಯರ ಆರಾಧನೆ ಮಾಡುವುದರೊಂದಿಗೆ ಕೋಲಾಟದ ಕಲೆಗೆ ದೈವಿಕ ಸ್ಥಾನಮಾನ ನೀಡಿರುವುದು ಗೋಚರಿಸುತ್ತದೆ.

### ೩.೧. ಕೋಲಾಟದ ಪ್ರಾಚೀನತೆ

ಜನಪದ ಕುಣಿತವಾದ ಕೋಲಾಟವು ಹೆಚ್ಚಾಗಿ ಜನಸಾಮಾನ್ಯರನ್ನು ಸೆಳೆದುಕೊಂಡಿದೆ. ಹಾಗೆಯೇ ರಾಜಮಹಾರಾಜರು - ರಾಣಿಯರನ್ನು ಕೋಲಾಟವು ಆಕರ್ಷಿಸಿದೆ. ಮೂಲತಃ ಕೋಲಾಟವು ಪುರುಷರ ಕುಣಿತವಾದರೂ ರಾಜರ ಆಸ್ಥಾನಗಳಲ್ಲಿ ಸ್ತ್ರೀಯರು - ಬಾಲಿಕೆಯರು ಈ ಕುಣಿತವನ್ನು ಹೆಚ್ಚು ಮನೋಹರಗೊಳಿಸಿದರು. ವಿಜಯನಗರ ಸಾಮ್ರಾಜ್ಯದ ಹಂಪಿ ಪರಿಸರದ ದೇವಾಲಯಗಳಲ್ಲಿ ಕಂಡುಬರುವ ಕೋಲಾಟದ ಉಬ್ಬು ಶಿಲ್ಪಗಳಲ್ಲಿ ಹೆಚ್ಚಾಗಿ ಹೆಂಗಸರು ಅಥವಾ ಬಾಲಿಕೆಯರು

ಕೋಲುಕಡ್ಡಿಗಳನ್ನು ಹಿಡಿದು ಪರಸ್ಪರರಿಗೆ ಕೋಲುಗಳನ್ನು ತಾಕಿಸುತ್ತಾ ನೃತ್ಯ ಮಾಡುತ್ತಿರುವಂತೆ ಕೆತ್ತಿರುವ ಚಿತ್ರಗಳು ಕಂಡು ಬರುತ್ತವೆ.

ವಿಜಯನಗರ ಸಾಮ್ರಾಜ್ಯದಲ್ಲಿ ಹಂಪಿ ಪರಿಸರದ ದೇವಾಲಯಗಳಲ್ಲಿ ಬಾಲಿಕೆಯರು ನೃತ್ಯ ಮಾಡುವ ಭಂಗಿಗಳು ಇರುವ ದೇವಾಲಯಗಳನ್ನು ವಿದ್ವಾಂಸರಾದ ಚಲುವರಾಜು ಅವರು ಈ ರೀತಿಯಾಗಿ ಹೆಸರಿಸಿರುವುದಿದೆ. "ಹೆಣ್ಣುಮಕ್ಕಳ ಕೋಲಾಟದ ವಿವಿಧ ಭಂಗಿಗಳು ಮಹಾನವಮಿದಿಬ್ಬ, ವಿಠಲ ದೇವಾಲಯ, ಹಜಾರರಾಮ ದೇವಾಲಯ, ವಿರೂಪಾಕ್ಷ ದೇವಾಲಯಗಳಲ್ಲಿ ಕಾಣಬಹುದು" (ಚಲುವರಾಜು; ೨೦೦೦; ಪುಟ ೬೫) ಎಂದಿರುವುದನ್ನು ಗಮನಿಸಿದರೆ, ವಿಜಯನಗರ ಸಾಮ್ರಾಜ್ಯದ ರಾಜ-ಮಹಾರಾಜರ ಕಾಲದಲ್ಲಿ ರಾಣಿಯರು ಮತ್ತು ರಾಣಿಯ ಸಖಿಯರು ಕೋಲಾಟವಾಡುತ್ತಿದ್ದರು ಹಾಗೂ ಹಂಪಿ ಪರಿಸರದ ಸುತ್ತಮುತ್ತಲೂ ಇಂದಿಗೂ ಗೌರಿಹುಣ್ಣಿಮೆ ಹಬ್ಬಕ್ಕೆ ಮಹಿಳೆಯರು, ಬಾಲಿಕೆಯರು ಕೋಲಾಟವಾಡುತ್ತಿರುವುದು ಕಂಡು ಬರುತ್ತದೆ. ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗೂ ಮುನ್ನವೇ ಈ ಪರಿಸರದಲ್ಲಿ ಬಾಲಿಕೆಯರ ಕೋಲಾಟ ನಡೆಯುತ್ತಿದ್ದು ಇದನ್ನು ಗಮನಿಸಿದ ರಾಜರು ಹಂಪಿ ಸಾಮ್ರಾಜ್ಯದಲ್ಲಿ ದೇವಾಲಯಗಳನ್ನು ನಿರ್ಮಾಣ ಮಾಡುವ ಕಾಲಕ್ಕೆ ಬಾಲಿಕೆಯರ ಕೋಲಾಟವನ್ನು ಗಮನಿಸಿದ್ದಿರಬಹುದು. ಹಾಗಾಗಿ ದೇವಾಲಯಗಳ ಉಬ್ಬುಶಿಲ್ಪಗಳಲ್ಲಿ ಕೋಲಾಟವಾಡುವ ಮಹಿಳೆಯರ ಉಬ್ಬುಶಿಲ್ಪಗಳನ್ನು ಕೆತ್ತಿಸಿರಲಿಕ್ಕೂ ಸಾಧ್ಯ ಎಂದು ಕಾಣುತ್ತದೆ.

ವಿಜಯನಗರೋತ್ತರ ಕಾಲದಿಂದಲೂ ಕೋಲಾಟವು ಪ್ರಚಲಿತವಿದೆ ಎಂದು ಶಿವಲೀಲಾ ಅವರು ಹೀಗೆ ಹೇಳಿದ್ದಾರೆ. "ಕಾಮಲಾಪುರ ನಗರೇಶ್ವರ ದೇವಾಲಯದ ಭಿತ್ತಿಯಲ್ಲಿ ಉಬ್ಬುಶಿಲ್ಪದ ಕೋಲಾಟದ ಚಿತ್ರಣವು ಇರುವುದು ವಿಜಯನಗರೋತ್ತರ ಕಾಲದಿಂದಲೂ ಈ ಕೋಲಾಟ ನಡೆದು ಬಂದಿದೆ ಎಂಬುದಕ್ಕೆ ಉತ್ತಮ ಉದಾಹರಣೆಯಾಗಿದೆ"(ಶಿವಲೀಲಾ; ೨೦೦೮; ಪುಟ ೨೦೬) ಎಂದಿರುವುದನ್ನು ಗಮನಿಸಿದರೆ ಕೋಲಾಟಕ್ಕೆ ಹಲವು ಶತಮಾನಗಳ ಇತಿಹಾಸ ವಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ.

ಕೋಲಾಟದ ಇತಿಹಾಸಕ್ಕೆ ಸಂಬಂಧಿಸಿದಂತೆ ವಿದ್ವಾಂಸರಾದ ಸೋಮನಾಥ ನುಚ್ಚಾ ಅವರು ಈ ರೀತಿಯಾಗಿ ಪ್ರತಿಕ್ರಿಯಿಸಿರುವುದು ಇದೆ. "ಎರಡನೆಯ ದೇವರಾಯನ ಕಾಲಕ್ಕೆ ಕ್ರಿ.ಶ. ೧೪೪೪ರಲ್ಲಿ ವಿಜಯನಗರವನ್ನು ಸಂದರ್ಶಿಸಿದ 'ನಿಕೊಲೊ-ದೆ-ಕೊಂತಿ' ಎಂಬ ವಿದೇಶಿ ಯಾತ್ರಿಕನು ತಾನು ಕಂಡು ಬಂದ ಮದುವೆಯ ಒಂದು ಸಂದರ್ಭವನ್ನು ವಿವರಿಸುತ್ತ... ಕೆಲವರು ಬಣ್ಣದ ಕೋಲುಗಳನ್ನು ಹಿಡಿದು ಕೋಲಾಟವಾಡುತ್ತಾರೆ. ಇದನ್ನೆಲ್ಲ ನೋಡುವುದಕ್ಕೆ ಬಹಳ ಆನಂದವೆನಿಸುತ್ತದೆ ಎಂದು ಹೇಳಿದ್ದಾನೆ. ಅಂದಿನ ಸಾಂಸ್ಕೃತಿಕ ಮತ್ತು ಸಾಮಾಜಿಕ ಜೀವನದಲ್ಲಿ ಕೋಲಾಟವು ಮಹತ್ವದ ಸ್ಥಾನವಹಿಸಿತ್ತೆಂಬುದನ್ನು ನಿಕೊಲೆ-ದೆ-ಕೊಂತಿಯ ಹೇಳಿಕೆ ಸಮರ್ಥಿಸುತ್ತದೆ"(ಸೋಮನಾಥ ನುಚ್ಚಾ; ೨೦೦೭; ಪುಟ xxxvi-vii) ಎಂಬುದಾಗಿ ಅಭಿಪ್ರಾಯಿಸಿದ್ದಾರೆ. ನಿಕೊಲೊ-ದೆ-ಕೊಂತಿಯವರ

ಮಾತಿನಿಂದ ಕೋಲಾಟ ಪ್ರಾಚೀನತೆಯ ಸಂದರ್ಭದಲ್ಲೂ ಜನಪ್ರಿಯತೆಯನ್ನು ಪಡೆದುಕೊಂಡಿತ್ತು. ಜನಮಾನಸದಲ್ಲಿ ಅತಿಯಾದ ಉತ್ಸಾಹ ಮತ್ತು ಮನೋರಂಜನೆಯನ್ನು ಈ ಕೋಲಾಟವು ನೀಡುತ್ತಿತ್ತು ಎಂಬುದಾಗಿ ತಿಳಿದು ಬರುತ್ತದೆ.

ಜನಪದದಲ್ಲಿ ಪ್ರಮುಖ ಗೀತ ಪ್ರಕಾರವಾದ ಕೋಲಾಟವು ಶಿಷ್ಟ ಸಮುದಾಯವನ್ನು ಆಕರ್ಷಿಸುತ್ತ, ಬರಬರುತ್ತ ಶಾಸ್ತ್ರ ಗ್ರಂಥಗಳಲ್ಲಿ ಸ್ಥಾನ ಪಡೆದುದು ಅತ್ಯಂತ ಮಹತ್ವದ ಸಂಗತಿಯಾಗಿದೆ. ಶಾಸ್ತ್ರೀಯ ಕೃತಿಗಳಲ್ಲೂ ಕೋಲಾಟವು ಮಹತ್ವದ ಸ್ಥಾನ ಪಡೆದಿದೆ ಎಂದು ವಿದ್ವಾಂಸರಾದ ಸೋಮನಾಥ ನುಚ್ಚಾ ಅವರು ಹೀಗೆ ಹೇಳುತ್ತಾರೆ.

"ಕರ್ನಾಟಕದವನಾದ ೧೬ನೇ ಶತಮಾನದ ಪುಂಡಲೀಕ ವಿಠಲವೆಂಬ ಶಾಸ್ತ್ರಕಾರನು ತನ್ನ 'ನರ್ತನನಿರ್ಣಯ' ಎಂಬ ಕೃತಿಯಲ್ಲಿ ಕೋಲಾಟವನ್ನು 'ದಂಡರಾಸ'(ದಂಡ-ಕೋಲು, ರಾಸ-ಕುಣಿತ) ಎಂದು ಕರೆದಿದ್ದಾನೆ. ೮೯೭ ರಿಂದ ೯೦೪ರವರೆಗಿನ ಶ್ಲೋಕಗಳು ದಂಡರಾಸದ ವರ್ಣನೆಗೆ ಮೀಸಲಾಗಿವೆ"(ಸೋಮನಾಥ ನುಚ್ಚಾ; ೨೦೦೬; ಮುನ್ನುಡಿ; ಪುಟ xxxvi) ಎಂದಿದ್ದಾರೆ. ಹೀಗೆ ಕೋಲಾಟವು ಬರಬರುತ್ತಾ ಜನಪದ ಸಾಹಿತ್ಯವೊಂದರಲ್ಲಿಯೇ ತನ್ನ ವ್ಯಾಪ್ತಿಯನ್ನು ಸಂಕುಚಿತ ಮಾಡಿಕೊಳ್ಳದೆ ಶಿಷ್ಟ ಸಮುದಾಯವನ್ನು ತನ್ನೆಡೆಗೆ ಆಕರ್ಷಿಸುತ್ತಾ ಶಾಸ್ತ್ರೀಯ ಕೃತಿಗಳಲ್ಲೂ ತನ್ನ ವಿಶಾಲವಾದ ವ್ಯಾಪ್ತಿಯನ್ನು ಹರಡಿಕೊಂಡಿರುವುದು ಕಂಡು ಬಂದಿದೆ. ಹೀಗೆ ಕೋಲಾಟದ ಪ್ರಾಚೀನತೆ ತ್ರೇತಾಯುಗದ ಕೃಷ್ಣ-ಗೋಪಿಕಾ ಸ್ತ್ರೀಯರ ಪೌರಾಣಿಕತೆಯೊಂದಿಗೆ ಸೇರಿ ಹೋಗಿದೆ. ಹಾಗೆಯೇ ಕೃಷ್ಣ-ಗೊಲ್ಲತಿಯ ಕೋಲಾಟದ ಹಾಡುಗಳ ಸಂಭಾಷಣೆಯಿಂದ ಗೊಲ್ಲ ಸಮುದಾಯದೊಂದಿಗೂ ಸೇರಿಕೊಂಡಿದೆ. ಹೀಗೆ ಕೋಲಾಟ ಪ್ರಾಚೀನತೆಯು ಯುಗಗಳಿಂದ ಶತಮಾನಗಳವರೆಗೆ ತನ್ನ ಪ್ರಾಚೀನತೆಯ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ.

### ೩.೨. ಭಾರತದಲ್ಲಿ ಕೋಲಾಟ

ಕೋಲಾಟವು ಭಾರತಾದ್ಯಂತ ಜನಪ್ರಿಯವಾದ ಒಂದು ಜನಪದ ನೃತ್ಯ ಕಲೆಯಾಗಿದೆ. ಕೋಲಾಟವು ತನ್ನಲ್ಲಿ ಸಾಹಿತ್ಯ, ನೃತ್ಯ ಮತ್ತು ಸಂಗೀತ ಮೂರನ್ನು ಸೇರಿಸಿಕೊಂಡು 'ವಿವಿಧತೆಯಲ್ಲಿ ಏಕತೆ' ಎಂಬ ತತ್ವಕ್ಕೆ ಇದೊಂದು ಉತ್ತಮ ಉದಾಹರಣೆ ಎನಿಸಿಕೊಂಡಿದೆ. ಈ ಆಟವು ಅಲ್ಲಲ್ಲಿ ಪ್ರಾದೇಶಿಕವಾಗಿ ಮತ್ತು ಭಾಷಿಕವಾಗಿ ಭಿನ್ನತೆಗಳು ಕಂಡು ಬಂದರೂ ಮೂಲದಲ್ಲಿ ಸ್ವರೂಪ ಲಕ್ಷಣಗಳು ಒಂದೇ ಆಗಿರುತ್ತವೆ.

ದಕ್ಷಿಣ ಭಾರತದಲ್ಲಿ ಕೋಲಾಟವು ಹೆಚ್ಚು ಜನಪ್ರಿಯತೆ ಪಡೆದುಕೊಂಡಿದೆ. ದಕ್ಷಿಣ ಭಾರತದ ಕರ್ನಾಟಕ, ಆಂಧ್ರಪ್ರದೇಶ, ಕೇರಳ ಮತ್ತು ತಮಿಳುನಾಡು ರಾಜ್ಯಗಳು ಒಂದಕ್ಕೊಂದು ಗಡಿ ಪ್ರಾಂತವನ್ನು ಸೇರಿಸಿಕೊಂಡಿದ್ದು, ಈ ರಾಜ್ಯಗಳ ಕೋಲಾಟವು ಸಾಮಾನ್ಯವಾಗಿ ಒಂದೇ ತೆರನಾದ ಸ್ವರೂಪ, ಲಕ್ಷಣಗಳನ್ನು ಒಳಗೊಂಡಿರುವುದು ಕಂಡು ಬರುತ್ತದೆ. ವಿದ್ವಾಂಸರಾದ ಸೋಮನಾಥ ನುಚ್ಚಾ ಅವರು ಭಾರತದಲ್ಲಿ ಕೋಲಾಟದ ಕುರಿತು ಪ್ರಸ್ತಾಪಿಸುತ್ತಾ ಹೀಗೆ ಹೇಳುತ್ತಾರೆ.

"ಮಹಾರಾಷ್ಟ್ರದಲ್ಲಿ ಪ್ರಚಾರದಲ್ಲಿರುವ ಕೋಲಾಟವು ದಕ್ಷಿಣ ಭಾರತದ ಕೋಲಾಟವನ್ನು ಹೆಚ್ಚಾಗಿ ಹೋಲುತ್ತದೆ" ಎಂದಿದ್ದಾರೆ(ಸೋಮನಾಥ ನುಚ್ಚಾ; ೨೦೦೬; ಮುನ್ನುಡಿ; ಪುಟ xxxvii).

ಕರ್ನಾಟಕದ ನೆರೆಯ ರಾಜ್ಯವಾದ ಆಂಧ್ರಪ್ರದೇಶವು ಕೋಲಾಟದಲ್ಲಿ ಜನಪ್ರಿಯತೆಯನ್ನು ಪಡೆದಿದೆ. ಈ ರಾಜ್ಯದ ಕೋಲಾಟದಲ್ಲಿನ ವಿಶೇಷತೆ ಎಂದರೆ ಹುಡುಗಿಯರು ಕೋಲಾಟವನ್ನು ಪ್ರದರ್ಶನ ಮಾಡುತ್ತಾರೆ. ಕರ್ನಾಟಕ ಮತ್ತು ಆಂಧ್ರಪ್ರದೇಶದ ಗಡಿ ಪ್ರಾಂತಗಳ ಕೋಲಾಟ ಪದಗಳ ವಿಶೇಷತೆ ಎಂದರೆ ಒಂದೇ ರೀತಿಯ ಸಮಾನಾಂಶಗಳು ಮತ್ತು ಹೋಲಿಕೆಗಳು ಕಂಡು ಬರುತ್ತವೆ. ಹಾಗಾಗಿ ಕರ್ನಾಟಕ ಮತ್ತು ಆಂಧ್ರಪ್ರದೇಶದ ಕೋಲಾಟದ ಸ್ವರೂಪ ಲಕ್ಷಣಗಳು ಒಂದೇ ಎಂಬುದಾಗಿ ಗೋಚರಿಸುತ್ತದೆ. ಆಂಧ್ರ - ಕರ್ನಾಟಕ ಎರಡೂ ರಾಜ್ಯಗಳಲ್ಲಿ ಜಡೆ ಕೋಲಾಟವೂ ಸಾಕಷ್ಟು ಜನಪ್ರಿಯತೆ ಪಡೆದಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ.

ಸೋಮನಾಥ ನುಚ್ಚಾ ಅವರು ತಮ್ಮ ಕೃತಿಯಾದ ಕೋಲಾಟ ಪದಗಳು ಪ್ರಸ್ತಾವನೆಯಲ್ಲಿ ಅಸ್ಸಾಂ ಮತ್ತು ರಾಜಸ್ತಾನ ಬುಡಕಟ್ಟು ಸಮುದಾಯಗಳ ಕೋಲಾಟದ ಕುರಿತಾಗಿ ಈ ರೀತಿ ಪ್ರತಿಕ್ರಿಯಿಸಿದ್ದಾರೆ. "ಆಸಾಮಿನ ಲುಷಾಯ್ ಮತ್ತು ಗಾರೋ ಬೆಟ್ಟಗಳಲ್ಲಿ ವಾಸಿಸುವ ಬುಡಕಟ್ಟಿನವರು ಆಡುವ ಕೋಲಾಟವನ್ನು ಬಿದಿರು ನೃತ್ಯ ಎಂದು ಕರೆಯಲಾಗಿದೆ. ರಾಜಸ್ಥಾನದ ಭಿಲ್ಲರು ವಿವಾಹದ ಸಂದರ್ಭದಲ್ಲಿ ತಪ್ಪದೇ ಕೋಲಾಟವಾಡುತ್ತಾರೆ. ಪುರುಷರು ಮತ್ತು ಸ್ತ್ರೀಯರು ಬೇರೆ ಬೇರೆಯಾಗಿ ವೃತ್ತಾಕಾರದಲ್ಲಿ ನಿಂತು ಕೋಲಾಟವಾಡುತ್ತಾರೆ ಎಂದು ಕಪಿಲಾ - ವಾತ್ಸಾಯನ ಅವರು ಹೇಳಿದ್ದಾರೆ" (ಸೋಮನಾಥ ನುಚ್ಚಾ; ೨೦೦೬; ಪ್ರಸ್ತಾಪನೆ; ಪುಟ xxxvi-vii) ಎಂದು ಸೋಮನಾಥ ನುಚ್ಚಾ ಅವರು ತಿಳಿಸಿರುವುದು ಇದೆ. ಹಾಗೆಯೇ ಇದೇ ಕೃತಿಯ ಪ್ರಸ್ತಾವನೆಯಲ್ಲಿ ಸೋಮನಾಥ ನುಚ್ಚಾ ಅವರು ರಾಜಾಸ್ತಾನ ಗರಾಸಿ ಜನಾಂಗದವರು ನೃತ್ಯ ಸಂದರ್ಭದಲ್ಲಿ ಕೋಲುಗಳನ್ನು ಬಳಸುತ್ತಾರೆ ಎಂದು ಪ್ರಸ್ತಾಪಿಸಿರುವುದು ಇದೆ. "ರಾಜಸ್ತಾನ ಗರಾಸಿಯ ಜನಾಂಗದವರು 'ಚಾಂಗ್‌ನೃತ್ಯ'ದಲ್ಲಿ ಕೋಲುಗಳನ್ನು ಬಳಸುತ್ತಾರೆಂದು ಶ್ರೀ ಡಿ.ಆರ್. ಅಹುಜಾ (ಫೋಕಲೋರ್) ಆಫ್ ರಾಜಸ್ಥಾನ"(ಪುಟ ೧೩೦) ಅವರು ಹೇಳಿದ್ದಾರೆ ಎಂಬುದನ್ನು ತಿಳಿಸಿದ್ದಾರೆ(ಸೋಮನಾಥ ನುಚ್ಚಾ; ೨೦೦೬; ಪ್ರಸ್ತಾಪನೆ; ಪು. xxxvi-vii).

"ಆಂಧ್ರ ಪ್ರದೇಶದ ಆದಿಲಾಬಾದ್ ಜಿಲ್ಲೆಯ ರಾಜಗೊಂಡರಿಗೆ ದೀಪಾವಳಿ ಒಂದು ದೊಡ್ಡ ಹಬ್ಬ. ಈ ಹಬ್ಬದ ಸಂದರ್ಭದಲ್ಲಿ ಬಣ್ಣ ಬಣ್ಣದ ಉಡುಪುಗಳನ್ನು ಧರಿಸಿ ಆಭರಣಗಳಿಂದ ಅಲಂಕರಿಸಿಕೊಂಡು ಆಡುವ ಕೋಲಾಟವನ್ನು 'ದಂಡಾರಿ ನೃತ್ಯ'ವೆಂದು ಕರೆಯುತ್ತಾರೆ" ಎಂದು ಬಿ. ರಾಮರಾಜು ಹೇಳಿರುವುದನ್ನು ಕಾಣಬಹುದು(ರಾಮರಾಜು.ಬಿ.(ಮೂಲ); ಆರ್ವಿಯಸ್ ಸುಂದರಂ(ಅನು); ೧೯೮೭; ಪುಟ ೧೨೯).

ಸೋಮನಾಥ ನುಚ್ಚಾ ಅವರು ತಮ್ಮ ಕೋಲಾಟದ ಪದಗಳು ಕೃತಿಯ ಪ್ರಸ್ತಾವನೆಯಲ್ಲಿ ಸೌರಾಷ್ಟ್ರ ಮತ್ತು ಗುಜರಾತಿನ ಕೋಲಾಟದ ಕುರಿತು ಹೀಗೆ ನಿರೂಪಿಸಿದ್ದಾರೆ. "ಸೌರಾಷ್ಟ್ರದ

ದಂಡಿಯಾರಾಸ್ ಒಂದು ಜನಪ್ರಿಯ ಕೋಲಾಟವಾಗಿದೆ". ಇದು ಕರ್ನಾಟಕದಲ್ಲಿ ಪ್ರಚಲಿತವಿರುವ ಜಡೇ ಕೋಲಾಟವನ್ನು ಸಂಪೂರ್ಣವಾಗಿ ಹೋಲುತ್ತದೆ. ದಕ್ಷಿಣ ಭಾರತದ ಕೋಲಾಟವು ಸಾಮಾನ್ಯವಾಗಿ ಗುಜರಾತಿನ ಗಾರ್ಭಾ ಮತ್ತು ಸೌರಾಷ್ಟ್ರದ 'ದಂಡಿಯಾರಾಸ್'ಗಳನ್ನು ಹೋಲುತ್ತದೆ"(ಸೋಮನಾಥ ನುಚ್ಚಾ; ೨೦೦೬; ಪ್ರಸ್ತಾಪನೆ; ಪುಟ xxxviii) ಎಂಬುದಾಗಿ ತಿಳಿಸಿದ್ದಾರೆ.

**೩.೩. ಕರ್ನಾಟಕಾಂಧ್ರದಲ್ಲಿ ಕೋಲಾಟ**

ಭಾರತಾದ್ಯಂತ ಪ್ರಚಲಿತವಿರುವ ಕೋಲಾಟವು ದಕ್ಷಿಣ ಭಾರತದ ರಾಜ್ಯಗಳಾದ ಕರ್ನಾಟಕ, ಕೇರಳ, ತಮಿಳುನಾಡು ಮತ್ತು ಆಂಧ್ರಪ್ರದೇಶ ರಾಜ್ಯಗಳಲ್ಲಿ ಹೆಚ್ಚು ಜನಪ್ರಿಯತೆ ಗಳಿಸಿರುವ ಕಲೆಗಳಲ್ಲಿ ಕೋಲಾಟವು ಒಂದಾಗಿದೆ. ಹಾಗಾಗಿ ಕೋಲಾಟವನ್ನು ದ್ರಾವಿಡ ಕಲೆ ಎಂದು ಕರೆಯುವುದು ರೂಢಿಯಲ್ಲಿದೆ. ಕರ್ನಾಟಕ - ಆಂಧ್ರಪ್ರದೇಶಗಳಲ್ಲಿ ಕೋಲಾಟವನ್ನು ಸಮಪ್ರಮಾಣವಾಗಿ ಆಡುತ್ತಿರುವುದಿದೆ. ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲಿ ಜಡೇಕೋಲನ್ನು ಆಡುತ್ತಿರುವುದು ಕಂಡುಬಂದಿದೆ. ಈ ಕೋಲನ್ನು ಕರ್ನಾಟಕದಲ್ಲಿ ಜಡೇಕೋಲು ಎಂದು ಕರೆದರೆ ಆಂಧ್ರ ಪ್ರದೇಶದಲ್ಲಿ 'ಜಡಕೋಲಾಟಂ' ಎಂದು ಕರೆಯುತ್ತಾರೆ. ಕರ್ನಾಟಕದಲ್ಲಿ ಜಡೇಕೋಲಾಟವನ್ನು ಹೀಗೆ ಕರೆಯುತ್ತಾರೆ ಎಂದು ವಿದ್ವಾಂಸರಾದ ಜಿ.ಎಸ್. ಮೋಹನ್ ಅವರು ಹೀಗೆ ಪ್ರಸ್ತಾಪಿಸಿದ್ದಾರೆ. 'ಜಡಕೋಲಾಟಾನ್ನಿ ಕನ್ನಡ ದೇಶಂಲೋ 'ಜಡೆಕೋಲು' ಅಂಟಾರು'(ಮೋಹನ್.ಜಿ.ಎಸ್.; ೨೦೦೧; ಪುಟ ೩೦೨).

ಕರ್ನಾಟಕ - ಆಂಧ್ರಪ್ರದೇಶ ಎರಡೂ ರಾಜ್ಯಗಳಲ್ಲಿ ಕೋಲಾಟವು ಪ್ರಸಿದ್ಧಿಯನ್ನು ಪಡೆದಂಥ ಕಲೆ ಎಂಬುದು ಅರಿವಿಗೆ ಬರುತ್ತದೆ. ಕರ್ನಾಟಕ ಮತ್ತು ಆಂಧ್ರ ಪ್ರದೇಶದ ಪ್ರತಿಯೊಂದು ಹಳ್ಳಿಯಲ್ಲೂ ಕೋಲಾಟವು ಕಾಣಸಿಗುವುದು ಸಾಮಾನ್ಯ ಸಂಗತಿ. ಕನ್ನಡ - ತೆಲುಗು ನಾಡಿನ ಪ್ರತಿ ಹಳ್ಳಿಯಲ್ಲೂ ಕೋಲಾಟದ ಕಲಾವಿದರು ಮತ್ತು ಕೋಲಾಟದ ತಂಡಗಳು ಸಹಜವಾಗಿ ಕಾಣಸಿಗುತ್ತವೆ.

ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲಿ ಕೋಲಾಟದ ಜನಪ್ರಿಯತೆಯನ್ನು ವಿದ್ವಾಂಸರಾದ ಅರ್ವೀಯಸ್‌ಸುಂದರಂ ಅವರು ಹೀಗೆ ಅಭಿಪ್ರಾಯಿಸಿದ್ದಾರೆ. 'ನೃತ್ಯ ಗ್ರಂಥಗಳಲ್ಲಿ ದಂಡಿಕಾ ಹಾಗೂ ದಂಡಲಾಸ್ಯ ಎಂಬ ಹೆಸರಿನಲ್ಲಿ ಕೋಲಾಟ ಆಂಧ್ರ ಮತ್ತು ಕರ್ನಾಟಕಗಳಲ್ಲಿ ಸರ್ವೇಸಾಮಾನ್ಯವಾಗಿ ಕಂಡುಬರುತ್ತದೆ'(ಆರ್ವೀಯಸ್ ಸುಂದರಂ; ೧೯೮೭; ಪುಟ ೧೩೯) ಎಂದಿದ್ದಾರೆ. ಸುಂದರಂ ಅವರ ಹೇಳಿಕೆಯನ್ನು ಗಮನಿಸಿದಾಗ ಕರ್ನಾಟಕ-ಆಂಧ್ರಪ್ರದೇಶಗಳಲ್ಲಿ ಕೋಲಾಟವು ಪ್ರಸಿದ್ಧಿ ಪಡೆದಂಥ ಕಲೆಯಾಗಿದೆ ಎಂಬುದು ಅರಿವಿಗೆ ಬರುತ್ತದೆ. ಅಲ್ಲದೇ ಆಂಧ್ರ-ಕರ್ನಾಟಕ ಪ್ರಾಂತಗಳ ಪ್ರತಿಯೊಂದು ಹಳ್ಳಿಯಲ್ಲಿಯೂ ಕೋಲಾಟ ಆಡಬಲ್ಲ ಒಂದು ತಂಡವಿದೆ.

ಕೋಲಾಟವು ಕರ್ನಾಟಕದಲ್ಲಿ ತುಂಬಾ ಜನಪ್ರಿಯತೆಯನ್ನು ಇಂದಿಗೂ ಉಳಿಸಿಕೊಂಡು ಬಂದಿದೆ. ಕರ್ನಾಟಕದ ಪ್ರತಿ ಜಿಲ್ಲೆಯಲ್ಲೂ ಕೋಲಾಟವು ಪ್ರಸಿದ್ಧಿ ಪಡೆದಿರುವುದಲ್ಲದೆ, ಯಾವುದೇ ಸಭೆ-ಸಮಾರಂಭಗಳನ್ನು ಹಮ್ಮಿಕೊಂಡಾಗ ಅಲ್ಲಿ ಒಂದು ಕೋಲಾಟದ ತಂಡ ಹಾಜರಿರುತ್ತದೆ. ಕರ್ನಾಟಕದಲ್ಲಿ ಪ್ರತಿ ಜಿಲ್ಲೆಯ ಪ್ರತಿಯೊಂದು ಹಳ್ಳಿಯಲ್ಲೂ ಕೋಲಾಟ ಆಡುತ್ತಿರುವುದರಿಂದ ನಾನಾ ವಿಧವಾಗಿ ಪ್ರದರ್ಶನ ಮಾಡುವುದು ಕಂಡುಬಂದಿದೆ. ಈ ಆಟದಲ್ಲಿ ಕುಳಿತು ಆಡುವ ಕೋಲಾಟ, ಬಾಗಿಕೊಂಡು ಆಡುವ ಕೋಲಾಟ, ಒಂಟಿಕೋಲಿನಿಂದ ಆಡುವ ಆಟ, ಕಾಲಸಂದಿಯಲ್ಲಿ ಕೋಲು ಕೊಡುವ ಆಟ, ಹಗ್ಗಗಳನ್ನು ಕೈ ಅಥವಾ ಸೊಂಟಕ್ಕೆ ಕಟ್ಟಿಕೊಂಡು ಜಡೆಯ ಆಕಾರಕ್ಕೆ ಬರುವ ಹಾಗೆ ಪೋಣಿಸುವ ಆಟ ಜಡೇಕೋಲಾಟ. ಹೀಗೆ ನಾನಾ ಪ್ರಕಾರಗಳಲ್ಲಿ ಕೋಲಾಟವಾಡುತ್ತಿರುವುದು ಇದೆ. ಕೋಲಾಟದಲ್ಲಿ ಹಲವು ಮಾದರಿಗಳದ್ದು ಒಂದೊಂದು ಪ್ರಾಂತಗಳಲ್ಲಿ ಒಂದೊಂದು ತೆರನಾಗಿ ಆಡುವುದು ಮತ್ತು ಕೋಲುಪದಗಳನ್ನು ಹಾಡುತ್ತಿರುವುದಿದೆ. ಈ ರೀತಿಯ ಭಿನ್ನತೆಗಳಿಗೆ ಆಯಾ ಪ್ರಾಂತಗಳಲ್ಲಿ ನೆಲೆಸಿರುವ ಜನಸಮುದಾಯಗಳ ಭಾಷೆ ಮತ್ತು ಸಂಸ್ಕೃತಿಯೇ ಮೂಲಕಾರಣ ಎಂಬುದಾಗಿ ಕಂಡುಬರುತ್ತದೆ.

ಕರ್ನಾಟಕ-ಆಂಧ್ರಪ್ರದೇಶಗಳ ಎರಡೂ ರಾಜ್ಯಗಳ ಗಡಿಪ್ರಾಂತಗಳಲ್ಲಿ ಕೋಲಾಟವು ಹೆಚ್ಚು ಜನಪ್ರಿಯತೆಯನ್ನು ಮತ್ತು ವಿಶಿಷ್ಟತೆಯನ್ನು ಉಳಿಸಿಕೊಂಡಿದೆ. ಈ ಗಡಿ ಪ್ರಾಂತಗಳಲ್ಲಿ ಪುರುಷರು ಆಡುವ ಕೋಲಾಟವೂ ಸೇರಿ ಮಹಿಳೆಯರು ಸಹ ಕೋಲಾಟವಾಡುವುದಿದೆ. ಈ ಪ್ರಾಂತಗಳಲ್ಲಿ ಬಾಲಕ ಮತ್ತು ಬಾಲಿಕೆಯರು ಒಂದೇ ಮಂಡಲದೊಳಗೆ ವೇದಿಕೆಯನ್ನು ಹಂಚಿಕೊಂಡು ಜೊತೆಗೂಡಿ ಕೋಲಾಟವನ್ನು ಪ್ರದರ್ಶನ ಮಾಡುವುದು ಕಾಣಿಸಿಗುತ್ತದೆ. ಹಾಗೆಯೇ ಕರ್ನಾಟಕ ಮತ್ತು ಆಂಧ್ರದ ಒಳನಾಡುಗಳ ಕೋಲುಪದಗಳಿಗಿಂತ ಈ ಎರಡೂ ರಾಜ್ಯಗಳ ಗಡಿಪ್ರಾಂತಗಳಲ್ಲಿ ಹಾಡುವ ಕೋಲುಪದಗಳು ಬಹುಭಾಷೆ ಮತ್ತು ಬಹುತ್ವ ಸಂಸ್ಕೃತಿಯೊಂದನ್ನು ಅನಾವರಣ ಮಾಡುತ್ತವೆ. ಹಾಗಾಗಿ ಗಡಿನಾಡ ಕೋಲುಪದಗಳು ಇತರೆ ಕೋಲುಪದಗಳಿಗಿಂತ ಭಿನ್ನವಾದ ನೆಲೆಯಲ್ಲಿ ನಿಂತುಕೊಳ್ಳುತ್ತವೆ. ಹೀಗೆ ಕರ್ನಾಟಕ-ಆಂಧ್ರ ಎರಡೂ ರಾಜ್ಯಗಳಲ್ಲಿ ಕೋಲಾಟವು ಅತ್ಯಂತ ಪ್ರಸಿದ್ಧಿ ಪಡೆದಂಥ ಕಲೆಯಾಗಿದೆ ಎಂದರೆ ಅತಿಶಯೋಕ್ತಿಯಲ್ಲ.

### ೩.೪. ಕೋಲಾಟದ ಪರಿಕರಗಳು

ಕೋಲಾಟವು ಒಂದು ಪರಿಪೂರ್ಣವಾದ ಆಟ ಅಥವಾ ಕುಣಿತ ಎನಿಸಿಕೊಳ್ಳಬೇಕಾದರೆ ಈ ಸಾಧನಗಳು ಅಗತ್ಯವಾಗಿ ಇರಬೇಕಾಗುತ್ತದೆ.

೧. ಕೋಲು ಹುಯ್ಯುವ ಕಲಾವಿದರು

೨. ಕೋಲುಪದಗಳು

೩. ಕೋಲುಕಡ್ಡಿಗಳು

೪. ಗೆಜ್ಜೆಸರಗಳು

೫. ತಪ್ಪಡಿ ಮತ್ತು ಹಲಗೆ(ಇವುಗಳಲ್ಲಿ ಯಾವುದಾದರೂ ಒಂದು)

೬. ತಾಳಗಳು

**೩.೪.೧. ಕೋಲು ಹುಯ್ಯುವ ಕಲಾವಿದರು**

ಕೋಲಾಟದಲ್ಲಿ ಮುಖ್ಯವಾಗಿ ಕೋಲು ಹುಯ್ಯುವ ಕಲಾವಿದರು ಇರಬೇಕು. ಈ ಆಟದಲ್ಲಿ ಇಂತಿಷ್ಟೆ ಮಂದಿ ಭಾಗವಹಿಸಬೇಕೆಂಬ ನಿಯಮವಿಲ್ಲ. ಆದರೆ ಸಮಪ್ರಮಾಣದಲ್ಲಿ ಕಲಾವಿದರು ಭಾಗವಹಿಸುವಿಕೆಯು ರೂಢಿಯಲ್ಲಿದೆ. ಕೋಲಾಟಕ್ಕೆ ಕೋಲುಕಡ್ಡಿಗಳು ಮತ್ತು ಕೋಲುಪದಗಳು ಎಷ್ಟು ಅವಶ್ಯಕವೋ ಕಲಾವಿದರು ಕೂಡ ಕೋಲಾಟದಲ್ಲಿ ಅಷ್ಟೇ ಪ್ರಾಮುಖ್ಯತೆ ಪಡೆದಿದ್ದಾರೆ. ಕೋಲಾಟ ಪ್ರದರ್ಶನವಾಗಬೇಕು ಎಂದರೆ ಕಲಾವಿದರು ಹಾಜರಿ ಇದ್ದಾಗ ಮಾತ್ರ ಕೋಲಾಟ ಪ್ರದರ್ಶನ ಸಾಧ್ಯವೆನಿಸುತ್ತದೆ.

ಮಳಲಿ ವಸಂತಕುಮಾರ ಅವರು "ಕೋಲಾಟದಲ್ಲಿ ಭಾಗವಹಿಸುವ ಮಂದಿಯನ್ನು 'ಆಳುಗಳು' ಎಂಬುದಾಗಿಯೂ "ಕೋಲಾಟ" ಎಂಬುದನ್ನು ಕೋಲು ಹುಯ್ಯುವುದು ಎಂಬುದಾಗಿಯೂ ಕರೆಯುವುದು ಹಳ್ಳಿಗಳಲ್ಲಿ ರೂಢಿಯಲ್ಲಿದೆ"(ವಸಂತಕುಮಾರ ಮಳಲಿ; ವೀರಣ್ಣದಂಡೆ(ಸಂ); ೨೦೦೬; ಪುಟ ೨೪೭) ಎಂದಿರುವುದು ಸೂಕ್ತ ಎಂದೆನಿಸುತ್ತದೆ. ಆದರೆ ಕೋಲು ಹುಯ್ಯುವ ಕಲಾವಿದರನ್ನು 'ಆಳುಗಳು' ಎಂದಿರುವುದು ಸಮಂಜಸವಲ್ಲವೇನೋ ಎಂದು ಅನಿಸುತ್ತದೆ. ಆಳುಗಳು ಎಂದರೆ ಇತ್ತೀಚಿನ ಪರಿಭಾಷೆಯಲ್ಲಿ 'ಮನೆ ಅಥವಾ ಹೊಲದ ಕೆಲಸದವರು' ಎಂದು ಅರ್ಥ ಬರುತ್ತದೆ. ಹಾಗಾಗಿ ಆ ಪದವು ಸಮಂಜಸವಲ್ಲ ಮತ್ತು ಕೋಲು ಹುಯ್ಯುವವರ ಸಂಖ್ಯೆ ಸಮನಾಗಿರಬೇಕು. ಕಲಾವಿದರು ಬೆಸಸಂಖ್ಯೆಯಲ್ಲಿ ಇದ್ದರೆ ಕೋಲಾಟ ಪ್ರದರ್ಶನದಲ್ಲಿ ಏರುಪೇರಾಗಿ ಪ್ರದರ್ಶನಕ್ಕೆ ಅಡ್ಡಿಯಾಗುತ್ತದೆ ಈ ಆಟದಲ್ಲಿ ಅತಿ ಕಡಿಮೆ ಎಂದರೆ ಎಂಟು ಮಂದಿಯಿಂದ ಹತ್ತು ಮಂದಿಯವರೆಗೆ ಕೋಲು ಹುಯ್ಯುವ ಕಲಾವಿದರು ಇರಬೇಕು. ಆಗ ಕೋಲಾಟ ಪ್ರದರ್ಶನವು ಆಡುವುದಕ್ಕೂ ಮತ್ತು ನೋಡುವುದಕ್ಕೂ ಚೆಂದ ಅನಿಸುತ್ತದೆ. ಅತಿ ಹೆಚ್ಚು ಎಂದರೆ ಹದಿನಾರರಿಂದ ಇಪ್ಪತ್ತು ಜನ ಕಲಾವಿದರು ಭಾಗವಹಿಸುವುದಿದೆ. ಪ್ರಾದೇಶಿಕವಾಗಿ ಕೆಲವು ಪ್ರಾಂತ್ಯಗಳಲ್ಲಿ ಇಪ್ಪತ್ತಕ್ಕೂ ಅಧಿಕ ಇಪ್ಪತ್ನಾಲ್ಕು, ಇಪ್ಪತ್ತಾರು ಕಲಾವಿದರವರೆಗೂ ಸಂಖ್ಯೆ ಹೆಚ್ಚುತ್ತದೆ.

ಮಳಲಿ ವಸಂತಕುಮಾರ ಅವರು ಕೋಲು ಹುಯ್ಯುವ ಕಲಾವಿದರ ಸಂಖ್ಯೆಯ ಕುರಿತಾಗಿ ವಿಚಾರ ಮಾಡುತ್ತಾ ಈ ರೀತಿ ವ್ಯಾಖ್ಯಾನಿಸಿದ್ದಾರೆ. "ಆಳು ಕೋಲು ಕೊಡಲು ಮತ್ತು ಕುಣಿಯಲು ಅನುಕೂಲವಾಗಿಯೂ ಇರಬೇಕಾದರೆ ಹತ್ತು ಜನರು ಮಾತ್ರ ಸಾಕಾಗುತ್ತದೆ. ಇದಕ್ಕಿಂತ ಹೆಚ್ಚಾದರಾಗಲಿ, ಕಡಿಮೆಯಾದರಾಗಲಿ ಕೋಲುಮೇಳವು ಅಷ್ಟು ಲಗತ್ತಾಗಿ ಕಾಣಿಸುವುದಿಲ್ಲ" ಎಂದಿರುವುದು ಸೂಕ್ತವೆಂದೆನಿಸುತ್ತದೆ(ವೀರಣ್ಣದಂಡೆ(ಸಂ); ೨೦೦೬; ಪುಟ ೨೪೮೫).

ಕರ್ನಾಟಕ - ಆಂಧ್ರ ಗಡಿ ಪರಿಸರದ ಪ್ರದೇಶಗಳಾದ ಚಳ್ಳಕೆರೆ, ಮೊಳಕಾಲ್ಮೂರುಗಳ ಕೆಲವು ಪ್ರಾಂತ್ಯಗಳಲ್ಲಿ ಕೋಲಾಟ ಪ್ರದರ್ಶನ ಮಾಡುವ ಕಾಲಕ್ಕೆ ಹತ್ತರಿಂದ, ಹದಿನಾರು, ಇಪ್ಪತ್ನಾಲ್ಕು ಮಂದಿ ಕಲಾವಿದರು ಭಾಗವಹಿಸುವುದು ಕಂಡುಬಂದಿದೆ. ಚಳ್ಳಕೆರೆಯ ನಾಯಕನಹಟ್ಟಿಯ ಪರಿಸರದಲ್ಲಿ

ಜಡೆ ಕೋಲಾಟವನ್ನು ಆಡುವುದರಲ್ಲಿ ಪ್ರಸಿದ್ಧಿ ಪಡೆದಿದೆ. ಜಡೆ ಕೋಲಾಟವನ್ನು ಹುಯ್ಯುವ ಕಾಲಕ್ಕೆ ಕನಿಷ್ಠವೆಂದರೂ ಹನ್ನೆರಡು ಜನ ಕಲಾವಿದರಿಂದ ಹಿಡಿದು ಹದಿನಾರು ಜನ ಕಲಾವಿದರು ಭಾಗವಹಿಸುತ್ತಾರೆ. ಒಮ್ಮೊಮ್ಮೆ ಕಲಾವಿದರ ಸಂಖ್ಯೆ ಇಪ್ಪತ್ತು ಜನರವರೆಗೂ ಮುಂದುವರಿಯುತ್ತದೆ.

ಕೋಲಾಟದಲ್ಲಿ ಕಲಾವಿದರ ತಂಡಗಳು ಮತ್ತು ಕಲಾವಿದರ ಕುರಿತು ಬಿಳಿಮಲೆ ಅವರು ಹೀಗೆ ಪ್ರಸ್ತಾಪಿಸಿದ್ದಾರೆ.

“ಕೋಲಾಟದ ತಂಡಗಳಲ್ಲಿ ಐದು, ಎಂಟು, ಹತ್ತು ಅಥವಾ ಹನ್ನೆರಡು ಮಂದಿ ಕಲಾವಿದರಿರುತ್ತಾರೆ. ಇಲ್ಲಿನ ಕೋಲಾಟದ ತಂಡಗಳಲ್ಲಿ ಪ್ರಮುಖವಾಗಿ ಎರಡು ಗುಂಪುಗಳಿರುತ್ತವೆ. ಮೊದಲನೆಯದು ಕೋಲಾಟ ಮಾಡುವವರದು. ಎರಡನೆಯದು ಕೋಲಾಟದ ಹಾಡುಗಳನ್ನು ಹೇಳುವವರದು. ಕೋಲಾಟದಲ್ಲಿ ಹಾಡು ಕೋಲಾಟದಷ್ಟೇ ಮುಖ್ಯ” ಎಂದು ಹೇಳಿದ್ದಾರೆ. ವಿದ್ವಾಂಸರಾದ ಬಿಳಿಮಲೆ ಅವರು ಕೋಲಾಟದಲ್ಲಿ ಎರಡು ತಂಡಗಳಿರುತ್ತವೆ ಎಂಬುದನ್ನು ತಿಳಿಸಿದ್ದಾರೆ. ಆದರೆ ಕೆಲವು ಗಡಿ ಪರಿಸರದ ಪ್ರಾಂತ್ಯಗಳಲ್ಲಿ ಕೋಲು ಹುಯ್ಯುವ ಕಲಾವಿದರೊಟ್ಟಿಗೆ ಕೋಲುಪದಗಳನ್ನು ಹಾಡುವ ಕೋಲು ಗುಂಪುಗಳು ಅಥವಾ ಕೋಲು ಮೇಳಗಾರ ಒಬ್ಬರು ಇಲ್ಲವೆ ಇಬ್ಬರು ಇರುವುದೇ ಜಾಸ್ತಿ. ಹೀಗಾಗಿ ಕೋಲು ಹುಯ್ಯುವವರು ಮತ್ತು ಕೋಲುಪದ ಹಾಡುವ ಮೇಳಗಾರರು ಸೇರಿದಾಗ ಮಾತ್ರ ಕೋಲಾಟದ ಒಂದು ಪರಿಪೂರ್ಣ ತಂಡ ಎನ್ನಿಸಿಕೊಳ್ಳುತ್ತದೆ ಎಂಬುದನ್ನು ಕರ್ನಾಟಕ - ಆಂಧ್ರ ಗಡಿ ಪರಿಸರದಲ್ಲಿ ಕಾಣಬಹುದಾಗಿದೆ.

ಕೋಲು ಹುಯ್ಯುವ ಕಲಾವಿದರು, ಕೋಲುಮೇಳಗಾರ ಅಥವಾ ಕೋಲು ತಂಡದ ನಾಯಕನು ಹಾಡುವ ಹಾಡುಗಳನ್ನು ಹಿಂಬಾಲಿಸಿ ಹಾಡುತ್ತಾರೆ. ಪಲ್ಲವಿಯನ್ನು ಅಥವಾ ಚರಣಗಳನ್ನು ಪುನರಾವರ್ತಿಸುತ್ತಾ ಕೋಲುಪ್ರದರ್ಶನ ಮಾಡುತ್ತಾರೆ. ಕೋಲುಮೇಳಗಾರ ಪದಗಳನ್ನು ಹಾಡುತ್ತಾ ಮುಮ್ಮೇಳವನ್ನು ಹಾಡುತ್ತಾನೆ. ಕಲಾವಿದರು ಹಿಮ್ಮೇಳವನ್ನು ಹಾಡುತ್ತಾ ಕೋಲಾಟ ಪ್ರದರ್ಶನ ಮಾಡುವುದು ಕಂಡು ಬರುತ್ತದೆ.

ಜಾನಪದ ವಿದ್ವಾಂಸರಾದ ಪುರುಷೋತ್ತಮ ಬಿಳಿಮಲೆ ಅವರು ಕೋಲಾಟದ ಕಲಾವಿದರ ಕುರಿತು ಪ್ರಸ್ತಾಪಿಸುತ್ತಾ ಹೀಗೆ ಹೇಳುತ್ತಾರೆ. “ಕೋಲಾಟವು ಯಾವಾಗಲೂ ಕಲಾವಿದರು ಶರಣು ಮಾಡುವುದರ ಮೂಲಕ ಆರಂಭವಾಗುತ್ತದೆ” ಎಂದು ಕಲಾವಿದರ ಉಪಸ್ಥಿತಿಯನ್ನು ಕುರಿತು ವಿಚಾರ ಮಾಡುತ್ತಾರೆ”(ಪುರುಷೋತ್ತಮ ಬಿಳಿಮಲೆ; ೧೯೯೭; ಪುಟ ೧೪೧).

ಕೋಲಾಟದ ತಂಡಗಳಲ್ಲಿ, ಆರು, ಎಂಟು, ಹತ್ತು, ಹನ್ನೆರಡು, ಹದಿನಾರು ಮತ್ತು ಇಪ್ಪತ್ತು ಮಂದಿಯವರೆಗೂ ಕಲಾವಿದರು ಇರುತ್ತಾರೆ. ಪ್ರಾದೇಶಿಕವಾಗಿ ಅಥವಾ ಪರಿಸ್ಥಿತಿಯ ಅನುಕೂಲಕ್ಕಾಗಿ ಕಲಾವಿದರ ಸಂಖ್ಯೆಯನ್ನು ಹಿಗ್ಗಿಸಿಕೊಳ್ಳುತ್ತಾರೆ. ಮತ್ತೆ ಕೆಲವೊಂದು ಸಲ ಸಂಖ್ಯೆಯನ್ನು ಕುಗ್ಗಿಸಿಕೊಳ್ಳುತ್ತಾರೆ. ಈ ರೀತಿಯ ಬದಲಾವಣೆ ಪರಿಸ್ಥಿತಿಗೆ ಅನುಗುಣವಾಗಿ ನಡೆಯುತ್ತಿರುತ್ತದೆ.

### ೩.೪.೨. ಕೋಲುಪದಗಳು

ಕೋಲಾಟ ಪ್ರದರ್ಶನ ವೇಳೆಯಲ್ಲಿ ಹಾಡುವ ಪದಗಳಿಗೆ ಕೋಲುಪದಗಳೆನ್ನುವರು. ಈ ಆಟದಲ್ಲಿ ಹಾಡುಗಳ ಪಾತ್ರ ತುಂಬಾ ಮಹತ್ವವಾದುದು. ಕೋಲುಪದಗಳೇ ಕೋಲಾಟದ ಉಸಿರು ಎನಿಸಿಕೊಂಡಿವೆ. ಕೋಲು ಹುಯ್ಯುವಾಗ ಕೋಲುಪದಗಳು ಸಹ ಇರುತ್ತವೆ. ಕೋಲು ಪದಗಳು ತಾಳ ಲಯಗಳಿಗೆ ಅನುಗುಣವಾಗಿ ಕೋಲಾಟದ ವರಸೆಗಳನ್ನು ಮುಂದುವರೆಸಿಕೊಂಡು ಹೋಗುತ್ತದೆ. ಹಾಡುಗಳಿಗೆ ಅನುಗುಣವಾಗಿ ಕಲಾವಿದರ ಹೆಜ್ಜೆ, ಗತಿಗಳು, ಮಿಳಿತವಾಗುವುದರಿಂದ ಹಾಗೂ ಕೋಲುಕಡ್ಡಿಗಳ ಖಣಿಲ್ ಖಣಿಲ್ ನಾದ ನಿನಾದಗಳು ಸೇರಿಸಿಕೊಂಡು ಕೋಲುಪದಗಳ ಜನಪ್ರಿಯತೆಯನ್ನು ವಿಸ್ತರಿಸಿಕೊಂಡಿವೆ.

ಕೋಲುಪದಗಳ ಕುರಿತಾಗಿ ಜಾನಪದ ವಿದ್ವಾಂಸರಾದ ಮಳಲಿ ವಸಂತಕುಮಾರ ಅವರು ಹೀಗೆ ಹೇಳಿದ್ದಾರೆ. "ಕೋಲುಪದಗಳು ಪ್ರಾಸಬದ್ಧ ರಚನೆಗಳು, ಪ್ರಾಸಾನುಪ್ರಾಸಗಳ ಪುನಾರಾರ್ವತನೆಯನ್ನು ಪಲ್ಲವಿ ಅನುಪಲ್ಲವಿಗಳನ್ನು ಇಲ್ಲಿ ನಿಶ್ಚಳವಾಗಿ ಗುರುತಿಸಬಹುದು. ಕೋಲು ಪದಗಳಲ್ಲಿ ಕಂಡು ಬರುವ ಲಯ ವೈವಿಧ್ಯ ಅಸಾಧಾರಣವಾದುದು ವಚನ ಸಾಹಿತ್ಯಕ್ಕಿಂತಲೂ ಹೆಚ್ಚಾಗಿ ಭಿನ್ನ ಭಿನ್ನ ಬಗೆಯ ಲಯ ವೈವಿಧ್ಯಮಯವನ್ನು ಇಲ್ಲಿ ಗುರುತಿಸ ಬಹುದು" ಎಂದಿರುವುದು ಸೂಕ್ತವೆಂದೆನಿಸುತ್ತದೆ(ವೀರಣ್ಣದಂಡೆ(ಸಂ); ೨೦೦೬; ಪುಟ ೨೩೩).

ಕೋಲು ಪದಗಳಲ್ಲಿ ವಚನ ಸಾಹಿತ್ಯಕ್ಕಿಂತಲೂ ಭಿನ್ನ ಭಿನ್ನ ವಿಧವಾದ, ಲಯಗಾರಿಕೆಯನ್ನು ಒಳಗೊಂಡಿರುತ್ತವೆ ಎಂಬುದನ್ನು ಹೇಳಿರುವುದು ಗಮನಿಸಿದರೆ ಅದು ಕೋಲುಪದಗಳ ಜನಪ್ರಿಯತೆಯನ್ನು ಸೂಚಿಸುತ್ತದೆ. ವಚನ ಸಾಹಿತ್ಯವೂ ಸಾಮಾನ್ಯರಿಗೆ ಅರ್ಥವಾಗುವಂತೆ ವಚನಕಾರರು ವಚನಗಳನ್ನು ಕಟ್ಟಿದ್ದರೆ ಕೋಲುಪದಗಳು ಸಾಮಾನ್ಯರಲ್ಲಿ ಸಾಮಾನ್ಯರಾದ ಪಾಮರರಿಗೂ ಅರ್ಥವಾಗುವ ಭಾಷೆಯಲ್ಲಿ ಕೋಲುಪದಗಳಿರುತ್ತವೆ ಎಂಬುದನ್ನು ಸೂಚಿಸುತ್ತದೆ.

ವಿದ್ವಾಂಸರಾದ ತೀ.ನಂ. ಶಂಕರನಾರಾಯಣ ಅವರು ಕೋಲುಪದಗಳನ್ನು ಕುರಿತು ಈ ರೀತಿ ವಿವೇಚಿಸಿದ್ದಾರೆ. "ಕೋಲಾಟದ ಹಾಡುಗಳಲ್ಲಿ ಆಟ, ಸಂಗೀತ - ಸಾಹಿತ್ಯದ ಸುಮಧುರವಾದ ಮಿಶ್ರಣವಿದೆ. ಇವು ಲಯಬದ್ಧವೂ, ತಾಳಬದ್ಧವೂ ಆದ ರಚನೆಗಳಾಗಿವೆ"(ಶಂಕರನಾರಾಯಣ.ತೀ.ನಂ.; ೨೦೦೪; ಪುಟ ೩೦).

ತೀ.ನಂ. ಶಂಕರನಾರಾಯಣ ಅವರು ಅಭಿಪ್ರಾಯಿಸಿರುವಂತೆ ಕೋಲು ಪದಗಳಲ್ಲಿ ಸಾಹಿತ್ಯ-ಸಂಗೀತಗಳ ಸಂಗಮವಿದೆ ಮತ್ತು ಕೋಲು ಪದಗಳ ತಾಳ-ಲಯಗಳಿಗೆ ಸರಿಯಾಗಿ ಕುಣಿತಗಳಿದ್ದಾಗ ಕೋಲುಪದಗಳ ಜನಪ್ರಿಯತೆ ಮತ್ತಷ್ಟು ಹಿಗ್ಗುತ್ತದೆ ಎಂಬುದನ್ನು ಸೂಚಿಸುತ್ತದೆ.

ಕೋಲುಪದಗಳಲ್ಲಿ ಪಲ್ಲವಿ ಅನುಪಲ್ಲವಿಗಳು ಬರುತ್ತವೆ. ಪಲ್ಲವಿಗಳನ್ನು ಅನುಸರಿಸಿಕೊಂಡು ಚರಣಗಳು ಬರುತ್ತವೆ. ಚರಣಗಳು ಒಂದೊಂದು ಸಂದರ್ಭದಲ್ಲಿ ಪಲ್ಲವಿಗಳಂತೆ ಭಾಸವಾಗುತ್ತವೆ. ಕೋಲುಪದಗಳಲ್ಲಿ ಆದಿಪ್ರಾಸಗಳು ಮತ್ತು ಅಂತ್ಯಪ್ರಾಸಗಳು ಬಂದಾಗ ಹಾಡುತ್ತಿರುವ, ಕಲಾವಿದರಲ್ಲಿ

ಪ್ರಾಸಗೀತೆಗಳು ಕಲಾವಿದರ ಉತ್ಸಾಹವನ್ನು ಇಮ್ಮಡಿಗೊಳಿಸುತ್ತವೆ. ಕೋಲುಪದಗಳ ಕೊನೆಯಲ್ಲಿ ಮತ್ತು ಪದಗಳ ಮಧ್ಯದಲ್ಲಿ ಸೊಲ್ಲುಗಳು ಬರುತ್ತವೆ. ಇವುಗಳು ಕೋಲುಪದಗಳಿಗೆ ರಂಗೇರುವಂತೆ ಮಾಡುತ್ತವೆ.

* ಹಾಡುಗಳ ಮಧ್ಯದಲಿ ಬರುವಂತಹ ಸೊಲ್ಲುಗಳು

ಡುರ್ರ್ ಅದ್ದೈ ತಥ್ ಅದ್ದೈ ಎಂಬ ಉದ್ಗಾರದಿಂದ ಆರಂಭವಾಗುತ್ತವೆ.

* ಹಾಡುಗಳ ಕೊನೆಯಲ್ಲಿ ಬರುವ ಸೊಲ್ಲುಗಳು

ಉಡುದಯ್ಯೊ ತದ್ದಿಮಿತಾ
ಅದ್ದಿ ರಾಜಾ ತಯ್ಯೋ ತದ್ಧಿಮಿತಾ
ಅದ್ದಿಮಿದ್ದಿ ಧಿತ್ತಗಡಗಡ ಥೈ ಥೈ ಥೈಯಸ್ತಂಗಡಗಡತಾ

ಹೀಗೆ ಹಾಡುಗಳ ನಡುನಡುವೆ ಮತ್ತು ಕೊನೆಯಲ್ಲಿ ಬರುವ ಸೊಲ್ಲುಗಳು ಹಾಡಿನ ತೀವ್ರತೆಯನ್ನು ಮತ್ತಷ್ಟು ಹೆಚ್ಚುವಂತೆ ಮಾಡುತ್ತವೆ.

ಕೋಲುಪದಗಳನ್ನು ಕೋಲಾಟ ಪ್ರದರ್ಶನ ಮಾಡುವ ವೇಳೆ ಕೋಲುಮೇಳಗಾರ ಅಥವಾ ತಂಡದ ನಾಯಕ ಹಾಡುಗಳನ್ನು ಮುಮ್ಮೇಳವಾಗಿ ಹಾಡುತ್ತಾನೆ. ಉಳಿದಂತೆ ಕಲಾವಿದರು ಹಾಡಿನ ಕೊನೆಯ ಸಾಲನ್ನು ಅಥವಾ ನುಡಿಗಳನ್ನು ಪ್ರದರ್ಶನ ಮಾಡುತ್ತಾ ಹಿಮ್ಮೇಳವಾಗಿ ಹಾಡುವುದು ಕಂಡುಬರುತ್ತದೆ.

**ಪ್ರಾಸವನ್ನು ಅನುಸರಿಸಿಕೊಂಡು ಬಂದ ಕೋಲು ಪದ**

ಎಂಥಾ ಮನಿಗಾರ ನೋಡಮ್ಮಾ ಮದಕರಿ ಭೂಪ
ಎಂಥಾ ವಜ್ಜೀರ ನೋಡಮ್ಮಾ
ನಿಂತು ಕಡ್ದ ನಿಡುಗಲ್‌ತಂಕ
ತೂಗಿ ಕಡ್ಡ ತುಂಕೂರುತಂಕ
ಬಾಗಿ ಕಡ್ದ ಬಳ್ಳಾರಿ ತಂಕ

(ವಕ್ತೃ: ಸಣ್ಣಮಲ್ಲಯ್ಯ ಚಿರತುಗುಂಡು - ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ)

ಹೀಗೆ ಕೋಲುಪದಗಳಲ್ಲಿ ಪ್ರಾಸ - ಅನುಪ್ರಾಸಗಳು ಮತ್ತು ಮಧ್ಯ ಪ್ರಾಸಗಳು ಹಾಗೂ ಅಂತ್ಯ ಪ್ರಾಸ ತುಂಬಾ ವಿಪುಲವಾಗಿ ಕಾಣಬರುತ್ತವೆ.

ಜಡೆಕೋಲು ಪ್ರಕಾರಕ್ಕೆ ಸಂಬಂಧಿಸಿದ ಒಂದು ಗೀತೆಯಲ್ಲಿ ಮ್ಯಾಸಬೇಡ ಬುಡಕಟ್ಟಿಗೆ ಸಂಬಂಧಿಸಿದ ದೇವರುಗಳನ್ನು ಸ್ತುತಿಸುವಂತಹ ಗೀತೆಯನ್ನು ಉದಾಹರಣೆಯಾಗಿ ನೋಡೋಣ.

ಜಡೆಯನಾಕಿರಣ್ಣಗಳಿರಾ ಜಡೆಯನಾಕಿರೋ
ಸ್ವಾಮಿ ಜಡೆಯನಾಕಿರೊ

ಸ್ವಾಮಿ ಬೋಸಯ್ಯಾಗೆ ಜಡೆಯನಾಕಿರೋ

ಸ್ವಾಮಿ ಬೊಮ್ಮಯ್ಯಾಗೆ ಜಡೆಯನಾಕಿರೊ

(ವಕ್ತೃ: ಬೋಸಯ್ಯ ಮತ್ತು ಬೋರಯ್ಯ, ಬೋಸೆದೇವರಹಟ್ಟಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

**ತಾಳಗಡ್ಡಿಗೆ ಸಂಬಂಧಿಸಿದ ಕೋಲುಪದ**

ನವಿಲೆ ನವಿಲನ್ನಿರೋ ಹೇ ರತ್ನಾದಿ

ನವಿಲೆ ನವಿಲನ್ನಿರೋ

(ವಕ್ತೃ: ಚಂದ್ರಪ್ಪ, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ)

ಜೋಡ್ಗಡ್ಡಿ ಕೋಲು ಪ್ರಕಾರಕ್ಕೆ ಸಂಬಂಧಿಸಿದ ಕೋಲುಪದ

ಹೂವ ನೋಡೆ ತಂಗಿ ಕಾಯ ಗೋಡೆs ಮಾಳಿಮಾಡ

ತೇರಿನ ಮೇಲೆ ಬಸವಣ್ಣ ತಂಗಿ ಹೂವ ನೋಡೆ

ಜೋಡ್ಗಡ್ಡಿ ಈ ಎರಡು ಸಾಲುಗಳನ್ನು 'ಪಲ್ಲವಿ' ಎಂದು ಕರೆಯುತ್ತಾರೆ. ಇವುಗಳು ಚರಣಗಳ ನಂತರ ಎರಡು ಚರಣ ನಂತರ ಪುನಾರವರ್ತಿಸುವುದೇ ಪಲ್ಲವಿಯಾಗಿದೆ. (ಮೋಹನ್‌ಕುಮಾರ್(ಸಂ), ೨೦೧೩, ಕಾಡುಗೊಲ್ಲರ ಕೋಲಾಟ ಪದಗಳು, ಪುಟ ೩೫)

ಕೋಲಾಟ ಆರಂಭಿಸುವ ಕಾಲಕ್ಕೆ ಕೋಲುಪದಗಳನ್ನು ಹಾಡುವುದು ಸಂಪ್ರದಾಯ. ಪದಗಳಿಲ್ಲದ ಕೋಲಾಟವಿಲ್ಲ. ಕೋಲು ಪ್ರದರ್ಶನ ಮಾಡುವಾಗ ಆರಂಭದ ಗೀತೆಯಾಗಿ ಗಣಸ್ತುತಿಯನ್ನು ಹಾಡುವುದು ವಾಡಿಕೆ ಅಥವಾ ಊರು ದೇವರುಗಳನ್ನು ಕುರಿತು, ಸಾಂಸ್ಕೃತಿಕ ನಾಯಕ - ನಾಯಕಿಯರ, ಹೆಣ್ಣುದೇವತೆಗಳ ಅಥವಾ ಪ್ರಾದೇಶಿಕವಾಗಿ ಪ್ರಸಿದ್ಧಿ ಪಡೆದ ಪುರಾಣ ಪುರುಷರ ಸ್ತುತಿಗೀತೆಗಳನ್ನು ಹಾಡುವುದರ ಮುಖಾಂತರ ಕೋಲು ಹುಯ್ಯುವುದು ಆರಂಭವಾಗುತ್ತದೆ.

ಎನ್. ಮೋಹನ್‌ಕುಮಾರ್ ಅವರು ಸಂಪಾದಿಸಿರುವ 'ಕಾಡುಗೊಲ್ಲರ ಕೋಲಾಟದ ಪದಗಳು' ಕೃತಿಯಲ್ಲಿನ ಒಂದು ಗಣಸ್ತುತಿ ಗೀತೆಯನ್ನು ನೋಡೋಣ.

ಗಣಸ್ತುತಿ, ವಿಧ - ತಾಳ್ಗಡ್ಡಿ

ಹೇ ಪ್ರಥುಮ ನಿಮ್ಮಾನೋs

ಪ್ರಾರ್ಥನೆಯ ಮಾಡುವೇs ದೇವ

ಮತೀಗೆ ಮಂಗಳ, ನಿತ್ಯ ಸಲಾಹು ಎನ್ನಾನೋs ದೇ ||ಪ||

(ಮೋಹನ್‌ಕುಮಾರ್(ಸಂ), ೨೦೧೩, ಪುಟ ೩)

ಹೀಗೆ ಕೋಲುಪದಗಳಲ್ಲಿ ಆರಂಭದ ಗೀತೆಯಲ್ಲಿ ಗಣಸ್ತುತಿಯನ್ನು ಮಾಡುವುದರ ಮೂಲಕ ಕೋಲಾಟ ಪ್ರದರ್ಶನ ಆರಂಭವಾಗುತ್ತದೆ ಅಥವಾ ಮಾರಮ್ಮ ಸರಸ್ವತಿ, ಈಶ್ವರ, ರಾಮ, ಹನುಮಂತ ಮುಂತಾದ ದೇವರುಗಳನ್ನು ಪ್ರಾರ್ಥಿಸುವುದರ ಮೂಲಕ ಆರಂಭಿಸಲಾಗುತ್ತದೆ. ಆರಂಭದ ನಂತರ ಮುಕ್ತಾಯ ಹಾಡಲೇಬೇಕು, ಮುಕ್ತಾಯ ಮಾಡುವ ಕಾಲಕ್ಕೆ ಮಂಗಳಗೀತೆಯನ್ನು

ಹಾಡುತ್ತಾ, ಮಂಗಳ ಹಾಡುವುದು ಎಂದರೆ ಅಂದಿನ ದಿನಕ್ಕೆ ಮಾತ್ರ ಇತಿಶ್ರೀ ಹಾಡುವುದನ್ನು ಮಂಗಳ ಹಾಡುವುದು ಅಥವಾ ಮುಕ್ತಾಯ ಹಾಡುವುದು ಇರುತ್ತದೆ.

### ಜಯಮಂಗಳಂ

"ಜಯಮಂಗಳಂ ನಿತ್ಯ ಶುಭಮಂಗಳಂ"

ಎಂದು ಮುಕ್ತಾಯದ ಗೀತೆಯನ್ನು ಹಾಡುವುದರೊಂದಿಗೆ ಅಂದಿನ ದಿನಕ್ಕೆ ನಿಲ್ಲಿಸುವುದು ಸೂಕ್ತ ಎಂದು ಕಂಡು ಬಂದಾಗ ಕೋಲು ಹುಯ್ಯುವುದನ್ನು ನಿಲ್ಲಿಸಲು 'ಜಯ ಮಂಗಳಂ ನಿತ್ಯ ಶುಭಮಂಗಳಂ' ಗೀತೆಯಿಂದ ಕೋಲಾಟ ನೋಡಲು ಬಂದವರಿಗೂ, ಅವರ ಮನೆಯವರಿಗೂ, ಕಲಾವಿದರಿಗೂ ಮತ್ತು ಕೋಲುಮೇಳಗಾರ ಮತ್ತು ಅವರ ಮನೆಯವರಿಗೂ ಸಂಬಂಧಿಕರಿಗೂ ಅಷ್ಟೈಶ್ವರ್ಯ ಆಯುರಾರೋಗ್ಯವನ್ನು ದೇವಾನುದೇವತೆಗಳು ಕರುಣಿಸಲಿ ಎಂದು ಜಯಮಂಗಳಂ ಗೀತೆಯನ್ನು ಹಾಡುವುದು ವಾಡಿಕೆಯಾಗಿದೆ.

ಹೀಗೆ ಕೋಲುಪದಗಳಲ್ಲಿ ಪ್ರಾರ್ಥನಾ ಸ್ತುತಿ ಗೀತೆಗಳು ಮತ್ತು ಮುಕ್ತಾಯದ ಹಾಡುಗಳು ಹೇರಳವಾಗಿವೆ. ದೇವರು-ದೇವತೆಗಳನ್ನು ಸ್ತುತಿಸುತ್ತಾ ಪ್ರಾರ್ಥನೆ ಮಾಡುತ್ತಾರೆ ಮತ್ತು 'ಜಯಮಂಗಳಂ' ನಂತರ ಮುಕ್ತಾಯದ ಹಾಡನ್ನು ಕೂಡ ಹಾಡುತ್ತಾರೆ ಎಂಬುದು ವಿಶೇಷವಾಗಿದೆ.

ಕೋಲು ಹುಯ್ಯುವಾಗ ಹಾಡುವ ಪದಗಳನ್ನು ಕೇಳುತ್ತಾ ಪ್ರದರ್ಶನ ನೋಡುವ ಜನರಿಗೆ ಕೋಲುಪದಗಳು ಪ್ರಫುಲ್ಲರಾಗುವಂತೆ ಮಾಡುತ್ತವೆ. ಕೋಲುಕಡ್ಡಿಗಳ ಖಣಿಲ್-ಖಣಿಲ್ ನಾದದ ಜೊತೆಗೆ ಹಾಡುಗಳು ಮತ್ತು ಕುಣಿತಗಳೆರಡು ಸೇರಿ ಕೇಳುವ ಕಿವಿಗಳಿಗೆ ಇಂಪಾದ ನಾದವನ್ನು ಕೇಳಿಸುತ್ತವೆ ಮತ್ತು ಕೋಲುಪದಗಳಲ್ಲಿ ಹಾಸ್ಯರಸಕ್ಕೆ ಸಂಬಂಧಿಸಿದ ಹಾಡುಗಳು, ನೋಡುವ ಜನರಿಗೆ ಮನರಂಜನೆಯನ್ನು ಒದಗಿಸುತ್ತವೆ.

ಗಂಡ ಬತ್ತಾನೆಂದು ನಾನು
ಒಳ್ಳೆ ಗುಂಡನೆತ್ತಿ ನೋಡುತ್ತಿದ್ದೆ
ನನ್ನ ಗಂಡ ಬರೊ ದಾರಿಯಲ್ಲಿ
ಒಳ್ಳೆ ಗಂಡು ಗಾರೆ ಸುರಿಯಲಮ್ಮ(ಮೋಹನ್‌ಕುಮಾರ್(ಸಂ), ೨೦೧೩, ಪುಟ ೮೭)

ಈ ಗೀತೆಯು ಕಾಡುಗೊಲ್ಲರ ಕೋಲಾಟದ ಪದಗಳಲ್ಲಿ ಬರುತ್ತದೆ. ಇಲ್ಲಿ ಹೆಂಡತಿ ನನ್ನ ಗಂಡನಿಗೆ ಕೆಡುಕಾಗಲೆಂದು ಬಯಸಿಕೊಳ್ಳುವುದೇ ತಮಾಷೆಯ ವಿಚಾರವಾಗಿದೆ. ಹಾಗೆಯೇ ಮ್ಯಾಸಬೇಡರ ಕೋಲಾಟ ಪದಗಳಲ್ಲಿ ಹಾಸ್ಯ-ತಮಾಷೆಯ ಕೋಲುಪದಗಳು ವಿಪುಲವಾಗಿ ಸಿಗುತ್ತವೆ.

### ತೆಲುಗು ಕೋಲುಪದ

ವಚ್ಚೆ ಕದುರಾ ಸ್ವಜ್ಜ ಶೇನುಕಿ ಮಾ ಅತ್ತ
ನಡಿಗೆ ವಚ್ಚೆ ಕದುರ ಸ್ವಜ್ಜ ಶೇನುಕಿ

(ವಕ್ತೃ: ಪೂಜಾರಿಗಿಡ್ಡಯ್ಯ ಕಂಪಳದೇವರಹಟ್ಟಿ, ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಈ ಕೋಲುಪದದಲ್ಲಿ ಅತ್ತೆ ಮತ್ತು ಅಳಿಯರಿಗೆ ಸಂಬಂಧಿಸಿದಂತಹ ಹಾಸ್ಯಪದ.

೩.೪.೩. ಕೋಲುಕಡ್ಡಿಗಳು

ಕೋಲಾಟವು ಕೋಲಾಟ ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆದಿರುವುದು ಕೋಲುಕಡ್ಡಿಗಳಿಂದ ಅಥವಾ ತುಂಡರಿಸಿದ ಸಣ್ಣ ಕೋಲುಗಳಿಂದ. ಈ ಆಟದಲ್ಲಿ ಕೋಲು ಹುಯ್ಯುವ ಕಲಾವಿದರು ಮತ್ತು ಕೋಲುಪದಗಳು ಎಷ್ಟು ಪ್ರಧಾನ ಪಾತ್ರವಹಿಸುತ್ತವೆಯೋ ಕೋಲುಕಡ್ಡಿಗಳ ಪಾತ್ರವು ಅಷ್ಟೇ ಪ್ರಧಾನವಾದುದಾಗಿದೆ. ಜಾನಪದ ಲೋಕದಲ್ಲಿ ಕೋಲಾಟ ಎಂಬ ಹೆಸರಿನಿದ ರಾಷ್ಟ್ರವ್ಯಾಪಿ ಜನಪ್ರಿಯತೆ ಪಡೆದಿದೆ ಎಂದರೆ ಅದು ಕೋಲುಕಡ್ಡಿಗಳಿಂದ ಎಂಬುದು ನಿರ್ವಿವಾದ.

ಕೋಲು ಹುಯ್ಯಲು ಬಳಸುವ ಸುಮಾರು ಮುಕ್ಕಾಲು ಅಥವಾ ಒಂದು ಅಡಿಯ ಮರದಿಂದ ಕತ್ತರಿಸಿದ ಸಣ್ಣ ತುಂಡುಗಳನ್ನು ಕೋಲುಕಡ್ಡಿಗಳು ಅಥವಾ ಕೋಲುಗಳು ಎಂದು ಕರೆಯುತ್ತಾರೆ. ಕೋಲುಕಡ್ಡಿಗಳನ್ನು ಮಳಲಿ ವಸಂತಕುಮಾರ ಅವರು ಹೀಗೆ ಪ್ರಸ್ತಾಪಿದ್ದಾರೆ. "ಕೋಲಾಟಕ್ಕಾಗಿ ಬಳಸುವ ಸುಮಾರು ಮುಕ್ಕಾಲು ಅಡಿಯ ಕೋಲುಗಳನ್ನು 'ಕೋಲುಗೂಟ'ಗಳು ಎಂಬುದಾಗಿ ಕರೆಯುವುದು ರೂಢಿಯಲ್ಲಿದೆ. ಕೆಲವರು ಕೋಲುಗಳು ಎಂಬುದಾಗಿಯೇ ಕರೆಯುತ್ತಾರೆ"(ವೀರಣ್ಣದಂಡೆ(ಸಂ); ೨೦೦೬; ಪುಟ ೨೪೮) ಎಂದು ಕೋಲುಕಡ್ಡಿಗಳ ಕುರಿತು ಪ್ರಸ್ತಾಪಿಸುತ್ತಾ ವ್ಯಾಖ್ಯಾನಿಸಿರುವುದು ಸೂಕ್ತವೆಂದೆನಿಸುತ್ತದೆ. ಇಲ್ಲಿ ಕೋಲುಕಡ್ಡಿಗಳನ್ನು ಮಳಲಿ ವಸಂತಕುಮಾರ ಅವರು 'ಕೋಲುಗೂಟಗಳು' ಮತ್ತು 'ಕೋಲುಗಳು' ಎಂದು ಪ್ರಸ್ತಾಪಿಸಿರುವುದು ಕಂಡುಬಂದಿದೆ. ಆದರೆ ಪ್ರಾದೇಶಿಕ ಭಿನ್ನತೆಯಿಂದ ಕೆಲವೆಡೆ ಕೋಲುಗೂಟಗಳು ಎಂದು ಕರೆದರೆ ಕೆಲವು ಪ್ರದೇಶಗಳಲ್ಲಿ ಕೋಲುಗಳು ಎಂದು ಕರೆಯುತ್ತಾರೆ. ಇನ್ನೂ ಕೆಲವು ಪ್ರಾಂತಗಳಲ್ಲಿ 'ಕೋಲುಕಡ್ಡಿಗಳು' ಎಂಬುದಾಗಿ ಕರೆಯುವುದು ವಾಡಿಕೆ. ಪ್ರಸ್ತುತ ಅಧ್ಯಯನದಲ್ಲಿ ಕೋಲುಕಡ್ಡಿಗಳು ಎಂದೇ ಪ್ರಸ್ತಾಪಿಸಲಾಗಿದೆ.

ಕೋಲುಕಡ್ಡಿಗಳು ಎಂದರೆ ಕೋಲಾಟ, ಕೋಲಾಟ ಎಂದರೆ ಕೋಲುಕಡ್ಡಿಗಳು ಎನ್ನುವಷ್ಟರಮಟ್ಟಿಗೆ ಕೋಲುಕಡ್ಡಿಗಳು ಮುಖ್ಯವೆನಿಸುತ್ತವೆ. ಕೋಲುಗಳು ಅಥವಾ ಕೋಲುಕಡ್ಡಿಗಳು ಇಲ್ಲದೆ ಕೋಲಾಟ ಪ್ರದರ್ಶನ ನಡೆಯುವುದಿಲ್ಲ. ಅವುಗಳ ಖಣಿಲ್ ಖಣಿಲ್ ನಾದ ನಿನಾದಗಳೇ ನೋಡುಗರ ಕಣ್ಮನವನ್ನು ಆಕರ್ಷಿಸುವ ಗುಣವನ್ನು ಹೊಂದಿವೆ ಎಂದು ಹೇಳಬಹುದು. 'ಕೋಲಾಟ ಪ್ರದರ್ಶನಕ್ಕೆ ಕೋಲುಕಡ್ಡಿಗಳೇ ಆಧಾರ ಸ್ತಂಭಗಳು' ಕೋಲುಗಳಿಲ್ಲದ ಕೋಲಾಟವನ್ನು ಊಹಿಸಿಕೊಂಡರೆ ಕೋಲಾಟ ಎನ್ನುವ ಕಲೆ ಜಾನಪದ ಲೋಕದಲ್ಲಿ ಇರುತ್ತಿರಲಿಲ್ಲ ಎಂದು ಭಾಸವಾಗುತ್ತದೆ.

ವಿದ್ವಾಂಸರಾದ ಪುರುಷೋತ್ತಮ ಬಿಳಿಮಲೆ ಅವರು ಕೋಲುಕಡ್ಡಿಗಳ ಕುರಿತು ವಿಚಾರ ಮಾಡುತ್ತಾ ಅವುಗಳ ಗಾತ್ರವನ್ನು ಪ್ರಸ್ತಾಪಿಸುತ್ತಾರೆ. "ಸಾಮಾನ್ಯವಾಗಿ ಶ್ರೀಗಂಧ, ಹೊನ್ನೆ, ಬೈನೆ, ಕೊಡಸು ಮುಂತಾದ ಮರಗಳಿಂದ ಕೋಲುಗಳನ್ನು ಕಡಿಯುತ್ತಾರೆ. ಅನಂತರ ಅವುಗಳನ್ನು ಒಣಗಿಸಿ ಒಂದೂವರೆ ಅಡಿ ಉದ್ದಕ್ಕೆ ಕತ್ತರಿಸಿ ದುಂಡಾಗಿಸಿ ಕೋಲಾಟಕ್ಕೆ ಕೋಲುಗಳನ್ನು ಸಿದ್ಧಗೊಳಿಸುತ್ತಾರೆ"(ಪುರುಷೋತ್ತಮ ಬಿಳಿಮಲೆ; ೧೯೯೭; ಪುಟ ೧೪೦) ಎಂದು ತಿಳಿಸುತ್ತಾರೆ.

ಬಿಳಿಮಲೆ ಅವರು ಕೋಲುಕಡ್ಡಿಗಳ ಕುರಿತು ಪ್ರಸ್ತಾಪಿಸುತ್ತಾ ಅವುಗಳನ್ನು ಯಾವ ಯಾವ ಮರಗಳಿಂದ ಕಡಿದು ಹೇಗೆ ಸಿದ್ಧಪಡಿಸುತ್ತಾರೆ ಎಂಬುದನ್ನು ಪ್ರಸ್ತಾಪಿಸಿರುವುದು ಕಂಡು ಬರುತ್ತದೆ. ಹೀಗೆ ಕೋಲುಗಳಿಂದ ಕೋಲಾಟ ಎನ್ನುವ ಪದ(ನುಡಿ) ಪ್ರಚಲಿತವಿರುವುದನ್ನು ಗಮನಿಸಬಹುದು.

ಕೋಲಾಟ ಪ್ರದರ್ಶನಕ್ಕೆ ಮುಕ್ಕಾಲು ಅಡಿಯಿಂದ ಒಂದು, ಒಂದೂವರೆ ಅಡಿಯವರೆಗಿನ ಕೋಲುಗಳನ್ನು(ಕಟ್ಟಿಗೆಗಳು) ಬಳಸುತ್ತಾರೆ. ಅವುಗಳನ್ನು ಕೋಲುಕಡ್ಡಿಗಳು ಎಂದು ಕರೆಯುವುದು ವಾಡಿಕೆ. ಕೋಲುಕಡ್ಡಿಗಳಿಗೆ ಕೋಲಾಟದಲ್ಲಿ ವಿಶೇಷ ಸ್ಥಾನಮಾನವಿದೆ. ಕೋಲುಗಳನ್ನು ಎಲ್ಲ ಮಾದರಿಯ ಮರಗಳಿಂದ ಸಿದ್ಧಪಡಿಸಲು ಬರುವುದಿಲ್ಲ. ಅವುಗಳನ್ನು ಕಾರೆ, ಬಾರೆ, ಜಾಲಿ, ತೇಗ, ಶ್ರೀಗಂಧ, ಹೊನ್ನೆ ಕೆಲವಷ್ಟೇ ಮರಗಳಿಂದ ತುಂಡರಿಸಿದ ಕೋಲುಕಡ್ಡಿಗಳು ಮಾತ್ರ ಒಳ್ಳೆಯ ನಾದವನ್ನು ಹೊಮ್ಮಿಸುತ್ತವೆ. ಇವುಗಳಲ್ಲಿ ಹೆಚ್ಚಾಗಿ ಕಾರೆ, ಬಾರೆಯ ಕೋಲುಕಡ್ಡಿಗಳೇ ಅತ್ಯುತ್ತಮ ನಾದವನ್ನು ಹೊರಹೊಮ್ಮಿಸುತ್ತವೆ.

ಕಾರೆ, ಬಾರೆ, ತೇಗ, ಶ್ರೀಗಂಧ ಕೋಲುಕಡ್ಡಿಗಳು ತುಂಬಾ ದಿನಗಳವರೆಗೂ ಅಂದರೆ ವರ್ಷಗಟ್ಟಲೆ ಬಾಳಿಕೆ ಬರುತ್ತವೆ ಎಂದು ಕೋಲಾಟದ ಕಲಾವಿದರು ಮತ್ತು ತಜ್ಞರು ಹೇಳುತ್ತಾರೆ. ಕೋಲುಕಡ್ಡಿಗಳು ಏಕಮುಖವಾಗಿರಬಾರದು. ಮುಂದೆ ಕೋಲಿನ ದಪ್ಪ ಕಡಿಮೆ ಇದ್ದು ಚೂಪಾಗಿರಬಾರದು. ಹಿಂಭಾಗದಲ್ಲಿ ಮುಂಭಾಗಕ್ಕಿಂತ ಕೊಂಚ ದಪ್ಪನಾಗಿರುವಂತೆ ಕೋಲುಗಳನ್ನು ಸಿದ್ಧಪಡಿಸಿರಬೇಕು.

ಕೋಲುಕಡ್ಡಿಗಳನ್ನು ಸಿದ್ಧಪಡಿಸಲು ಕೋಲುಗಳನ್ನು ಕಡಿದುಕೊಂಡು ಬರಲು ಅನುವಾಗುವಂಥ ಸಂದರ್ಭದಲ್ಲಿ ಜನಪದರು ಕೆಲವೊಂದು ರೂಢಿ, ಸಂಪ್ರದಾಯಗಳನ್ನು ಅನುಸರಿಸುವುದಿದೆ.

ಜಾನಪದ ವಿದ್ವಾಂಸರಾದ ಗೊ.ರು. ಚನ್ನಬಸಪ್ಪ ಅವರು ಕೋಲುಕಡ್ಡಿಗಳನ್ನು ಕಡಿಯುವುದರಿಂದ ಕೋಲಾಟವನ್ನು ಪ್ರದರ್ಶನ ಮಾಡುವವರೆಗೂ ಕೆಲವು ಸಂಪ್ರದಾಯ ಬದ್ಧವಾದ ಕ್ರಮಗಳನ್ನು ಅನುಸರಿಸಬೇಕು ಎಂಬುದನ್ನು ಕುರಿತು ಈ ರೀತಿಯಾಗಿ ವಿವೇಚಿಸಿದ್ದಾರೆ. "ಉತ್ತರ ಕರ್ನಾಟಕದ ಕೆಲವು ಕಡೆ ದೈವೀ ಆರಾಧನೆಯಾಗಿ ಬೆಳೆದುಬಂದಿದೆ. ಆಟಕ್ಕೆ ಕೋಲುಗಳನ್ನು ಸಿದ್ಧಪಡಿಸುವುದರಿಂದ ಹಿಡಿದು(ಇದಕ್ಕೆ ಕೋಲು ಕಡೆಯುವುದು ಎನ್ನುತ್ತಾರೆ) ಒಂದು ನಿರ್ದಿಷ್ಟ ಕಾಲದಲ್ಲಿ ಕೋಲಾಟವಾಡುವವರೆಗೆ ಸಂಪ್ರದಾಯಬದ್ಧ ಕ್ರಮಗಳಿವೆ. ಕೋಲಾಟದ ಪ್ರದರ್ಶನಕ್ಕೆ ೧೫ ದಿನಗಳ ಮುಂಚೆ ಆಶ್ವಯುಜ ಹುಣ್ಣಿಮೆಯಂದು ಕೋಲು ಕಡಿಯಲು ಕಾಡಿಗೆ ತೆರಳುವ ಪದ್ಧತಿಯಿದೆ. ಕೆಲವು ಕಡೆ ಅಮಾವಾಸ್ಯೆಯ ದಿನವೂ ಈ ಕಾರ್ಯಕ್ಕೆ ಹೊರಡುತ್ತಾರೆ. ಇದಕ್ಕಾಗಿ ಮೊದಲಿನಿಂದ ಬಂದ ಕೆಲವು ಮನೆತನಗಳಿವೆ. ಸಾಮಾನ್ಯವಾಗಿ ಐದು ಜನ ಮರವನ್ನು ಪೂಜಿಸಿ, ಸ್ತುತಿಸಿದ ಮೇಲೆ ಒಂದು ಮರದಿಂದ ಒಂದೇ ಜೊತೆ ಕೋಲುಗಳನ್ನು ಕಡಿಯುತ್ತಾರೆ. ಇಲ್ಲಿನ ಸಂಪ್ರದಾಯದಂತೆ ಕೋಲುಗಳನ್ನು ಗಂಧ, ಕೊಡಸು, ಬೈನೆ, ಹೊನ್ನೆ ಮರಗಳಿಂದಲೇ ಕಡಿಯಬೇಕು. ಈ ಕೆಲಸ ಗೋಧೂಳಿ ಲಗ್ನದಲ್ಲೇ ಆಗಬೇಕು. ಕಡಿಯುವವರು ಉಪವಾಸವಿರಬೇಕು.

ನಂತರ ಮುಂದಿನ ಹದಿನೈದು ದಿನಗಳು ಕೋಲಾಟದ ಗುಂಪಿನ ಪ್ರಮುಖನ ನೇತೃತ್ವದಲ್ಲಿ ಅಭ್ಯಾಸ. ದೀಪಾವಳಿಯ ಮರುದಿನ ಪ್ರದರ್ಶನ. ಮೊದಲು ಊರ ದೇವರ ಮುಂದೆ, ನಂತರ ಊರ ಪ್ರಮುಖರ ಮುಂದೆ ಕೋಲಾಟವಾದ ಮೇಲೆ ಮನೆ ಮನೆಗೆ ತೆರಳಿ ಜನಮನವನ್ನು ತಣಿಸುತ್ತಾರೆ"(ಚನ್ನಬಸಪ್ಪ.ಗೊ.ರು.; ೧೯೭೭; ಪುಟ ೪೪).

ಗೊ.ರು. ಚನ್ನಬಸಪ್ಪ ಅವರು ಕೋಲುಕಡಿಯಲು ಹೊರಡಲನುವಾದಾಗ ಮಾಡಬೇಕಾದ ಕಟ್ಟುನಿಟ್ಟಿನ ಕ್ರಮಗಳ ಕುರಿತು ಮತ್ತು ಕೋಲುಗಳನ್ನು ಒಂದು ಮರದಿಂದ ಒಂದು ಜೊತೆ ಮಾತ್ರ ಕಡಿಯಬೇಕೆಂಬ ಮುಂದಾಲೋಚನಾ ಕ್ರಮದ ಕುರಿತು ನಿರೂಪಿಸಿದ್ದಾರೆ. ಹಾಗೆಯೇ ಕೋಲುಪ್ರದರ್ಶನವನ್ನು ಮೊದಲಿಗೆ ದೇವರ ಸಾನಿಧ್ಯದಲ್ಲಿ, ಗುರುಹಿರಿಯರ ಸಾನಿಧ್ಯದಲ್ಲಿ ಪ್ರದರ್ಶಿಸಬೇಕೆಂಬ ಶಿಸ್ತುಬದ್ಧ ಕ್ರಮಗಳ ಕುರಿತು ಹೇಳಿರುವುದರೊಂದಿಗೆ ಸಾಂಪ್ರದಾಯಿಕತೆಯನ್ನು ಉಳಿಸಿಕೊಂಡು ಬರುವುದನ್ನು ಈ ರೀತಿಯಾಗಿ ವಿವೇಚಿಸಿದ್ದಾರೆ.

ವಿದ್ವಾಂಸರಾದ ಚಕ್ಕೆರೆ ಶಿವಶಂಕರ್ ಕೋಲುಗಳನ್ನು ಕುರಿತಾಗಿ ಈ ರೀತಿಯಾಗಿ ವ್ಯಾಖ್ಯಾನಿಸಿರುವುದಿದೆ. "ಕಣಿಕಣಿ ಎಂದು ಸದ್ದು ಮಾಡುವ ಕೋಲುಗಳನ್ನು ಕಾರೆ, ಆಲೆ, ಬೈನೆ, ತೇಗದ ಮರಗಳಿಂದ ತಯಾರಿಸುತ್ತಾರೆ. ಇವು ಸುಲಭ ಪೆಟ್ಟಿಗೆ ಮುರಿಯುವಂಥವಲ್ಲ" ಎಂದು ಅಭಿಪ್ರಾಯಿಸಿದ್ದಾರೆ"(ಚಕ್ಕರೆ ಶಿವಶಂಕರ್; ೨೦೦೮; ಪುಟ ೧೪).

ಚಕ್ಕೆರೆ ಶಿವಶಂಕರ್ ಅವರ ಹೇಳಿಕೆಯನ್ನು ಗಮನಿಸಿದಾಗ ಕೋಲುಗಳು ಅಥವಾ ಕೋಲುಕಡ್ಡಿಗಳನ್ನು ಒಂದು ಗೊತ್ತಾದ ಗಿಡ ಮರಗಳಿಂದ ಕಡಿದು ಸಿದ್ಧಪಡಿಸಬೇಕೆಂದು ಇರುತ್ತದೆ. ಅವು ಕಾರೆ, ಬೈನೆ, ತೇಗ ಮರಗಳಿಂದ ಕೋಲುಕಡ್ಡಿಗಳನ್ನು ತಯಾರಿಸಿದಾಗ ಅವುಗಳಿಂದ ಖಣಿಲ್ ಖಣಿಲ್ ಎಂಬ ಒಳ್ಳೆಯ ನಾದವು ಹೊರಹೊಮ್ಮುತ್ತದೆ ಹಾಗೂ ವರ್ಷಾನುಗಟ್ಟಲೆ ಬಾಳಿಕೆಯೂ ಬರುತ್ತದೆ. ಹಾಗಾಗಿ ಕೈಗೆ ಸಿಗುವ ಮರಗಳಿಂದ ಕೋಲುಕಡ್ಡಿಗಳನ್ನು ಕಡಿಯುವುದನ್ನು ವರ್ಜಿಸಿ ಕೆಲವು ಮೀಸಲಾದ, ಗೊತ್ತಾದ ಗಿಡ-ಮರಗಳಿಂದ ಕೋಲುಕಡ್ಡಿಗಳನ್ನು ಸಿದ್ಧಪಡಿಸಿಕೊಳ್ಳಬೇಕು. ಕೋಲಾಟದ ಪ್ರದರ್ಶನ ಮಾಡುವ ಕಾಲಕ್ಕೆ ಅವುಗಳು ವಹಿಸುವ ಪಾತ್ರವು ನಮ್ಮ ಅರಿವಿಗೆ ಬರುತ್ತದೆ.

ವಿದ್ವಾಂಸರಾದ ಮಳಲಿ ವಸಂತಕುಮಾರ ಅವರು ಕೋಲುಕಡ್ಡಿಗಳನ್ನು ಯಾವ ಯಾವ ಮರಗಳಿಂದ ತಯಾರಿಸಿದರೆ ಉತ್ತಮ ನಾದ ಬರುತ್ತವೆ ಎಂಬುದರ ಕುರಿತು ಹೀಗೆ ವಿವೇಚಿಸಿದ್ದಾರೆ. "ಬೈನೆ, ಕಾರೆ ಮತ್ತು ಗಂಟಿಕಣಗಲು ಮರಗಳಿಂದ ತಯಾರಿಸಿದ ಕೋಲುಗಳು ಒಳ್ಳೆಯನಾದ ಕೊಡುತ್ತವೆ. ಈ ಮೂರು ಮರಗಳಲ್ಲಿ ಬೈನೆಯೇ ಅತ್ಯುತ್ತಮವಾದುದು. ಆದರೆ ಹಳ್ಳಿಗಳಲ್ಲಿ ಇದು ಸುಲಭವಾಗಿ ದೊರೆಯುವುದಿಲ್ಲವಾದ ಕಾರಣ ಗಂಟಿಕಣಗಲು ಅಥವಾ ಕಾರೆ ಮರಗಳಿಂದಲೇ ಕೋಲುಗೂಟಗಳನ್ನು ಹೆಚ್ಚಾಗಿ ತಯಾರು ಮಾಡುತ್ತಾರೆ"(ವಸಂತಕುಮಾರ ಮಳಿ; ೧೯೭೮; ಪುಟ ೧೭) ಎಂದು ವ್ಯಾಖ್ಯಾನಿಸಿರುವುದು ಸೂಕ್ತವೆನಿಸುತ್ತದೆ. ಇವರ ಹೇಳಿಕೆಯನ್ನು ಗಮನಿಸಿದಾಗ

ಒಂದು ಗೊತ್ತಾದ ಮರಗಳಿಂದ ಕೋಲುಕಡ್ಡಿಗಳನ್ನು ತಯಾರಿಸಿದರೆ ಕೋಲಾಟಕ್ಕೆ ಒಂದು ರೀತಿಯ ಮೆರುಗನ್ನು ನೀಡುತ್ತವೆ ಎಂಬುದು ವೇದ್ಯವಾಗುತ್ತದೆ.

ಹೀಗೆ ಕೋಲುಕಡ್ಡಿಗಳನ್ನು ಕಡಿದು ಸಿದ್ಧಪಡಿಸುವಾಗ ಕೆಲವು ಪದ್ಧತಿ, ನಿಯಮಗಳಿರುತ್ತವೆ. ಕೋಲುಗಳನ್ನು, ಕಾರೆ, ಬಾರೆ, ತೇಗ, ಬೈನೆ ಮತ್ತು ಗಂಟಿಕಣಗಲು ಮರಗಳಿಂದ ಸಿದ್ಧಪಡಿಸಬೇಕು ಎನ್ನುವುದು ಜನಪದರ ಮುಂದಾಲೋಚನ ಕ್ರಮವಾಗಿತ್ತು. ಅವುಗಳಿಂದ ಹೊರಹೊಮ್ಮುವ ನಾದವೇ ಅವುಗಳ ಆಯ್ಕೆಯನ್ನು ಸಮರ್ಥಿಸಿಕೊಳ್ಳುತ್ತದೆ. ಆದರೆ ಇತ್ತೀಚೆಗೆ ಇಂತಹುದೇ ಮರದಿಂದ ಕೋಲುಕಡ್ಡಿಗಳನ್ನು ತಯಾರಿಸಬೇಕು ಎಂಬ ಜನಪದರ ನಿಯಮಗಳಿಗೆ ವಿರಾಮ ಎಳೆದಿರುವುದು ಕಂಡುಬರುತ್ತದೆ. ಇತ್ತೀಚಿನ ದಿನಗಳಲ್ಲಿ ಕೋಲುಗಳನ್ನು ತಮಗಿಷ್ಟ ಬಂದ ಮರಗಳಿಂದ ಸಿದ್ಧಪಡಿಸುತ್ತಾರೆ. ಹೊಂಗೆ(ಕಾಣಿಗೆ) ಹುಣಿಸೆ, ಬೇವು, ಬಳ್ಳಾರಿ ಜಾಲಿ ಮುಂತಾದ ಮರಗಳಿಂದ ಸಿದ್ಧಪಡಿಸುವುದು ಕಂಡುಬಂದಿದೆ. ಕೋಲಾಟ ಪ್ರದರ್ಶನದ ವೇಳೆಯಲ್ಲಿ ಇದ್ದಕ್ಕಿದ್ದ ಹಾಗೆ ಕೋಲುಕಡ್ಡಿಗಳು ಕಲಾವಿದರು ಹಾಕುವ ಪೆಟ್ಟುಗಳಿಗೆ ಸೀಳಿ ಹೋಗುವುದು ಇಲ್ಲವೆ ಮುರಿದು ಹೋಗುವುದು ಕಂಡುಬರುತ್ತದೆ. ಇದರಿಂದ ಕೋಲಾಟದ ಪ್ರದರ್ಶನಕ್ಕೆ ಅಡ್ಡಿಯಾಗುತ್ತದೆ ಮತ್ತು ಕೋಲು ಹುಯ್ಯುವ ಕಲಾವಿದರ ಮತ್ತು ಕೋಲುಮೇಳಗಾರರ ಉತ್ಸಾಹ ಹುಮ್ಮಸ್ಸನ್ನು ಕುಗ್ಗಿಸುತ್ತದೆ. ಹಾಗಾಗಿ ಕೋಲುಕಡ್ಡಿಗಳನ್ನು ಕಾರೆ, ಬಾರೆ, ಬೈನೆ, ತೇಗ, ಜಾಲಿ ಮತ್ತು ಗಂಟಿಕಣಗಲು ಮರಗಳಿಂದ ತುಂಡರಿಸಿದ ಮರಗಳಿಂದ ಕೋಲುಗಳನ್ನು ಸಿದ್ಧಪಡಿಸಿ ಬಳಸಿದರೆ ಕೋಲಾಟ ಪ್ರದರ್ಶನವು ಅಡ್ಡಿ-ಆಂತಕವಿಲ್ಲದೆ ಮುಂದುವರಿಯುತ್ತದೆ.

**೩.೪.೪. ಗೆಜ್ಜೆ ಸರ**

ಕೋಲಾಟವು ಕುಣಿತದಿಂದ ಕೂಡಿದ ಒಂದು ಆಟ. ಕೋಲು ಹುಯ್ಯುವ ಕಲಾವಿದರು ನೃತ್ಯ ಪ್ರದರ್ಶನ ಮಾಡುವ ಕಾಲಕ್ಕೆ ತಮ್ಮ ಎರಡು ಕಾಲುಗಳಿಗೆ ಗೆಜ್ಜೆ ಸರಗಳನ್ನು ಕಟ್ಟಿಕೊಳ್ಳುವುದು ರೂಢಿಯಲ್ಲಿದೆ. ಇವುಗಳನ್ನು ಕಂಚಿನ ಲೋಹದಿಂದ ಸಿದ್ಧಪಡಿಸಿರುತ್ತಾರೆ. ಗೋಲಿಯಾಕಾರದ ಗಾತ್ರವನ್ನು ಹೊಂದಿರುತ್ತವೆ. ಕಾಲಿಗೆ ಗೆಜ್ಜೆ ಸರಗಳನ್ನು ಕಟ್ಟದೆ ಪ್ರದರ್ಶನ ಮಾಡಿದರೆ ಕೋಲಾಟ ಕಳೆಕಟ್ಟುವುದಿಲ್ಲ. ಕಲಾವಿದರು ಕಾಲುಗಳಿಗೆ ಗೆಜ್ಜೆ ಕಟ್ಟಿದಾಗಲೆ ಕೋಲಾಟದ ಮಂಡಲವು ರಂಗೇರುತ್ತದೆ.

ವಿದ್ವಾಂಸರಾದ ಮಳಲಿ ವಸಂತಕುಮಾರ ಅವರು ಗೆಜ್ಜೆಯ ಕುರಿತು ಹೀಗೆ ಪ್ರಸ್ತಾಪಿಸಿದ್ದಾರೆ. "ಎಷ್ಟೇ ಚೆನ್ನಾಗಿ ಕುಣಿದರೂ ಸಹ ಕಾಲಿಗೆ ಗೆಜ್ಜೆ ಇಲ್ಲದಿದ್ದರೆ ಅದು ಅಷ್ಟಾಗಿ ಶೋಭಿಸುವುದಿಲ್ಲ. ಕುಣಿತಕ್ಕೆ ರೂಪು ಕೊಡುವುದೇ ಗೆಜ್ಜೆಯ ಝುಣ್ ಝುಣ್ ನಿನಾದ. ಗೆಜ್ಜೆ ಇಲ್ಲದೆ ಕುಣಿಯುವುದು ಸದ್ದು ಬಾರದ ತಮಟೆಯನ್ನು ಬಡಿದಂತೆ. ಆದ್ದರಿಂದ ಕೋಲು ಹಿಡಿಯುವುದಕ್ಕೆ ಮುಂಚೆ ಆಟಗಾರರು ತಮ್ಮ ಎರಡು ಕಾಲುಗಳಿಗೂ ಎರಡು ಗೆಜ್ಜೆ ಸರಗಳನ್ನು ಕಟ್ಟಿಕೊಳ್ಳುತ್ತಾರೆ" ಎಂದು ಗೆಜ್ಜೆ ಸರಗಳ ಮಹತ್ವದ ಕುರಿತು ಅಭಿಪ್ರಾಯಿಸಿರುವುದು ಸರಿಯೆನಿಸುತ್ತದೆ(ಮಳಲಿ ವಸಂತಕುಮಾರ,

ವೀರಣ್ಣ ದಂಡೆ(ಸಂ), ೨೦೦೬, ಸುವರ್ಣ ಜಾನಪದ ಲೇಖನಗಳು, ಪುಟ ೨೪೯). ಇವರ ಈ ಅಭಿಪ್ರಾಯವನ್ನು ಗಮನಿಸಿದಾಗ ಕೋಲಾಟದಲ್ಲಿ ಗೆಜ್ಜೆಯ ಸರಗಳು ಇಲ್ಲದಿದ್ದಾಗ ಕೋಲು ಕುಣಿತವು ಶೋಭಿಸದು ಮತ್ತು ಗೆಜ್ಜೆಯ ಝುಣಲ್, ಝುಣಲ್ ನಾದವು ಕಲಾವಿದರ ಕುಣಿತಕ್ಕೆ ಮತ್ತಷ್ಟು ಉತ್ಸಾಹ, ಹುರುಪನ್ನು ತುಂಬುತ್ತದೆ. ಇವು ಕೋಲಾಟದ ಆಕರ್ಷಣೆಯನ್ನು ಹೆಚ್ಚುವಂತೆ ಮಾಡುತ್ತವೆ. ಹಾಗಾಗಿ ನೋಡುಗರ ಕಣ್ಣುಗಳನ್ನು ರೋಮಾಂಚನಗೊಳಿಸುತ್ತವೆ ಎಂಬುದರಲ್ಲಿ ಸಂದೇಹವಿಲ್ಲ.

ಜಾನಪದ ವಿದ್ವಾಂಸರಾದ ಮಳಲಿ ವಸಂತಕುಮಾರ ಅವರು ಕೋಲಾಟ ಕುಣಿತಕ್ಕೆ ಗೆಜ್ಜೆಯ ಅವಶ್ಯಕತೆ ಅಥವಾ ಅಗತ್ಯತೆಯ ಕುರಿತು ಗಾದೆ ಮಾತನ್ನು ಹೀಗೆ ಪ್ರಸ್ತಾಪ ಮಾಡುತ್ತಾರೆ. "ಕೋಲಿಗೆ ತಕ್ಕಂತೆ ಕೋಲು ಹಾಕು, ಕಾಲಿಗೆ ತಕ್ಕಂತೆ ಗೆಜ್ಜೆ ಕಟ್ಟು" ಎಂದು ಹೇಳಿರುವುದು ಸೂಕ್ತ ಎನಿಸುತ್ತದೆ(ಮಳಲಿ ವಸಂತಕುಮಾರ, ವೀರಣ್ಣ ದಂಡೆ(ಸಂ), ೨೦೦೬, ಸುವರ್ಣ ಜಾನಪದ ಲೇಖನಗಳು, ಪುಟ ೨೪೯).

ಕೋಲಾಟದ ಪ್ರದರ್ಶನದ ವೇಳೆ ಕಲಾವಿದರ ಕಾಲಿಗೆ ಗೆಜ್ಜೆಗಳನ್ನು ಕಡ್ಡಾಯವಾಗಿ ಕಟ್ಟಿಕೊಂಡಾಗ ಮಾತ್ರ ಕೋಲಾಟವನ್ನು ನೋಡಲು ಚೆಂದ ಎಂಬ ಮಾತನ್ನು ಮಳಲಿ ವಸಂತಕುಮಾರ ಅವರು ಪ್ರಸ್ತಾಪಿಸಿರುವ ಗಾದೆ ಮಾತು ನಿರೂಪಿಸುತ್ತದೆ.

ಗೆಜ್ಜೆಯ ಕುರಿತಾಗಿ ಕೋಲಾಟ ಪದಗಳಲ್ಲಿಯೂ ಪ್ರಸ್ತಾಪ ಬರುವುದನ್ನು ಕಾಣಬಹುದು. ಕರ್ನಾಟಕ - ಆಂಧ್ರ ಗಡಿ ಪರಿಸರದ ಚಳ್ಳಕೆರೆಯ ನಾಯಕನಹಟ್ಟಿ ಪರಿಸರದಲ್ಲಿ ಈ ಕೋಲುಪದವೊಂದು ಪ್ರಚಲಿತವಿದೆ. ಈ ಹಾಡಿನಲ್ಲಿ ಗೆಜ್ಜೆ ಕುರಿತು ವಿಚಾರ ಮಾಡಿರುವುದನ್ನು ಕಾಣಬಹುದಾಗಿದೆ.

> "ಗೆಜ್ಜೆ ಕಟ್ಟಲಿಕ್ಕೆ ಹೆಜ್ಜೆ ಹಾಕಲಿಕ್ಕೆ
> ಗೆಜ್ಜೆ ಸ್ವರವು ನಿಮಗೆಲ್ಲೈತೋಽ....
> ಗೆಜ್ಜೆ ಸ್ವರವು ನಿಮಗೆಲ್ಲೈತೋಽ.....
> ವಸ್ತುರದೊಳಗೆ ಮಲಗೈತೋಽ...." ||ಪ||
>
> (ವಕ್ತೃ: ಬೋರನಾಯಕ, ಓಬ್ಬಯ್ಯನಹಟ್ಟಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಕೋಲುಪದದ ಸಾಲುಗಳು ಪಲ್ಲವಿಗಳಾಗಿವೆ. ಕೋಲು ಹುಯ್ಯುವ ಕಾಲಕ್ಕೆ ಕೋಲು ಪದಗಳಲ್ಲಿ ಗೆಜ್ಜೆಗಳನ್ನು ಕುರಿತು ಪ್ರಸ್ತಾಪ ಮಾಡಿರುವುದನ್ನು ಗಮನಿಸಿದರೆ ಕೋಲಾಟ ಪ್ರದರ್ಶನದಲ್ಲಿ ಗೆಜ್ಜೆಗಳು ತುಂಬಾ ಅಗತ್ಯವಾದ ವಸ್ತುಗಳು ಎಂಬುದು ನಿರ್ವಿವಾದ ಎಂಬುದು ತಿಳಿದ ಸಂಗತಿಯಾಗಿದೆ.

ಹೀಗೆ ಕೋಲಾಟದಲ್ಲಿ ಕೋಲು ಪ್ರದರ್ಶನ ಮಾಡುವ ಕಾಲಕ್ಕೆ ಕಲಾವಿದರು ಕಾಲಿಗೆ ಗೆಜ್ಜೆ ಕಟ್ಟಿ ಕುಣಿದಾಗ ಕೋಲಾಟದ ಗತ್ತು - ಗಮ್ಮತ್ತು ಆಕರ್ಷಣೀಯವಾಗಿ ರಂಗು-ರಂಗಿನಿಂದ ಕೂಡಿರುತ್ತದೆ

ಮತ್ತು ಪ್ರೇಕ್ಷಕ ವರ್ಗವನ್ನು ತನ್ನೆಡೆ ಸೆಳೆಯಬಲ್ಲ ಶಕ್ತಿ ಗೆಜ್ಜೆ ಸರಗಳಿಗಿರುತ್ತದೆ ಎಂಬುದನ್ನು ತಿಳಿಯಬಹುದು.

**೩.೪.೫. ತಪ್ಪಡಿ ಅಥವಾ ಹಲಗೆ**

ಕೋಲಾಟ ಪ್ರದರ್ಶನಕ್ಕೆ ಕೋಲು ಹುಯ್ಯುವ ಕಲಾವಿದರು, ಕೋಲುಪದಗಳು, ಕೋಲುಕಡ್ಡಿಗಳು, ಗೆಜ್ಜೆಗಳು ಕೋಲಾಟದ ಕುಣಿತಕ್ಕೆ ಎಷ್ಟು ಮುಖ್ಯವೋ ತಮಟೆ ಮತ್ತು ದಮ್ಮಡಿಗಳು ಕೂಡ ಅಷ್ಟೇ ಮುಖ್ಯವಾದ ಪಾತ್ರವನ್ನು ವಹಿಸುತ್ತವೆ. ಪ್ರತಿಯೊಂದು ಜಾನಪದ ನೃತ್ಯಗಳಲ್ಲಿ ತಮಟೆ ಮತ್ತು ದಮ್ಮಡಿಗಳ ಪಾಲ್ಗೊಳ್ಳುವಿಕೆ ಇರುತ್ತದೆ.

ಕೋಲುಪದಗಳ ನಾದ-ಲಯಗಳಿಗೆ ಅನುಗುಣವಾಗಿ ತಮಟೆ ಮತ್ತು ದಮ್ಮಡಿಗಳನ್ನು ಬಾರಿಸುವುದು ಕಂಡು ಬರುತ್ತದೆ. ಕೋಲು ಪ್ರದರ್ಶನ ಮಾಡುವ ಕಾಲಕ್ಕೆ ತಮಟೆ ಮತ್ತು ದಮ್ಮಡಿ ಬಾರಿಸುವ ಕಲಾವಿದನು, ಕೋಲು ಹುಯ್ಯುವ ಕಲಾವಿದರ ಮಧ್ಯದಲ್ಲಿ ನಿಂತು, ಕುಳಿತುಕೊಂಡು, ಅಥವಾ ಬಾಗಿಕೊಂಡು ತಲೆಯನ್ನು ಅಲ್ಲಾಡಿಸುತ್ತಾ, ನಿಂತಲ್ಲೆ ಹೆಜ್ಜೆಯನ್ನು ಹಾಕುತ್ತಾ, ಕುಣಿಯುತ್ತಾ ತಮಟೆ ಮತ್ತು ದಮ್ಮಡಿಯನ್ನು ಬಾರಿಸುವುದು ಕಂಡು ಬರುತ್ತದೆ. ದಮ್ಮಡಿ ಮತ್ತು ತಮಟೆಗಳನ್ನು ಕೋಲು ಹುಯ್ಯುವ ಕಲಾವಿದರ ಹೆಜ್ಜೆಗಳಿಗೆ, ಗತಿಗಳಿಗೆ ಅನುಗುಣವಾಗಿ ಮತ್ತು ಕೋಲುಪದಗಳನ್ನು ಅನುಸರಿಸಿ ಬಾರಿಸುವುದು ಕಂಡು ಬರುತ್ತದೆ. ಹಲಗೆ ಅಥವಾ ದಮ್ಮಡಿಯನ್ನು ನುಡಿಸುವ ಶಬ್ದಕ್ಕೆ ಕೋಲು ಕಲಾವಿದರು ಮೈಯಲ್ಲಿ ದೇವರು ಬಂದವರಂತೆ ಕುಣಿದು, ಕುಪ್ಪಳಿಸುವುದನ್ನು ಕಾಣಬಹುದು. ಇವುಗಳನ್ನು ಬಾರಿಸುವುದರಿಂದ ಕೋಲುಮೇಳಗಾರ ಮತ್ತು ಕೋಲು ಕಲಾವಿದರ ಹುರುಪು, ಹುಮ್ಮಸ್ಸು, ಉತ್ಸಾಹಗಳು ಇಮ್ಮಡಿಗೊಳ್ಳುತ್ತವೆ ಹಾಗೂ ಕೋಲಾಟ ನೋಡಲು ಬಂದ ಪ್ರೇಕ್ಷಕ ವರ್ಗವನ್ನು ತನ್ನ ಝುಣ ಝುಣ ನಾದದಿಂದ ತನ್ನೆಡೆಗೆ ಸೆಳೆಯಬಲ್ಲ ಶಕ್ತಿ ಈ ಪರಿಕರಗಳಿಗಿದೆ.

ದಮ್ಮಡಿ ಬಾರಿಸುವ ಕಲಾವಿದನ ಕುರಿತಾಗಿ ಮಳಲಿ ವಸಂತಕುಮಾರ ಅವರು ಈ ರೀತಿ ಅಭಿಪ್ರಾಯಿಸಿದ್ದಾರೆ. "ದಮ್ಮಡಿ ಬಡಿಯುವವನು ಉಳಿದ ಆಟಗಾರರಿಗಿಂತ ಹೆಚ್ಚು ಸ್ವತಂತ್ರ. ತಾಳಕ್ಕೆ ತಕ್ಕಂತೆ ಬಡಿಯುವುದನ್ನು ಬಿಟ್ಟರೆ ಉಳಿದವರಂತೆ ಸಂಬಂಧಪಟ್ಟ ಆಳುಗಳಿಗೆ ಕೋಲು ಕೊಡುವುದಾಗಲಿ, ನಿಶ್ಚಿತವಾದ ಮನೆಗಳಿಗೆ ದಾಟುವುದಾಗಲಿ ಇರುವುದಿಲ್ಲ"(ಮಳಲಿ ವಸಂತಕುಮಾರ, ವೀರಣ್ಣ ದಂಡೆ(ಸಂ), ೨೦೦೬, ಸುವರ್ಣ ಜಾನಪದ ಲೇಖನಗಳು, ಪು. ೨೪೯) ಎಂದು ಹೇಳಿರುವುದು ಸರಿ ಎನಿಸುತ್ತದೆ.

ಕೋಲಾಟದಲ್ಲಿ ದಮ್ಮಡಿ ಮತ್ತು ತಮಟೆ ಹಾಗೂ ತಾಳ ಹಾಕುವ ಅಥವಾ ಬಾರಿಸುವ ಕಲಾವಿದರಿಗೆ ಇರುವ ಸ್ವಾತಂತ್ರ್ಯ ಇತರ ಆಟಗಾರರಿಗೆ ಇರುವುದಿಲ್ಲ. ದಮ್ಮಡಿ ಅಥವಾ ತಮಟೆ ಬಾರಿಸುವ ಕಲಾವಿದರಿಗೆ ಹೇಗೆ ಬಾರಿಸಬೇಕೆಂಬ ನಿಯಮವಿಲ್ಲ. ಅಂದರೆ ಕುಳಿತು ಬಾರಿಸಬೇಕು, ನಿಂತು ಬಾರಿಸಬೇಕು, ಬಾಗಿಕೊಂಡೇ ಬಾರಿಸಬೇಕು ಎಂಬ ಷರತ್ತುಗಳು ಇರುವುದಿಲ್ಲ. ಹಾಡುಗಳಿಗೆ ಅನುಗುಣವಾಗಿ ಬಾರಿಸಿದರೆ ಸಾಕೆನಿಸುತ್ತದೆ.

ಕೆಲವು ಪ್ರಾಂತಗಳಲ್ಲಿ ದಮ್ಮಡಿಯನ್ನು ಬಳಸಿದರೆ ಕೆಲವು ಭಾಗಗಳಲ್ಲಿ ತಮಟೆ ಅಥವಾ ಹಲಗೆಯನ್ನು ಬಳಸುವುದು ಕಂಡುಬರುತ್ತದೆ. ಹಲಗೆ ಅಥವಾ ತಮಟೆ, ತಪ್ಪಡಿಯನ್ನು ಚಿತ್ರದುರ್ಗ, ಬಳ್ಳಾರಿ ಮತ್ತು ತುಮಕೂರು ಭಾಗಗಳಲ್ಲಿ ಹೆಚ್ಚಾಗಿ ತಪ್ಪಡಿ ಅಥವಾ ಹಲಗೆಯನ್ನು ಬಳಸುವುದಿದೆ.

ಇಪ್ಪತ್ತು ಅಥವಾ ಇಪ್ಪತ್ತೈದು ಅಂಗುಲಗಳ ಸುತ್ತಳತೆಯ ಮರದ ಸಾಧನವೊಂದಕ್ಕೆ ಮೇಕೆಯ ಚರ್ಮವನ್ನು ತುಂಬಾ ಬಲವಾಗಿ ಸುತ್ತುಕಟ್ಟಿ ಮಾಡಿದ ಒಂದು ಸಾಧನವೇ ತಪ್ಪಡಿ ಅಥವಾ ಹಲಗೆ ಎಂದು ಕರೆಯುತ್ತಾರೆ. ತಪ್ಪಡಿ ಅಥವಾ ಹಲಗೆಯನ್ನು ಮೇಕೆಯ ಚರ್ಮದಿಂದ ಮಾಡುತ್ತಾರೆ. ಕೆಲವು ಭಾಗಗಳಲ್ಲಿ ಜಿಂಕೆಯ ಚರ್ಮವನ್ನು ಸಹ ಬಳಸುತ್ತಾರೆ. ಜಿಂಕೆ ಅಥವಾ ಮೇಕೆಯ ಚರ್ಮದಿಂದ ಒಳ್ಳೆಯ ನಾದವು ಉಂಟಾಗುವುದರಿಂದ ತಪ್ಪಡಿಗೆ ಇವುಗಳ ಚರ್ಮವನ್ನೇ ಹೆಚ್ಚಾಗಿ ಬಳಕೆ ಮಾಡುತ್ತಾರೆ. ತಪ್ಪಡಿಯ ಅಂಚಿಗೆ ಮರದ ಕಟ್ಟಿಗೆಗಳಿಂದ ಸುತ್ತಲೂ ಇಲ್ಲವೆ ಎರಡು ಮೂರು ಕಡೆ ಗೆಜ್ಜೆಗಳನ್ನು ರೇಷ್ಮೆ ದಾರದಲ್ಲಿ ಪೋಣಿಸಿ ಕಟ್ಟಿರುತ್ತಾರೆ. ಕರ್ನಾಟಕ - ಆಂಧ್ರ ಗಡಿ ಪರಿಸರದಲ್ಲಿ ತಪ್ಪಡಿಯನ್ನು ಹೆಚ್ಚಾಗಿ ಬಳಸುವುದು ಕಂಡು ಬಂದಿದೆ.

ಮಧ್ಯಕರ್ನಾಟಕ ಮತ್ತು ಕರ್ನಾಟಕ - ಆಂಧ್ರಗಡಿ ಪರಿಸರದ ಪ್ರಾಂತಗಳಲ್ಲಿ ಕೋಲಾಟ ಪ್ರದರ್ಶನ ಮಾಡುವ ಕಾಲಕ್ಕೆ ಹಲಗೆ ಅಥವಾ ತಪ್ಪಡಿಯನ್ನು ಬಳಸುವುದಿದೆ. ಮಳಲಿ ವಸಂತಕುಮಾರ ಅವರು ಈಗಾಗಲೇ ಪ್ರಸ್ತಾಪಿಸಿರುವಂತೆ ಹಾಸನ, ಮೈಸೂರು ಭಾಗದಲ್ಲಿ ಉಡುವಿನ ಚರ್ಮದಿಂದ ಸಿದ್ಧಪಡಿಸಿದ ದಮ್ಮಡಿಯನ್ನು ಕೋಲಾಟದಲ್ಲಿ ಬಳಸುತ್ತಾರೆ ಎಂದು ಹೇಳಿರುವುದನ್ನು ಗಮನಿಸಿದರೆ ಪ್ರಾದೇಶಿಕವಾಗಿ ದಮ್ಮಡಿ - ಹಲಗೆಗಳನ್ನು ಬದಲಾಯಿಸುತ್ತಾ ಬಳಸುವುದು ಕಂಡುಬರುತ್ತದೆ.

ಕೋಲಾಟ ಪ್ರದರ್ಶನದ ವೇಳೆಯಲ್ಲಿ ತಪ್ಪಡಿ ಅಥವಾ ಹಲಗೆ ಮತ್ತು ದಮ್ಮಡಿ ಎರಡೂ ಸಾಧನಗಳನ್ನು ಪ್ರಾದೇಶಿಕವಾಗಿ ಬದಲಾವಣೆ ಮಾಡಿಕೊಂಡು ಬಳಸುವುದು ಇದೆ.

ಹಗಲು ಹೊತ್ತಿನಲ್ಲಿ ಕೋಲಾಟ ಪ್ರದರ್ಶನ ಮಾಡುವಾಗ, ದಮ್ಮಡಿ ಮತ್ತು ಹಲಗೆಗಳ ಶಬ್ದವು ಹೆಚ್ಚು ನಾದವನ್ನು ಹೊರಹೊಮ್ಮಿಸುತ್ತದೆ. ಆದರೆ ರಾತ್ರಿಯ ವೇಳೆ ಬಾರಿಸುವಾಗ ಶೀತದ ವಾತಾವರಣ ಇರುವುದರಿಂದ ಈ ಸಮಯದಲ್ಲಿ ಬಾರಿಸಿದರೆ ಕಡಿಮೆ ಶಬ್ದದ ಜೊತೆಗೆ ಹೊರಹೊಮ್ಮುವ ನಾದವು ಕಡಿಮೆಯಾಗುತ್ತದೆ. ಅಂಥ ಸಂದರ್ಭಗಳಲ್ಲಿ ಬೆಂಕಿಯಿಂದ ಸ್ವಲ್ಪಮಟ್ಟಿಗೆ ಕಾಯಿಸಿ ದಮ್ಮಡಿ ಮತ್ತು ತಪ್ಪಡಿಗಳನ್ನು ಬಾರಿಸಿದರೆ ತನ್ನ ಮೂಲಶಬ್ದವನ್ನು ಹೊರಹೊಮ್ಮಿಸಲು ಸಾಧ್ಯವಾಗುತ್ತದೆ.

**೩.೪.೬. ತಾಳಗಳು**

ಕೋಲಾಟದಲ್ಲಿ ಕಂಚಿನ ಲೋಹದಿಂದ ಮಾಡಿದ ತಾಳಗಳನ್ನು ಬಳಸುವುದು ಕಂಡು ಬರುತ್ತದೆ. ಕೋಲಾಟದ ಪ್ರದರ್ಶನದ ವೇಳೆಯಲ್ಲಿ ದಮ್ಮಡಿ ಮತ್ತು ತಮಟೆ ಬಾರಿಸುವವನ ಸಂಗಡವೇ ತಾಳ ಹಾಕುವವನು ಇರುತ್ತಾನೆ. ಕೋಲು ಹುಯ್ಯುವ ಕಲಾವಿದರ ಮಧ್ಯದಲ್ಲಿ

ತಾಳ ಹಾಕುವವನು ಎರಡು ತಾಳಗಳನ್ನು ಒಂದಕ್ಕೊಂದು ತಾಗಿಸುತ್ತಾ ಕೋಲು ಪದಗಳಿಗೆ ಮತ್ತು ಕಲಾವಿದರ ಹೆಜ್ಜೆಗಳಿಗೆ ಅನುಗುಣವಾಗಿ ತಾಳಗಳನ್ನು ನುಡಿಸುತ್ತಿರುತ್ತಾನೆ.

ವಿದ್ವಾಂಸರಾದ ಮಳಲಿ ವಸಂತಕುಮಾರ ಅವರು ತಾಳ ಹಾಕುವ ಕಲಾವಿದನ ಕುರಿತು ಹೀಗೆ ವಿಚಾರ ಮಾಡುತ್ತಾರೆ. "ಕೋಲು ಹೊಯ್ಯುವವರ ಮಧ್ಯೆ ಒಬ್ಬ ದಮ್ಮಡಿ ಬಾರಿಸುತ್ತಿದ್ದರೆ ಮತ್ತೊಬ್ಬ ಎರಡೂ ಕೈಗಳಲ್ಲೂ ಎರಡು ತಾಳಗಳನ್ನು ಹಿಡಿದು "ತಾಳ" ಹಾಕುತ್ತಿರುತ್ತಾನೆ. ಸ್ವಲ್ಪ ಹೆಚ್ಚು ಕಡಿಮೆ ದಮ್ಮಡಿ ಬಾರಿಸುವವನ ಕಾರ್ಯವೂ, ತಾಳ ಹಾಕುವವನ ಕಾರ್ಯವೂ ಒಂದೇ ಇರುತ್ತದೆ. ತಾಳ ಹಾಕುವವನು ಕುಣಿಯುವುದಿಲ್ಲ, ತಾಳಗಳು ಕಂಚು ಲೋಹದಿಂದ ಮಾಡಿರುತ್ತವೆ" (ಮಳಲಿ ವಸಂತಕುಮಾರ, ವೀರಣ್ಣ ದಂಡೆ(ಸಂ), ೨೦೦೬, ಸುವರ್ಣ ಜಾನಪದ ಲೇಖನಗಳು, ಪು. ೨೫೦) ಎಂದು ತಾಳಗಳ ಕುರಿತು ಅಭಿಪ್ರಾಯಿಸಿದ್ದಾರೆ.

ಕೋಲಾಟದಲ್ಲಿ ತಾಳಗಳನ್ನು ಬಳಕೆ ಮಾಡುವುದರಲ್ಲಿ ಪ್ರಾಂತ ಭೇದಗಳು ಕಂಡು ಬರುತ್ತವೆ. ಕೆಲವೊಂದು ಪ್ರದೇಶಗಳಲ್ಲಿ ಬಳಸಿದರೆ ಮತ್ತೊಂದೆಡೆ ಅವುಗಳನ್ನು ಬಳಕೆ ಮಾಡುವುದೇ ಕಡಿಮೆ ಮಳಲಿ ವಸಂತಕುಮಾರ ಅವರು ವಿಚಾರಿಸಿರುವಂತೆ ಹಾಸನ, ಮಂಡ್ಯ, ಮೈಸೂರು ಭಾಗಗಳಲ್ಲಿ ತಾಳಗಳನ್ನು ಬಳಸುವುದಿದೆ. ಆದರೆ ಕರ್ನಾಟಕ - ಆಂಧ್ರ ಗಡಿ ಪರಿಸರದಲ್ಲಿ ತಾಳಗಳನ್ನು ಕೋಲಾಟದಲ್ಲಿ ಉಪಯೋಗಿಸುವುದು ತುಂಬಾ ವಿರಳ.

ಕರ್ನಾಟಕ - ಆಂಧ್ರಪ್ರದೇಶದ ಗಡಿ ಪರಿಸರದಲ್ಲಿ ಎರಡು ಭಾಷೆಗಳ ಪರಸ್ಪರ ಪ್ರಭಾವದಿಂದ ಉತ್ತಮ ಬಾಂಧವ್ಯ ಬೆಳೆದು ಕೊಡು-ಪಡೆ ನಡೆದಿರುವುದು ಕಾಣಸಿಗುತ್ತದೆ. ಈ ಪ್ರಕ್ರಿಯೆ ಲಿಖಿತ ಸಾಹಿತ್ಯವೂ ಒಳಗೊಂಡಂತೆ ಜನಪದರ ಸಹಜ ಹಾಡುಗಳಲ್ಲೂ ಈ ರೀತಿಯ ಉದಾಹರಣೆಗಳನ್ನು ಕಾಣಬಹುದು. ಜಾನಪದದಲ್ಲಿ ಕಥನ ಕಾವ್ಯ, ಗೀತಸಾಹಿತ್ಯ ಪ್ರಕಾರಗಳಾದ ಬುರ್ರಕಥಾ, ಭಜನೆಮೇಳ, ಸೋಬಾನೆ, ದಾಸರಾಟ, ಹಗಲುವೇಷ, ಕೋಲೆಬಸವನಾಟ ಮತ್ತು ಕೋಲಾಟ ಮುಂತಾದ ಕಲೆಗಳಲ್ಲಿ, ಕನ್ನಡ- ತೆಲುಗು ನಾಡಿನ ಗಡಿಭಾಗಗಳಲ್ಲಿ ಕೊಡು-ಕೊಳ್ಳುವಿಕೆ ನಡೆದಿದೆ, ಇಂದಿಗೂ ನಡೆಯುತ್ತಿದೆ.

ಅಧ್ಯಯನ ವಿಷಯವಾದ ಕೋಲಾಟ ಪದಗಳನ್ನು ಕರ್ನಾಟಕ - ಆಂಧ್ರ ಗಡಿ ಪ್ರಾಂತಗಳಲ್ಲಿ ಈ ನಿಟ್ಟಿನಲ್ಲಿ ಗಮನಿಸಲಾಗಿದೆ. ಕನ್ನಡ ಗಡಿ ಪ್ರಾಂತಗಳಲ್ಲಿ ಕನ್ನಡದ ಜೊತೆಗೆ ತೆಲುಗು ಕೋಲಾಟ ಪದಗಳನ್ನು ಹಾಡುತ್ತಾರೆ. ತೆಲುಗು ಗಡಿ ಪ್ರಾಂತಗಳಲ್ಲಿ ತೆಲುಗು ಕೋಲು ಪದಗಳನ್ನು ಒಳಗೊಂಡಂತೆಯೂ ಕನ್ನಡ ಭಾಷೆಯ ಪದಗಳನ್ನು ಸರಾಗವಾಗಿ ಹಾಡುವುದಿದೆ. ಹೀಗೆ ಕೋಲಾಟದಂಥ ಜನಪದ ಸಾಮೂಹಿಕ ಕಲೆಯಲ್ಲಿ ಈ ಎರಡೂ ಭಾಷಾ ಪ್ರದೇಶಗಳು ಒಂದಕ್ಕೊಂದು ಅಂಟಿಕೊಂಡಿರುವುದರಿಂದ ಉತ್ತಮ ಬಾಂಧವ್ಯವನ್ನು ವೃದ್ಧಿಸಿಕೊಂಡಿವೆ.

### ೩.೫. ಕೋಲಾಟದ ವಸ್ತುವಿಷಯ

ಕನ್ನಡ - ತೆಲುಗು ಕೋಲಾಟ ಪದಗಳಲ್ಲಿ ವಿಭಿನ್ನ ರೀತಿಯ, ಹತ್ತು ಹಲವು ತೆರನಾದ ವಸ್ತುವೈವಿಧ್ಯತೆಗಳನ್ನು ಕರ್ನಾಟಕ - ಆಂಧ್ರ ಗಡಿ ಪ್ರಾಂತಗಳಲ್ಲಿ ಕಾಣಬಹುದು. ಗಡಿ ಪರಿಸರದ

ಪ್ರಾಂತಗಳಾದ ಬಳ್ಳಾರಿ, ಕೂಡ್ಲಿಗಿ, ಸಿರುಗುಪ್ಪ, ಚಿತ್ರದುರ್ಗದ ಚಳ್ಳಕೆರೆ, ಮೊಳಕಾಲ್ಮೂರು, ತುಮಕೂರಿನ ಪಾವಡಗಳಲ್ಲಿ ಕನ್ನಡ - ತೆಲುಗು ಕೋಲುಪದಗಳನ್ನು ಸಂಗ್ರಹಿಸಲಾಗಿದೆ. ಈ ಹಿನ್ನೆಲೆಯಲ್ಲಿ ಕೋಲುಪದಗಳಲ್ಲಿನ ವಸ್ತುವಿಷಯಗಳನ್ನು ವಿವರಿಸಿ, ವಿಶ್ಲೇಷಿಸುವ ಕಾರ್ಯ ಮಾಡಲಾಗಿದೆ.

**೩.೫.೧. ಪ್ರಾರ್ಥನೆ ಅಥವಾ ದೇವರಸಂಬಂಧಿ ಕೋಲುಪದಗಳು**

ಜನಪದರು ತಮ್ಮ ಬದುಕಿನಲ್ಲಿ ಸುಖ, ದುಃಖ, ನೋವು-ನಲಿವುಗಳಿಗೆ ದೇವರ ಮೇಲಿರುವ ಅಚಲವಾದ ಭಯ, ಭಕ್ತಿ, ನಂಬಿಕೆಗಳೇ ಪ್ರಾರ್ಥನೆಗಳಾಗಿ ಮಾರ್ಪಾಡಾಗಿರಬಹುದೇನೋ? ಅಥವಾ ತಮ್ಮ ಬದುಕಿನ ಚಹರೆಗಾಗಿ ಇಷ್ಟದೈವಗಳನ್ನು ಪೂಜಿಸುವುದು, ಸ್ತುತಿಸುವುದು, ಪ್ರಾರ್ಥಿಸುವುದನ್ನು ಕಾಣಬಹುದು. ಜನಪದರು ತಾವು ಪಟ್ಟ ಪಾಡೆ ಹಾಡುಗಳಾಗಿ ಜನಪದ ನುಡಿಗಳಾಗಿ ಹುಟ್ಟಿಕೊಂಡಿವೆ.

ಮದುವೆ, ಹಬ್ಬ - ಹರಿದಿನ, ಜಾತ್ರೆ - ಉತ್ಸವ, ರಾಷ್ಟ್ರೀಯ ಉತ್ಸವ ಮತ್ತು ಸಣ್ಣ ಕಾರ್ಯಕ್ರಮ ನಡೆದರೂ ಅಂಥ ಸಮಯದಲ್ಲಿ ದೇವರನ್ನು ನೆನೆಯುವುದು ವಾಡಿಕೆ. ಉತ್ಸವವಿರಲಿ, ಜಾತ್ರೆ ಕಾರ್ಯಕ್ರಮಗಳಿರಲಿ ಯಾವುದೇ ವಿಘ್ನಗಳು ಬಾರದಿರಲಿ ಅಥವಾ ಎದುರಾಗದಿರಲೆಂದು ಪ್ರಾರ್ಥನಾಗೀತೆ, ಭಕ್ತಿಹಾಡುಗಳನ್ನು ಹಾಡುವುದಿದೆ. ಇದು ಬರೀ ಉತ್ಸವಗಳಲ್ಲಿ ಮಾತ್ರ ಅಲ್ಲದೆ ಜನಪದ ಕಲೆಗಳೆನಿಸಿದ ಕೋಲಾಟ, ಬುರ್ರಕಥಾ, ಯಕ್ಷಗಾನ, ಬಯಲಾಟ, ಸೋಬಾನೆ ಮತ್ತು ಭಜನೆ ಮುಂತಾದವುಗಳಲ್ಲಿ ದೇವರು ಕುರಿತು ಪ್ರಾರ್ಥನಾ ಗೀತೆಗಳನ್ನು ಹಾಡುತ್ತಾರೆ. ಇದು ಬರೀ ಉತ್ಸವ ಜಾತ್ರಾಮಹೋತ್ಸವಗಳಿಗೆ ಸೀಮಿತವಾಗದೆ ಹೊಲದಲ್ಲಿ ಗಳೆ ಹೊಡೆಯುವಾಗ, ಬೀಜ ಬಿತ್ತನೆ ಮಾಡುವಾಗ, ಬೆಳೆ ಕಟಾವು ಮಾಡುವಾಗ, ಹೊಸಮನೆಗೆ ಪ್ರವೇಶಿಸುವಾಗ ಮುಂದುವರೆದು ಪ್ರತಿದಿನ ಮುಂಜಾನೆ ಎದ್ದ ತಕ್ಷಣ ದೇವರ ಪ್ರಾರ್ಥನೆ ಮಾಡುತ್ತಾ, ದೇವರನ್ನು ಸ್ತುತಿಸುತ್ತಾ ನೆನೆಯುವುದು ಪಾರ್ಥನಾ ಗೀತೆಗಳ ಮಹತ್ವವನ್ನು ಸಾರುತ್ತದೆ. ಜಾನಪದದ ಯಾವುದೇ ಪ್ರಕಾರವಿರಲಿ ಪ್ರಾರ್ಥನಾ ಗೀತೆಗಳಿಗೆ ಪ್ರತ್ಯೇಕ ಸ್ಥಾನವಿದೆ.

ಭಜನೆಪದ, ಸೋಬಾನೆಪದ, ಬಯಲಾಟ, ದಾಸರಾಟ, ಕೋಲೆಬಸವನಾಟ ಮುಂತಾದ ಜನಪದ ಕಲೆಗಳನ್ನು ಪ್ರದರ್ಶನ ಮಾಡುವುದಕ್ಕೂ ಮೊದಲು ಇಷ್ಟದೈವವನ್ನು ನೆನೆದು ಪ್ರಾರ್ಥಿಸುತ್ತಾರೆ ಅಥವಾ ಸ್ತುತಿಸುತ್ತಾರೆ. ಅನಂತರ ಪ್ರದರ್ಶನವನ್ನು ಆರಂಭಿಸುವುದು ಸಂಪ್ರದಾಯವಾಗಿದೆ. ಕೋಲಾಟದಂಥ ಜನಪ್ರಿಯ ಆಟವನ್ನು ಪ್ರದರ್ಶನ ಮಾಡುವಾಗ ಶೃಂಗಾರ, ಹಾಸ್ಯ, ತಮಾಷೆ, ಗಂಭೀರ, ದುಃಖ, ವ್ಯಂಗ್ಯ, ವಿಡಂಬನೆ, ಸರಸ-ವಿರಸ, ಚಾರಿತ್ರಿಕ ಮುಂತಾದ ವಸ್ತುವೈವಿಧ್ಯತೆಯ ಪದಗಳನ್ನು ಹಾಡುವುದಕ್ಕೂ ಆರಂಭದಲ್ಲಿ ಪ್ರಾರ್ಥನಾ ಗೀತೆಗಳನ್ನು ಹಾಡುವುದು ರೂಢಿಯಲ್ಲಿದೆ.

ಕೋಲಾಟವು ಪ್ರಾರ್ಥನಾಗೀತೆಗೆ ಪ್ರದರ್ಶನ ಮಾಡುವುದರ ಮೂಲಕ ಆರಂಭವಾಗುತ್ತದೆ. ಕೋಲು ಹುಯ್ಯುವ ಪ್ರಾರಂಭಕ್ಕೂ ಮುನ್ನ ಕೋಲು ಹುಯ್ಯುವ ಕಲಾವಿದರು ವೃತ್ತಾಕಾರವಾಗಿ ಒಂದು ಮಂಡಲದಲ್ಲಿ ಸುತ್ತುವರೆದು ನಿಲ್ಲುತ್ತಾರೆ. ಮಂಡಲದ ಮಧ್ಯದಲ್ಲಿ ಕೋಲುಕಡ್ಡಿಗಳನ್ನು

ಗೆಜ್ಜೆ, ದಮ್ಮಡಿ, ತಾಳಗಳನ್ನು ಇಟ್ಟು ಪೂಜೆ ಮಾಡುತ್ತಾರೆ. ಅನಂತರ ತಮಗೆ ಕೋಲು ಕಲಿಸಿದ ಗುರುಗಳಿಗೆ ಅಥವಾ ಕೋಲುಮೇಳಗಾರರಿಗೆ ಕೋಲು ಹುಯ್ಯುವ ಕಲಾವಿದರು ವಂದಿಸುವರು. ಇದಾದ ಬಳಿಕ ಇಷ್ಟದೈವಗಳ ನಾಮಸ್ಮರಣೆಯನ್ನು ಪ್ರಾರ್ಥನಾ ಗೀತೆಗಳಿಂದ ಮಾಡುತ್ತಾರೆ. ನಂತರ ಈ ಹಾಡಿನೊಂದಿಗೆ ಕೋಲಾಟ ಪ್ರದರ್ಶನ ಆರಂಭಿಸುತ್ತಾರೆ. ಪ್ರಾರ್ಥನಾ ಹಾಡುಗಳಲ್ಲಿ ಗಣಪತಿ ಶಕ್ತಿ ದೇವತೆಗಳಾದ ದುರ್ಗಮ್ಮ, ಚೌಡಮ್ಮ, ಕೊಲ್ಲಾರಮ್ಮ, ಪಾರ್ವತಿ, ಕೃಷ್ಣ, ರಾಮ, ಈಶ್ವರ, ಶರಣರು ಮತ್ತು ಸಾಂಸ್ಕೃತಿಕ ನಾಯಕ - ನಾಯಕಿಯರಾದ ನಾಯಕನಹಟ್ಟಿ ತಿಪ್ಪೇಸ್ವಾಮಿ, ಗಾದಿರಿಪಾಲನಾಯಕ, ದಡ್ಡಿಸೂರನಾಯಕ, ಜಗಳೂರು ಪಾಪನಾಯಕ, ಕೊಟ್ಟೂರು ಬಸವೇಶ್ವರ, ಹುಲಿಗೆಮ್ಮ, ಗಾಳೆಮ್ಮ ಮುಂತಾದ ದೇವರುಗಳನ್ನು, ಸಾಂಸ್ಕೃತಿಕ ವೀರರನ್ನು ಸ್ತುತಿಸುವುದರೊಂದಿಗೆ ಪ್ರಾರ್ಥನಾ ಗೀತೆಗಳನ್ನು ಹಾಡುತ್ತಾರೆ. ಅನಂತರ ಪ್ರದರ್ಶನ ವೇಳೆಯಲ್ಲಿ ಶೃಂಗಾರ, ಹಾಸ್ಯ, ತಮಾಷೆ, ಇತರೆ ವಸ್ತುವೈವಿಧ್ಯತೆಗೆ ಸಂಬಂಧಿಸಿದಂಥ ಪದಗಳಿಂದ ಕೋಲಾಟ ಪ್ರದರ್ಶನವನ್ನು ಆರಂಭಿಸುತ್ತಾರೆ. ಹಾಗೆಯೇ ಮುಂದುವರೆಸುತ್ತಾರೆ.



ಕೋಲುಪದಗಳ ಪ್ರಾರ್ಥನಾ ಗೀತೆಗಳ ವಿಶೇಷತೆ ಎಂದರೆ ಆರಂಭದ ಈ ಹಾಡುಗಳು ಚಳ್ಳಕೆರೆ, ಮೊಳಕಾಲ್ಮೂರು, ಕೂಡ್ಲಿಗಿ, ಹೊಸಪೇಟೆ ಎಲ್ಲಾ ಪ್ರಾಂತಗಳನ್ನು ಒಳಗೊಂಡಂತೆ ನಾಯಕನಹಟ್ಟಿ, ಕಂಪಳದೇವರಹಟ್ಟಿ, ಕೂಡ್ಲಿಗಿಯ ಮಾಕನಡಕು, ಸೂಲದಹಳ್ಳಿ ಪ್ರಾಂತಗಳಲ್ಲಿ ಗಣಪತಿಯನ್ನು ಸ್ತುತಿಸುತ್ತಾ ಪ್ರಾರ್ಥನಾ ಗೀತೆಯನ್ನು ಆರಂಭಿಸುವುದು ಕಂಡುಬರುತ್ತದೆ. ಆದರೆ ಪ್ರಾದೇಶಿಕವಾಗಿ ಸಾಹಿತ್ಯ, ಲಯ, ಧಾಟಿ, ಹಾಡುಗಾರಿಕೆಯಲ್ಲಿ ಭಿನ್ನತೆಗಳು ಕಂಡು ಬರುತ್ತವೆ. ಉಳಿದಂತೆ ಗಣಪತಿಯ ಸ್ತುತಿ ಮಾಡುವುದರೊಂದಿಗೆ, ಪ್ರಾರ್ಥನೆ ಮಾಡುತ್ತಾ ಕೋಲಾಟ ಪ್ರದರ್ಶನ ಆರಂಭವಾಗುವುದು.

ಕೋಲುಪದಗಳ ಪ್ರಾರ್ಥನಾ ಗೀತೆಗಳಲ್ಲಿ ಗಣಪತಿಯನ್ನು ಪ್ರಾರ್ಥಿಸುವುದು, ಪೂಜಿಸುವುದು, ಸ್ತುತಿಸುವುದು ತುಂಬಾ ವಿಪುಲವಾಗಿ ಕಂಡು ಬರುತ್ತದೆ. ಕೋಲಾಟ ಪ್ರದರ್ಶನ ಮಾಡುವ ಕಾಲಕ್ಕೆ ಕೋಲಿಗೆ ಸಂಬಂಧಿಸಿದಂಥ ಯಾವುದೇ ತರಹದ ತೊಂದರೆಗಳು, ಅಡ್ಡಿಗಳು, ಬಾರದಿರಲಿ ಎಂಬ ಆಶಯದಿಂದ ಹಾಗೂ ಕೋಲು ಹುಯ್ಯುವ ಕಲಾವಿದರು ಕುಣಿತದ ಗತಿಗಳನ್ನು ಹೆಜ್ಜೆಗಳನ್ನು ತಪ್ಪದಿರಲೆಂದು ಮತ್ತು ಕೋಲುಕಡ್ಡಿಗಳು ಮುರಿಯದಂತೆ ಇರಲು ಹಾಗೂ ಪದಗಳು ಮರೆಯದಂತೆ ಸ್ಮರಣೆಗೆ ಬರಲಿ ಎಂಬ ಸದಾಶಯದೊಂದಿಗೆ ಗಣೇಶನನ್ನು ಸ್ತುತಿಸುವುದು ಕಾಣಬರುತ್ತದೆ.

ನಾಯಕನಹಟ್ಟಿ ಪರಿಸರದಲ್ಲಿ ಕ್ಷೇತ್ರಕಾರ್ಯ ಮಾಡಿ ಸಂಗ್ರಹಿಸಿದ ಕೋಲುಪದಗಳಲ್ಲಿ ಪ್ರಾರ್ಥನಾ ಗೀತೆಗಳನ್ನು ಸಂಗ್ರಹಿಸಿಕೊಳ್ಳಲಾಗಿದೆ. ಈ ಪರಿಸರದಲ್ಲಿ ರಾಮದುರ್ಗ ಬೋಸೇದೇವರಹಟ್ಟಿ, ನೆಲಗೇತನಹಟ್ಟಿ, ಎತ್ತಿನಹಟ್ಟಿ, ಚನ್ನಬಸಯ್ಯನಹಟ್ಟಿ ಮುಂತಾದ ಹಳ್ಳಿಗಳಲ್ಲಿ ಗಣಪತಿಯನ್ನು ಸ್ತುತಿಸುವುದರೊಂದಿಗೆ ಪ್ರಾರ್ಥನಾ ಗೀತೆಗಳನ್ನು ಹಾಡುವುದಿದೆ. ನಾಯಕನಹಟ್ಟಿ ಪ್ರಾಂತದಲ್ಲಿ ಬರುವ ರಾಮದುರ್ಗ ಅಥವಾ ದೊಣಮಂಡಲಹಟ್ಟಿ ಎನ್ನುವ ಗ್ರಾಮದಲ್ಲಿ ಓಬಣ್ಣ ಎಂಬುವರು ಹಾಡಿದ ಒಂದು ಪ್ರಾರ್ಥನಾ ಗೀತೆಯನ್ನು ಇಲ್ಲಿ ಪ್ರಸ್ತಾಸಲಾಗಿದೆ.

ತಂದನಾನೋ ತಂದನಾನಾನೋ ತಂದನಿ ತಂದನಾನ
ತಂದನಾನೋ ತಂದನಿ ತಂದನಾನೋ ಶರಣ ||ಪ||

ಗಜಮುಖನೆ ಗರ್ಭ ಗಜಮುಖನೆ ಗರ್ಭ
ಗಣನಾಥವಂದಿತ ಶರಣು ಶುಜಗರಲ್ಲದ ಕೈಲಿ
ಪೂಜ್ಯಾಪಾಲಿಪೆ ಶರಣು ಅಜಗನ ಹಣೆರುದ್ರ
ಹಾದಿಗೊಂದಿಪ ಶರಣ ಮದ್ದು ಬಾ ಗುರಿ
ಮದಿಯ ಮಂಗಲನೇ ಶರಣ
ತಂದನಾನೋ ತಂದನಾನೋ ತಂದನಿ ತಂದನಾನ ||ಪ||

(ವಕ್ತೃ: ಓಬಣ್ಣ, ದೊಣಮಂಡಲಹಟ್ಟಿ, ರಾಮದುರ್ಗ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಯಾವುದೇ ಸಭೆ - ಸಮಾರಂಭ, ಹಬ್ಬ - ಹರಿದಿನ, ಜಾತ್ರೆ - ಉತ್ಸವಗಳಂಥ ಸಾಂಸ್ಕೃತಿಕ ಆಚರಣೆಗಳಲ್ಲಿ ಕೋಲಾಟದ ಪ್ರದರ್ಶನ ಮಾಡುವುದಕ್ಕೂ ಮೊದಲು ಗಣಪತಿಯನ್ನು ಸ್ತುತಿಸುವುದರೊಂದಿಗೆ ಪ್ರಾರ್ಥನ ಗೀತೆಯನ್ನು ಹಾಡುವುದರ ಮುಖಾಂತರ ಶುರು ಮಾಡುತ್ತಾರೆ. ಗಣಪತಿಯು ವಿಘ್ನವಿನಾಶಕನೂ - ವಿಘ್ನನಿವಾರಕನೂ ಆಗಿರುವುದರಿಂದ ಗಣೇಶನನ್ನು ಪ್ರಾರ್ಥಿಸುವುದು ಸಂಪ್ರದಾಯವಾಗಿ ಬೆಳೆದು ಬಂದಿದೆ. ಈ ರೀತಿ ಗಜಮುಖನನ್ನು ಕೋಲುಪದಗಳಲ್ಲಿ ಪ್ರಾರ್ಥಿಸುವುದು ಚಳ್ಳಕೆರೆಯ ವ್ಯಾಪ್ತಿಗಷ್ಟೇ ಸೀಮಿತವಾಗಿಲ್ಲ. ಬಳ್ಳಾರಿಯ ಸೊಂಡೂರು, ಕೂಡ್ಲಿಗಿ ಸೇರಿದಂತೆ ಆಂಧ್ರಪ್ರದೇಶದ(ಸೀಮಾಂಧ್ರ) ಕರ್ನೂಲು ಜಿಲ್ಲೆಯ ಆಲೂರು ತಾಲೂಕಿನ ಹೊಳಗುಂದ, ಮಾರ್ಲಮಡಿಕಿ ಎನ್ನುವ ಪ್ರಾಂತಗಳಲ್ಲೂ ಕೋಲಾಟದ ಆರಂಭಿಕ ಪ್ರಾರ್ಥನಾ ಗೀತೆಯಾಗಿ ಗಣಪತಿಯನ್ನು ಸ್ತುತಿಸುತ್ತಾ ಪ್ರಾರ್ಥಿಸುವುದು ಕಂಡುಬಂದಿದೆ.

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ಮತ್ತು ಸೊಂಡೂರು ಪ್ರಾಂತಗಳಲ್ಲಿ ಗಣೇಶನನ್ನು ಸ್ತುತಿಸುವ ಹಾಡುಗಳು ತುಂಬಾ ಸಿಗುತ್ತವೆ. ಚಿತ್ರದುರ್ಗ ಮತ್ತು ಬಳ್ಳಾರಿ ಪ್ರಾಂತಗಳಲ್ಲಿ ಸಿಗುವಂಥ ಕೋಲುಪದಗಳ ಪ್ರಾರ್ಥನಾ ಗೀತೆಗಳಲ್ಲಿ ಭಿನ್ನತೆಗಳು ಕಾಣಿಸಿಕೊಳ್ಳುತ್ತವೆ. ಸ್ತುತಿಸುವ ದೇವರು ಗಣಪತಿ ಒಂದೇ ಆದರೂ ಗೀತಾ ಸಾಹಿತ್ಯದಲ್ಲಿ, ಹಾಡಿನ ಲಯ ಧಾಟಿಗಳಲ್ಲಿ ಸಾಮ್ಯತೆಗಳೊಂದಿಗೆ ಭಿನ್ನತೆಗಳು ಕಾಣಸಿಗುತ್ತವೆ.

ಕೂಡ್ಲಿಗಿ ತಾಲೂಕಿನ ಮಾಕನಡಕು ಮತ್ತು ಸೂಲದಹಳ್ಳಿಗಳಲ್ಲಿ ಒಂದೇ ರೀತಿಯ ಪ್ರಾರ್ಥನಾ ಗೀತೆ ಹಾಡುವುದಿದೆ. ಸಾಹಿತ್ಯದಲ್ಲಾಗಲೀ ಅಥವಾ ಹಾಡುಗಾರಿಕೆ, ಲಯ, ದಾಟಿಯಲ್ಲಾಗಲಿ ಯಾವುದೇ ರೀತಿಯ ಭಿನ್ನತೆಗಳು ಕಂಡು ಬರುವುದಿಲ್ಲ.

ಮಾಕನಡಕು ಮತ್ತು ಸೂಲದಹಳ್ಳಿ ಎರಡು ಹಳ್ಳಿಗಳಲ್ಲಿ ಒಂದೇ ರೀತಿಯ ಪ್ರಾರ್ಥನಾ ಕೋಲುಪದವನ್ನು ಸಂಗ್ರಹಿಸಿಕೊಳ್ಳಲಾಗಿದೆ.

ಮೊದಲ ನೆನೆದೇನ ಗಜಮುಖದಯನ
ಕೊಡುಸ್ವಾಮಿ ಕೋಲಿನ ಮತಿಗಳನಾ ||ಪ||

ಕೊಟ್ಟೂರು ಬಸವಂಗೆ ಹತ್ತು ಟೆಂಗಿನಕಾಯಿ
ಮತ್ತೆ ಸೂರಡಿಕೆ ಬಿಳಿ ಎಲೆಯು
ಮೊದಲ ನೆನೆದೇನ ಗಜಮುಖದಯನ ||ಪ||

ಆಲೂರು ಬಸವಂಗೆ ಒಂದಾರು ಟೆಂಗಿನಕಾಯಿ
ಮತ್ತೆ ಸೂರಡಿಕೆ ಬಿಳಿ ಎಲೆಯು
ಮೊದಲ ನೆನೆದೇನೆ ಗಜಮುಖದಯನಾ ||ಪ||

ಉಜ್ಜಿನಿ ಸಿದ್ದಪ್ಪಂಗೆಂಟೆ ಟೆಂಗಿನಕಾಯಿ
ಮತ್ತೆ ಸೂರಡಿಕೆ ಬಿಳಿ ಎಲೆಯು
ಮೊದಲ ನೆನೆದೇನ ಗಜಮುಖದಯನ ||ಪ||

(ವಕ್ತೃ: ಚಂದ್ರಪ್ಪ, ಮಾಕನಡಕು, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ)

ಹೀಗೆ ಪ್ರಾರಂಭದಲ್ಲಿ ಗಣಪತಿಯನ್ನು ಕೋಲಾಟ ಪ್ರದರ್ಶನ ಮಾಡುವುದರ ಮೂಲಕ ಪ್ರಾರ್ಥಿಸುತ್ತಾರೆ. ಕೋಲು ಹುಯ್ಯುವಾಗ ಲಯ, ಧಾಟಿ, ಗತಿಗಳು ತಪ್ಪದ ಹಾಗೆ ಕೋಲಿನ ಮತಿಗಳನ್ನು ಅನುಗ್ರಹಿಸು ಎಂದು ಗಣನಾಯಕನನ್ನು ಬೇಡಿಕೊಳ್ಳುವುದು ಕಂಡುಬರುತ್ತದೆ. ಹಾಗೆಯೇ ಗಣೇಶನನ್ನು ಸ್ತುತಿಸುವುದರ ಜೊತೆಗೆ ಊರಿನ ಸುತ್ತಮುತ್ತಲ ದೇವರುಗಳನ್ನು ನೆನೆಯುತ್ತಾರೆ ಮತ್ತು ಸುತ್ತಮುತ್ತಲ ಊರುಗಳ ಬೇರೆ, ಬೇರೆ ದೇವರುಗಳನ್ನು ಸ್ತುತಿಸುವುದು ಕಾಣಬಹುದು. ಮತ್ತೆ ಇದೇ ಮಾದರಿಯ ಪ್ರಾರ್ಥನಗೀತೆಯು ಸೊಂಡೂರು ಪ್ರಾಂತದ ಸುತ್ತಮುತ್ತಲ ಹಳ್ಳಿಗಳಲ್ಲಿ ಪ್ರಚಲಿತದಲ್ಲಿದೆ.

ಮೊದಲ ನೆನೆದನು ಗಜಮುಖದಯ್ಯನಾ
ಸೊಬಗಿನ ಸೊಂಡೂರು ಗಣೇಶ ||ಪಲ್ಲವಿ||

ಹೇ ಗುಡ್ಡದೊಳಗಿರುವ ದೊಡ್ಡ ಕುಮಾರಸ್ವಾಮಿ
ಮತ್ತೆ ನೂರಡಿಕೆ ಬಿಳಿಯಾಲೆ ತಾಗೊಂಡು
ಕೋಲಿಗೆ ಕೊಡು ಸ್ವಾಮಿ ಮುತ್ತುಗಳನ್ನು ||ಸೈ||

ಹೇ ಊರೊಳಗಿರುವ ತಾಯಿ ಮಲಿಯಮ್ಮಗೆ
ಮತ್ತೆ ನೂರಡಿಕೆ ಬಿಳಿಯಾಲೇ ತಾಗೊಂಡು
ಕೋಲಿಗೆ ಕೊಡು ಸ್ವಾಮಿ ಮುತ್ತುಗಳನ್ನು ||ಸೈ||

ಹೇ ಊರೊಳಗಿರುವ ತಾಯಿ ಕಾಳಮ್ಮಗೆ
ಮತ್ತೇ ನೂರಡಿಕೆ ಬಿಳಿಯಾಲೇ ತಾಗೊಂಡು
ಕೋಲಿಗೆ ಕೊಡು ಸ್ವಾಮಿ ಮುತ್ತುಗಳನು ||ಸೈ||

ಹೇ ಗುಡ್ಡದೊಳಗಿರುವ ದೊಡ್ಡ ನರಸಿಂಹಸ್ವಾಮಿ
ಮತ್ತೇ ನೂರಡಿಕೆ ಬಿಳಿಯಾಲೆ ತಾಗೊಂಡು
ಕೋಲಿಗೆ ಕೊಡು ಸ್ವಾಮಿ ಮುತ್ತುಗಳನ್ನು ||ಸೈ||

(ವಕ್ತೃ: ಸಿದ್ಧಪ್ಪ, ಯಶವಂತನಗರ, ಸಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ)

ಈ ಕೋಲುಪದವನ್ನು ಬಳ್ಳಾರಿ ಜಿಲ್ಲೆಯ ಸೊಂಡೂರು ತಾಲೂಕಿನ ಯಶವಂತನಗರದಲ್ಲಿ ಸಂಗ್ರಹಿಸಿಕೊಳ್ಳಲಾಗಿದೆ. ಕೂಡ್ಲಿಗಿ ತಾಲೂಕಿನ ಮಾಕನಡಕು ಮತ್ತು ಸೂಲದಹಳ್ಳಿಗಳಲ್ಲಿ ಸಂಗ್ರಹಿಸಲಾಗಿದೆ.

"ಮೊದಲು ನೆನೆದೇನ ಗಜಮುಖದಯನಾ
ಕೊಡುಸ್ವಾಮಿ ಕೋಲಿಗೆ ಮತಿಗಳನಾ"

ಕೋಲುಪದಕ್ಕೂ ಮತ್ತು ಸೊಂಡೂರಿನ ಸುತ್ತಮುತ್ತಲು ಪ್ರಚಲಿತವಿರುವ ಯಶವಂತನಗರದ

ಮೊದಲು ನೆನೆದೇನ ಗಜಮುಖದಯ್ಯನಾ
ಸೊಬಗಿನ ಸೊಂಡೂರು ಗಣೇಶನ

ಎಂದು ಪ್ರಾರ್ಥಿಸುವ ಹಾಡಿಗೂ ತುಂಬಾ ಹೋಲಿಕೆ, ವ್ಯತ್ಯಾಸಗಳಿರುವುದು ಕಂಡು ಬರುತ್ತದೆ. ಎರಡು ಪದಗಳು ಪ್ರಾರ್ಥನಾಗೀತೆಗೆ ಸಂಬಂಧಿಸಿದ ಹಾಡುಗಳು. ಈ ಹಾಡುಗಳಲ್ಲಿ ವ್ಯತ್ಯಾಸಗಳೆಂದರೆ ಕೂಡ್ಲಿಗಿ ಪ್ರಾಂತದಲ್ಲಿ ಸಂಗ್ರಹಿಸಿದ ಹಾಡಿನಲ್ಲಿ "ಕೊಡುಸ್ವಾಮಿ ಕೋಲಿನ ಮತಿಗಳನಾ" ಎಂದಿದ್ದರೆ, ಸೊಂಡೂರು ಪ್ರಾಂತದ ಗೀತೆಯಲ್ಲಿ "ಕೋಲಿಗೆ ಕೊಡು ಸ್ವಾಮಿ ಮುತ್ತುಗಳನು" ಎಂದಿದೆ. ಹಾಗೆಯೇ ಸಂಗ್ರಹಿಸಿದ ಗೀತೆಯಲ್ಲಿ - "ಕೊಟ್ಟೂರು ಬಸವಂಗೆ ಹತ್ತೆ ಟೆಂಗಿನಕಾಯಿ, ಮತ್ತೆ ಸೂರಡಿಕೆ ಬಿಳಿ ಎಲೆಯು" ಎಂದು ಇರುವುದು ಕಂಡು ಬಂದರೆ ಸೊಂಡೂರು ಭಾಗದ ಹಾಡಿನಲ್ಲಿ,

ಹೇ ಗುಡ್ಡದೊಳಗಿರುವ ದೊಡ್ಡ ಕುಮಾರಸ್ವಾಮಿ
ಮತ್ತೇ ನೂರಡಿಕೆ ಬಿಳಿಯಾಲೇ ತಾಗೊಂಡು

ಎಂದು ಪ್ರಾದೇಶಿಕವಾಗಿ ಬದಲಾಗಿದೆ.

ಒಂದು ಗೀತೆಯಲ್ಲಿ ಕೋಲಿನ ಮತಿಗಳನ್ನು ಅನುಗ್ರಹಿಸಿ ಎಂದು ಪ್ರಾರ್ಥಿಸಿದರೆ ಮತ್ತೊಂದರಲ್ಲಿ ಕೋಲಿಗೆ ಮುತ್ತುಗಳನ್ನು ನೀಡೆಂದು ಪ್ರಾರ್ಥಿಸುತ್ತಿರುವುದನ್ನು ಕಾಣಬಹುದಾಗಿದೆ. ಹಾಗೆಯೇ ಕೂಡ್ಲಿಗಿ ಪ್ರಾಂತದ ಗೀತೆಯಲ್ಲಿ ದೇವರುಗಳನ್ನು ಸೂರಡಿಕೆ, ಬಿಳಿ ಎಲೆಯಿಂದ ಪೂಜಿಸುವ ವಿಧಾನವಾದರೆ, ಸೊಂಡೂರು ಪ್ರಾಂತದ ಗೀತೆಯಲ್ಲಿ ನೂರಡಿಕೆ ಬಿಳಿಯಾಲೆಯಿಂದ ಸ್ತುತಿಸುವುದಾಗಿದೆ.

ಕೂಡ್ಲಿಗಿ ಪರಿಸರದ ಪ್ರಾರ್ಥನಾ ಗೀತೆಯಲ್ಲಿ ಸುತ್ತಮುತ್ತಲ ಊರುಗಳಲ್ಲಿ ಪ್ರಸಿದ್ಧಿ ಪಡೆದ ದೇವರುಗಳನ್ನು ನೆನೆಯುತ್ತಾ, ಸ್ತುತಿಸುವುದು, ಪ್ರಾರ್ಥಿಸುವುದನ್ನು ಕಾಣಬಹುದು. ಆದರೆ ಸೊಂಡೂರು

ಪರಿಸರದ ಗೀತೆಯಲ್ಲಿ ಒಂದೇ ಊರಿನಲ್ಲಿರುವ ಸುತ್ತಮುತ್ತಲ ದೇವರುಗಳನ್ನು ನೆನೆಯುತ್ತಾರೆ. ಸೊಂಡೂರು ಮತ್ತು ಕೂಡ್ಲಿಗಿಯಲ್ಲಿ ಸಂಗ್ರಹಿಸಿದ ಈ ಎರಡು ಕೋಲುಪದಗಳನ್ನು ಇನ್ನೊಂದು ದಿಸೆಯಲ್ಲಿ ಚಿಂತನೆಗೊಳಪಡಿಸಿದಾಗ ತಳೆಯುವ ನಿಲುವೆ ಬದಲಾಗುತ್ತದೆ.

ಕೂಡ್ಲಿಗಿ ಪರಿಸರದ ಪ್ರಾರ್ಥನಾ ಕೋಲುಪದದಲ್ಲಿ ಗಣಪತಿಯ ಸಂಗಡ ಸ್ತುತಿಸಿಕೊಳ್ಳುವ ದೇವರುಗಳೆಲ್ಲಾ ಮೇಲ್ವರ್ಗದ ವೀರಶೈವದ ದೈವಗಳೆಂಬುದು ವಿಶೇಷ. ಕೊಟ್ಟೂರು ಬಸವೇಶ್ವರ, ಆಲೂರು ಬಸವೇಶ್ವರ ಮತ್ತು ಉಜ್ಜಿನಿಯ ಸಿದ್ದಪ್ಪ ಈ ದೇವರುಗಳು ಮೇಲ್ವರ್ಗ ದೇವರುಗಳೆಂದು ಬಿಂಬಿತವಾಗಿದೆ. ಆದರೆ ಸೊಂಡೂರು ಭಾಗದ ಪ್ರಾರ್ಥನಾ ಗೀತೆಯಲ್ಲಿ, ಕುಮಾರಸ್ವಾಮಿಯ ಜೊತೆ ಶಕ್ತಿದೇವತೆಗಳಾದ ಕಾಳಮ್ಮ ದುರ್ಗಮ್ಮ ಮತ್ತು ಮಲಿಯಮ್ಮ ಈ ದೈವಗಳು ತಳಸಮುದಾಯದ ದೈವಗಳೆಂದು ಸ್ತುತಿಸುವುದು ಇದೆ. ಈ ಎರಡು ಗೀತೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಕೆಳಜಾತಿ ಮತ್ತು ಮೇಲ್ಜಾತಿ ಅಥವಾ ಮೇಲ್ವರ್ಗ ಮತ್ತು ತಳಸಮುದಾಯಗಳ ನಡುವೆ ಮೌಖಿಕ ಸಾಹಿತ್ಯದಂಥ ಕೋಲುಪದಗಳಲ್ಲಿ ಸಾಂಸ್ಕೃತಿಕ ಸಂಘರ್ಷಗಳು ಅಥವಾ ತಿಕ್ಕಾಟಗಳು ನಡೆದಿವೆ ಎಂದು ತರ್ಕಿಸಬಹುದು. ಈ ರೀತಿಯ ಸಂಘರ್ಷಗಳು ಕೋಲುಪದಗಳಲ್ಲಿಯೂ ಸೇರಿದಂತೆ ಲಿಖಿತ ಮತ್ತು ಮೌಖಿಕ ಎಲ್ಲಾ ತರಹದ ಸಾಹಿತ್ಯದಲ್ಲಿ ಕಾಣಬಹುದು. ಉದಾಹರಣೆಗೆ ನಾಯಕನಹಟ್ಟಿಯ ತಿಪ್ಪೇಸ್ವಾಮಿ ತಳಸಮುದಾಯಕ್ಕೆ ಸೇರಿದ ಒಬ್ಬ ಸಾಧು, ಭಂಗೀಪುರುಷ. ಆತನ ನಿಜನಾಮ ಹಟ್ಟಿತಿಪ್ಪಯ್ಯ, ತಿಪ್ಪಣ್ಣ ಎಂಬುದಾಗಿ ಈಗಲೂ ಈ ಪರಿಸರದ ಜನಪದ ಸಾಹಿತ್ಯದಲ್ಲಿ ಮಾಹಿತಿ ಸಿಗುತ್ತದೆ. ಕೋಲುಪದಗಳಲ್ಲಿಯೇ ತಿಪ್ಪೇಸ್ವಾಮಿ ನಿಜನಾಮದ ಕುರಿತಾಗಿ ಸುಳುಹುಗಳು - ಕುರುಹುಗಳು ದೊರಕುತ್ತವೆ.

### ಕೋಲುಪದ

೧. ಹೋಗಿ ನೋಡಾನ ಬನ್ನಿರೊ ತಿಪ್ಪಯ್ಯ
ಸ್ವಾಮಿ ತೇರೆ ನೋಡಾನ ಬನ್ನಿರೋ ||ಪ||
(ವಕ್ತೃ: ಓಬಯ್ಯ, ರಾಮದುರ್ಗ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

೨. ಕೋಲು ಹೊಯ್ಯಾಕೆ ನಾವು ಬಂದೀವಿ
ಅಪ್ಪಣೆ ಕೊಡೀರಿ ನಮ್ಮಗೆ ||ಪ||

ದೇವರಹಟ್ಟಿಂಬ ಹುಡುಗರು ಹಟ್ಟಿ
ತಿಪ್ಪಯ್ಯನ ಜಾತ್ರೆಗೆ ಬಂದೆವು ||೨||
(ವಕ್ತೃ: ರಾಮಣ್ಣ, ಬಂಗಾರದೇವರಹಟ್ಟಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಎರಡೂ ಗೀತೆಗಳನ್ನು ಗಮನಿಸಿದಾಗ ತಿಪ್ಪೇಸ್ವಾಮಿಯ ನಿಜವಾದ ಹೆಸರು ತಿಪ್ಪಯ್ಯ, ತಿಪ್ಪಣ್ಣ ಎಂಬುದಾಗಿ ಮನವರಿಕೆಯಾಗುತ್ತದೆ. ಆದರೆ ಇತ್ತೀಚೆಗೆ ಈ ಸಾಧುವಿನ ಹೆಸರನ್ನು ತಿಪ್ಪೇರುದ್ರೇಶ್ವರ, ರುದ್ರೇಶ ಎಂಬುದಾಗಿ ಮೇಲ್ವರ್ಗದವರು ಅದರಲ್ಲೂ ಲಿಂಗಾಯತ

ಸಮುದಾಯದವರು ಈತನನನ್ನು ಶೈವೀಕರಣಗೊಳಿಸಿರುವುದನ್ನು ನೋಡಿದರೆ ತಳಸಮುದಾಯ ಮತ್ತು ಮೇಲ್ವರ್ಗದ ನಡುವೆ ಅನಾದಿಕಾಲದಿಂದಲೂ ಈ ರೀತಿಯ ಸಾಂಸ್ಕೃತಿಕ ಸಂಘರ್ಷಗಳು, ಗುದ್ದಾಟಗಳು ನಡೆಯುತ್ತಾ ಬಂದಿವೆ ಎಂಬುದಕ್ಕೆ ಇದೊಂದು ಸಾಕ್ಷಿಯೆನಿಸಿದೆ.

ಗಣಪತಿಯನ್ನು ಪ್ರಾರ್ಥನಾ ಗೀತೆಗಳ ಮುಖಾಂತರ ಸ್ತುತಿಸುವುದು ಕೋಲಾಟದಲ್ಲಿ ಮಾತ್ರ ಅಲ್ಲದೆ 'ಹಂತಿ'ಯನ್ನು ಹೊಡೆಯುವಾಗಲೂ ಪ್ರಾರ್ಥಿಸುವುದು ಕಾಣಬಹುದಾಗಿದೆ. ವಿದ್ವಾಂಸರಾದ ಎಸ್.ಎಸ್. ಅಂಗಡಿ ಅವರು ಹಂತಿಪದವನ್ನು ತಮ್ಮ ಕೃತಿಯಲ್ಲಿ ಹೀಗೆ ಪ್ರಸ್ತಾಪಿಸಿದ್ದಾರೆ.

"ಹಂತಿ ಹೊಡೆಯುವಾಗ ಮೊದಲು ಸಕಲ ಕಾರ್ಯಗಳನ್ನು ನಿರ್ವಿಘ್ನವಾಗಿ ನಡೆಸಿಕೊಡುವಂತೆ ಗಣಪತಿಯನ್ನು ಪ್ರಾರ್ಥಿಸುತ್ತಾರೆ. ಹಂತಿ ಪ್ರಾರಂಭವಾಗುವುದೇ ಗಣಪತಿ ಸ್ತುತಿಯಿಂದ" ಎಂದಿದ್ದಾರೆ ಹಾಗೂ ಹಂತಿ ಪದವನ್ನು ಉದಾಹರಿಸಿ ತಿಳಿಸಿದ್ದಾರೆ.

ಹಾಡಿಗೆ ಮೊದಲ ಯಾರನ್ನ ನೆನಿಯಲೊ
ಮಾಡದಾಗಿರುವ ಗರುಡನ್ನ । ಗಣಪತಿರಾಯ
ಹಾಡಿಗೆ ಮೊದಲ ನೆನಿದೇನೊ ॥

(ಡಾ. ಎಸ್.ಎಸ್. ಅಂಗಡಿ; ೨೦೦೮; ಪುಟ ೨೩೩)

ಹೀಗೆ ಯಾವುದೇ ಜನಪದ ಕಾರ್ಯವಿರಲಿ ಹಬ್ಬ-ಹರಿದಿನ, ಜಾತ್ರೆ-ಉತ್ಸವಗಳಾಗಲಿ ಗಣಪತಿಯ ಪ್ರಾರ್ಥನೆಯೊಂದಿಗೆ ಆರಂಭಿಸುವುದು ವಾಡಿಕೆಯಾಗಿದೆ. ಹಾಗೆಯೇ ಗಣೇಶನನ್ನು ಸ್ತುತಿಸುವುದರ ಜೊತೆಗೆ ಪಾರ್ವತಿ, ಈಶ್ವರ, ಕೃಷ್ಣ, ಪ್ರಾದೇಶಿಕತೆಯ ಪ್ರಸಿದ್ಧಿ ಪಡೆದಂಥ ಸಾಂಸ್ಕೃತಿಕ ನಾಯಕ - ನಾಯಕಿಯರನ್ನು ಸ್ತುತಿಸುವುದು ಮತ್ತು ಶಕ್ತಿದೇವತೆಗಳನ್ನು ಆರಾಧಿಸುವುದು ಹಾಗೂ ಊರಿನ ಹಿರಿಯರನ್ನು ಪ್ರಾರ್ಥನಾ ಗೀತೆಗಳಲ್ಲಿ ನೆನೆಸಿಕೊಳ್ಳುವುದು ಕಾಣಸಿಗುತ್ತದೆ.

"ಕೋಲಾಟದ ಆರಂಭದಲ್ಲಿ ಗಣಪತಿ ಅಥವಾ ಇತರ ದೈವಗಳನ್ನು ಸ್ತುತಿಸುವ, ಆರಾಧಿಸುವ ಹಾಡನ್ನು ಗಣಸ್ತುತಿ" ಎಂದು ಕರೆಯುತ್ತಾರೆ.

ಕೋಲು ಹೊಯ್ಯುಕೆ ನಾವು ಬಂದೀವಿ
ಅಪ್ಪಣೆ ಕೊಡೀರಿ ನಮ್ಮಗೆ ॥ಪ॥

ಹಾ ನೀವು ದೇವರು ಹಿರಿಯರು ಕುಂತೀರಿ
ಶರಣವ ಮಾಡುವೆ ನಿಮ್ಮಗೆ ॥

(ವಕ್ತೃ: ಸಣ್ಣಪಾಪಯ್ಯ, ಕಂಪಳದೇವರಹಟ್ಟಿ, ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಕೋಲಾಟ ತಂಡದವರು ಬೇರೆ ಬೇರೆ ಊರುಗಳಿಗೆ ಪ್ರದರ್ಶನ ನೀಡಲಿಕ್ಕೆ ಹೋದಾಗ ಆಯಾ ಊರಿನ ದೇವರುಗಳನ್ನು ಸ್ತುತಿಸುವುದರ ಜೊತೆಗೆ ಯಾವ ಊರಿನಲ್ಲಿ ಪ್ರದರ್ಶನ ನೀಡುತ್ತಾರೋ ಆ ಊರಿನ ಗೊಂಚಿಕಾರರು, ಗೌಡರು ಎನಿಸಿದ ಹಿರಿಯರನ್ನು ನೆನೆಯುತ್ತಾರೆ ಮತ್ತು ಕೋಲು ಹುಯ್ಯುವುದಕ್ಕೆ ಅವಕಾಶ ಮಾಡಿಕೊಡಬೇಕೆಂದು ಪ್ರಾರ್ಥನಾ ಗೀತೆಯಲ್ಲಿ

ಅನುಮತಿಯನ್ನು ಕೇಳುತ್ತಾರೆ. ಇದು ಕೋಲು ಕಲಿಸುವ ಕೋಲು ಮೇಳಗಾರರ ಬುದ್ಧಿವಂತಿಕೆಗೆ ಹಿಡಿದ ಕನ್ನಡಿಯಾಗಿದೆ. ಕೋಲುಮೇಳಗಾರರ ನೀತಿ, ನಯ - ವಿನಯಗಳು, ಜನಪದರ ಮೌಲ್ಯಾದರ್ಶಗಳನ್ನು ಈ ಕೋಲುಪದವು ಎತ್ತಿತೋರಿಸುತ್ತದೆ.

ಹಂಪಿಯ ಜಾತ್ರೆಯಲ್ಲಿ ಬೇರೆ ಬೇರೆ ಕಡೆಯಿಂದ ಕೋಲಾಟ ತಂಡಗಳು ಬಂದು ಪ್ರದರ್ಶನ ಮಾಡುತ್ತಾರೆ. ಕೋಲು ಹುಯ್ಯುವ ಮೊದಲಿಗೆ ಹಂಪಿಯ ವಿರೂಪಾಕ್ಷನನ್ನು ಸ್ತುತಿಸುವುದು ಕಂಡು ಬರುತ್ತದೆ. ಜೊತೆಗೆ ಹಂಪಿಯ ಸುತ್ತಮುತ್ತಲ ಶಕ್ತಿದೇವತೆಗಳನ್ನು, ರಾಮ, ಕೃಷ್ಣಾದಿಗಳನ್ನು ಸ್ತುತಿಸುವುದು ಕಾಣಬಹುದು.

ಶರಣೆನ್ನಿರಣ್ಣಯ್ಯ ಶರಣೆನ್ನಿರೊ
ಹಂಪಿ ವಿರೂಪಾಕ್ಷಗೆ ಶರಣೆನ್ನಿರೊ
ತಾಯಿ ದುರುಗಮ್ಮಗೆ ಶರಣೆನ್ನಿರೊ
ಕೋದಂಡರಾಮಗೆ ಶರಣೆನ್ನಿರೊ
ಪಟ್ಟಣದ ಎಲ್ಲಮ್ಮಗೆ ಶರಣೆನ್ನಿರೊ

(ವಕ್ತೃ: ಗುರುವಯ್ಯ, ಕಮಲಾಪುರ, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ)

ಹೀಗೆ ಪ್ರಾರ್ಥನಾ ಗೀತೆಯಲ್ಲಿ ಹಂಪಿ ವಿರೂಪಾಕ್ಷನಿಂದ ಮೊದಲುಗೊಂಡು ದುರುಗಮ್ಮ, ಗಾಳೆಮ್ಮ, ಎಲ್ಲಮ್ಮ ಮತ್ತು ಕೋದಂಡರಾಮನನ್ನು ಪ್ರಾರ್ಥಿಸುತ್ತಾ ಕೋಲು ಪ್ರದರ್ಶನ ಮಾಡುವುದು ಕಂಡುಬರುತ್ತದೆ. ಈ ರೀತಿಯ ಪ್ರಾರ್ಥನಾ ಗೀತೆಗಳಿಗೆ ಕೊನೆ ಎಂಬುದೇ ಇರುವುದಿಲ್ಲ. ನೆನಪಿಗೆ ಬಂದ ದೇವರುಗಳಿಗೆಲ್ಲಾ ಶರಣು ಮಾಡುತ್ತಾ ಸ್ತುತಿಸುವುದು ಕಂಡುಬಂದಿದೆ. ಇದು ಕೋಲುಮೇಳಗಾರರ ಜಾಣ್ಮೆ ಮತ್ತು ಸ್ಮರಣಾಶಕ್ತಿಯನ್ನು ತೋರಿಸುತ್ತದೆ.

ಚಳ್ಳಕೆರೆ ತಾಲೂಕಿನ ಪ್ರಾಂತದ ನಾಯಕನಹಟ್ಟಿ, ಬೋಸೆದೇವರಹಟ್ಟಿ, ಚನ್ನಬಸಯ್ಯನಹಟ್ಟಿ ಮತ್ತು ರಾಮದುರ್ಗ ಅಥವಾ ದೊಣಮಂಡಲಹಟ್ಟಿ ಮುಂತಾದ ಗ್ರಾಮಗಳಲ್ಲಿ 'ನಾಯಕನಹಟ್ಟಿಯ ತಿಪ್ಪೇಸ್ವಾಮಿ' ಎನ್ನುವ ಸಾಂಸ್ಕೃತಿಕ ನಾಯಕನ ಕುರಿತಾಗಿ ಕೋಲುಪದಗಳಲ್ಲಿ ಹೆಚ್ಚು ಪ್ರಾರ್ಥನಾ ಗೀತೆಗಳು ಸಿಗುತ್ತವೆ. ತಿಪ್ಪೇಸ್ವಾಮಿಯ ಪವಾಡಗಳ ಕುರಿತು ಒಂದೊಂದು ಪ್ರಾಂತದಲ್ಲಿ ಒಂದೊಂದು ತೆರನಾಗಿ ಗುಣಗಾನ ಮಾಡುತ್ತಾ ಸ್ತುತಿಸುತ್ತಿರುವುದು ಕೋಲುಪದಗಳಲ್ಲಿ ಕಾಣುತ್ತೇವೆ. ನಾಯಕನಹಟ್ಟಿಯ ಸುತ್ತಮುತ್ತಲ ಹಳ್ಳಿಗಳಲ್ಲಿ ಹೆಚ್ಚು ಪ್ರಚಲಿತವಿರುವ ಒಂದು ಪ್ರಾರ್ಥನಾ ಗೀತೆಯನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

ಕೋಲು ಹೊಯ್ಯಾಕೆ ನಾವು ಬಂದೀವಿ
ಅಪ್ಪಣೆ ಕೊಡೀರಿ ನಮ್ಮಗೆ ||ಪ||

ರಾಮದುರ್ಗದೆಂಬ ಹುಡುಗರು ಹಟ್ಟಿ
ತಿಪ್ಪಯ್ಯನ ಜಾತ್ರೆಗೆ ಬಂದೇವು ||೨||

ಸ್ವಾಮಿ ಇದರಲ್ಲಿ ಏನಾದರೂ ತಪ್ಪುಗಳು
ಬಂದರೆ ನೀವೆ ಪಾಲಿಸಬೇಕು ನಮ್ಮಗೆ ||೨||

(ವಕ್ತೃ: ಪೂಜಾರಿ ಓಬಯ್ಯ, ರಾಮದುರ್ಗ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಹಾಡಿನಲ್ಲಿ ನಾಯಕನಹಟ್ಟಿಯ ತಿಪ್ಪೇಸ್ವಾಮಿಯನ್ನು ಸ್ತುತಿಸಿರುವುದು ಕಾಣುತ್ತದೆ. ರಾಮದುರ್ಗದ ಕೋಲಾಟ ತಂಡದವರು ತಿಪ್ಪೇಸ್ವಾಮಿಯ ಜಾತ್ರೆಯಲ್ಲಿ ಅಥವಾ ಬಿಡುವಿನ ಸಮಯದಲ್ಲಿ ಕೋಲಾಟ ಪ್ರದರ್ಶನ ಮಾಡುವ ಪೂರ್ವದಲ್ಲಿ ದೇವರುಗಳನ್ನು ಸ್ತುತಿಸುತ್ತಾ ಪ್ರಾರ್ಥಿಸುವುದು ವಾಡಿಕೆ. ಅದರಂತೆಯೇ ತಿಪ್ಪೇಸ್ವಾಮಿಯನ್ನು ಪ್ರಾರ್ಥಿಸುತ್ತಾ, ಕೋಲು ಹುಯ್ಯುವುದರಲ್ಲಿ ಏನಾದರೂ ತಪ್ಪು - ನೆಪ್ಪುಗಳು ಕಂಡು ಬಂದರೆ ಅದನ್ನು ಸರಿಪಡಿಸುವ, ತಿದ್ದುವ ಜವಾಬ್ದಾರಿಯನ್ನು ದೇವರ ಮೇಲೆ ಹಾಕುತ್ತಾರೆ. ಅಲ್ಲದೆ ಒಂದು ವೇಳೆ ಕೋಲು ಪ್ರದರ್ಶನದಲ್ಲಿ ಕೋಲುಕಡ್ಡಿಗಳು ಮುರಿಯಬಾರದು ಎಂಬ ಉದ್ದೇಶದಿಂದ ಪ್ರಾರ್ಥಿಸುವುದಿದೆ. ತಿಪ್ಪೇಸ್ವಾಮಿಯನ್ನು ಕುರಿತು ಈ ಹಾಡು ರಾಮದುರ್ಗದಲ್ಲಿ ಮಾತ್ರವಷ್ಟೇ ಹಾಡಲ್ಪಡುವುದಿಲ್ಲ. ನಾಯಕನಹಟ್ಟಿಯ ಸುತ್ತಮುತ್ತಲಿರುವ ಕೋಲಮ್ಮನಹಳ್ಳಿ, ದೇವರಹಳ್ಳಿ, ಎತ್ತಿನಹಟ್ಟಿ ಮುಂತಾದ ಹಳ್ಳಿಗಳಲೆಲ್ಲಾ ಕೋಲಾಟ ಪ್ರದರ್ಶನ ತಂಡಗಳು ಈ ಹಾಡನ್ನು ಬಳಸುವುದು ಕಂಡುಬಂದಿದೆ.

ಉದಾಹರಣೆಗೆ ಬೋಸೆದೇವರಹಟ್ಟಿಯ 'ವಾಲ್ಮೀಕಿ ಕೋಲಾಟ ಸಂಘದ' ತಂಡದವರು ಈ ಹಾಡಿನಲ್ಲಿ ಇರುವ ಊರಿನ ಹೆಸರನ್ನು ಹೀಗೆ ಬದಲಾಯಿಸಿ ಹಾಡುತ್ತಾ - ಕೋಲಾಟ ಪ್ರದರ್ಶನ ಮಾಡುತ್ತಾರೆ. ಬದಲಾಯಿಸಿಕೊಂಡಿರುವ ಹಾಡಿನಲ್ಲಿ ತಮ್ಮ ತಮ್ಮ ಊರಿನ ಹೆಸರನ್ನಷ್ಟೇ ಸೇರಿಸಿಕೊಳ್ಳುತ್ತಾರೆ.

**ಹಾಡು**

ದೇವರಹಟ್ಟೆಂಬ ಹುಡುಗರು ಹಟ್ಟಿ
ತಿಪ್ಪಯ್ಯನ ಜಾತ್ರೆಗೆ ಬಂದೇವು ||೨||

ಹೀಗೆ ನಾಯಕನಹಟ್ಟಿಯ ಪರಿಸರದಲ್ಲಿ ಯಾವ ಯಾವ ಊರಿನ ಕೋಲಾಟ ತಂಡದವರು ಈ ಪ್ರಾರ್ಥನಾ ಗೀತೆಯನ್ನು ಹಾಡುತ್ತಾರೋ ಆ ತಂಡಗಳೆಲ್ಲಾ ತಮ್ಮ ಊರಿನ ಹೆಸರನ್ನು ಸೇರಿಸಿಕೊಳ್ಳುತ್ತಾರೆ ಹಾಗೂ ಪ್ರದರ್ಶನವನ್ನು ನೀಡುತ್ತಾರೆ. ಹಾಗೆಯೇ ಮೊಳಕಾಲ್ಮೂರು ತಾಲೂಕಿನ ಕಂಪಳದೇವರಹಟ್ಟಿ, ಸೂರಮ್ಮನಹಳ್ಳಿ, ಚಿನ್ನೋಬನಹಳ್ಳಿ ಮುಂತಾದ ಹಳ್ಳಿಗಳಲ್ಲಿ ಕೋಲು ಹುಯ್ಯುವ ಪ್ರಾರಂಭದ ಪ್ರದರ್ಶನಕ್ಕೆ ಪ್ರಾರ್ಥನಾ ಗೀತೆಗೆ ಕೋಲು ಪ್ರದರ್ಶನ ಮಾಡುವುದು ಸಂಪ್ರದಾಯವಾಗಿ ಬೆಳೆದು ಬಂದಿದೆ.

ಕಂಪಳದೇವರಹಟ್ಟಿ ಜಾತ್ರೆಗೆ ಸುತ್ತಮುತ್ತಲ ಹಳ್ಳಿಗಳಿಂದ ಕೋಲಾಟ ತಂಡಗಳು ಬಂದು ಸೇರುತ್ತವೆ. ಕೋಲು ಹುಯ್ಯುವ ಕಾಲಕ್ಕೆ ಮ್ಯಾಸಬೇಡರ ಸಾಂಸ್ಕೃತಿಕ ನಾಯಕರಾದ ಸೂರನಾಯಕ, ಪಾಪನಾಯಕರನ್ನು ಸ್ತುತಿಸುತ್ತಾ ಕೋಲು ಹುಯ್ಯುವುದನ್ನು ಕಾಣಬಹುದು. ಈ ಹಾಡಿನಲ್ಲಿ ಇವರನ್ನು ಸ್ತುತಿಸುತ್ತಿರುವುದನ್ನು ನೋಡಬಹುದು.

ಕೋಲು ಕೋಲ ಕೋಲು ಕೋಲನ್ನ
ಸೂರಯ್ಯ ಪಾಪ ಮೇಲೆ ಮುತ್ತಿ ತಾನಿ ತಂದನ್ನ ||೨||

(ವಕ್ತೃ: ಮಲ್ಲಯ್ಯ, ಕಂಪಳದೇವರಹಟ್ಟಿ, ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಮೊಳಕಾಲ್ಮೂರು ತಾಲೂಕಿನಿಂದ ಪಶ್ಚಿಮಾಭಿಮುಖವಾಗಿ ಸುಮಾರು ಹದಿನಾಲ್ಕರಿಂದ ಹದಿನೈದು ಕಿ.ಮೀ. ದೂರದಲ್ಲಿ ಕಂಪಳದೇವರಹಟ್ಟಿ ಎನ್ನುವ ಒಂದು ಸಾಂಸ್ಕೃತಿಕ ಕೇಂದ್ರವಿದೆ. ಇದು ಮ್ಯಾಸಬೇಡರ ಮೂಲ ನೆಲೆ ಎಂದು ಗುರುತಿಸಿಕೊಂಡಿದ್ದು ಇಂದಿಗೂ ಈ ಹಟ್ಟಿಯಲ್ಲಿ ತಮ್ಮ ಮೂಲ ಸಂಸ್ಕೃತಿಯನ್ನು ಉಳಿಸಿಕೊಂಡಿದೆ. ಮ್ಯಾಸಬೇಡರ ಪ್ರಧಾನ ಕಟ್ಟಿಮನೆ ಇಲ್ಲಿರುವುದರಿಂದ ಕಂಪಳದೇವರಹಟ್ಟಿ ಎಂಬ ಹೆಸರು ಬಂದಿದೆ.

ಈ ಹಟ್ಟಿಯಲ್ಲಿ ಸೂರನಾಯಕ ಮತ್ತು ಪಾಪನಾಯಕರ ಜಾತ್ರೆ ನಡೆಯುತ್ತದೆ. ಜಾತ್ರೆಗೆ ಕಂಪಳದೇವರಹಟ್ಟಿಯ ಅಕ್ಕಪಕ್ಕದ ಹಳ್ಳಿಗಳಾದ ಕುಮುತಿ, ಸೂರಮ್ಮನಹಳ್ಳಿ, ವಲಸೆ, ಚಿರತುಗುಂಡು, ಚಿನ್ನೋಬನಹಳ್ಳಿ, ಓದ್ನೋಬಯ್ಯನಹಟ್ಟಿ, ಚೌಟಯ್ಯಹಟ್ಟಿ, ಕೆರ್‍ನಾರಹಟ್ಟಿ, ನೇತ್ರನಹಳ್ಳಿ ಮತ್ತು ಹಿರೇಹಳ್ಳಿ ಕೋನಸಾಗರ ಇನ್ನೂ ಮುಂತಾದ ಊರುಗಳಿಂದ ಕೋಲಾಟ ತಂಡಗಳು ಭಾಗವಹಿಸುತ್ತವೆ. ಜಾತ್ರೆಗೆ ಬರುವ ಎಲ್ಲಾ ತಂಡಗಳು ಮ್ಯಾಸಬೇಡರ ಸಮುದಾಯಕ್ಕೆ ಸೇರಿದವೇ ಆಗಿರುತ್ತವೆ. ಈ ತಂಡಗಳು ಕೋಲಾಟ ಪ್ರದರ್ಶನ ಮಾಡುವ ಆರಂಭದಲ್ಲಿ ಮ್ಯಾಸಬೇಡ ಬುಡಕಟ್ಟಿಗೆ ಸೇರಿದ ಸಾಂಸ್ಕೃತಿಕ ನಾಯಕ -ನಾಯಕಿಯರ ಗುಣಗಾನ ಮಾಡುವುದು ಮತ್ತು ಅವರ ಸಾಹಸ ಪರಾಕ್ರಮಗಳನ್ನು ಪ್ರಾರ್ಥನಾ ಗೀತೆಯಲ್ಲಿ ಸ್ತುತಿಸುವುದನ್ನು ನೋಡಬಹುದುದಾಗಿದೆ. ಚಳ್ಳಕೆರೆ ಮತ್ತು ಮೊಳಕಾಲ್ಮೂರು ಪ್ರಾಂತಗಳಲ್ಲಿ ಹೆಚ್ಚಾಗಿ ಮ್ಯಾಸನಾಯಕರೇ ವಾಸವಾಗಿರುವುದರಿಂದ ಇವರು ಕೋಲು ಹುಯ್ಯುವ ಆರಂಭದ ಗೀತೆಗಳಲ್ಲಿ ಸಾಂಸ್ಕೃತಿಕ ವೀರರನ್ನು ಆರಾಧಿಸುವುದು, ಪ್ರಾರ್ಥಿಸುವುದನ್ನು ಕಾಣಬಹುದಾಗಿದೆ.

### ೩.೫.೨. ಶೃಂಗಾರ ಅಥವಾ ಪ್ರಣಯ ಸಂಬಂಧಿ ಕೋಲುಪದಗಳು

ಈ ಕೋಲುಪದಗಳನ್ನು ಪ್ರೇಮಗೀತೆಗಳೆಂದು ಕರೆಯುವ ವಾಡಿಕೆ ಇದೆ. ಶೃಂಗಾರ ಸಂಬಂಧಿ ಹಾಡುಗಳು ಜಾನಪದದ ಎಲ್ಲಾ ಪ್ರಕಾರಗಳಲ್ಲೂ ದೊರಕುತ್ತವೆ. ಆದರೆ ಕೋಲುಪದಗಳಲ್ಲಿ ಪ್ರಣಯ ಅಥವಾ ಪ್ರೇಮಗೀತೆಗಳು ತುಂಬಾ ವಿಪುಲವಾಗಿ ಸಿಗುತ್ತವೆ. ಈ ಗೀತೆಗಳಲ್ಲಿ ಶೃಂಗಾರ ಎಂದರೆ ಗಂಡು-ಹೆಣ್ಣಿನ ಪರಸ್ಪರ ಆಲಿಂಗನವಾಗುವುದು ಅಥವಾ ಇಬ್ಬರೂ ಸಮದುಃಖಿಗಳಾಗಿ ಪರಸ್ಪರರಿಗಾಗಿ ದುಃಖ ಉಮ್ಮಳಿಸಿ ಬರುವ ಹಾಗೆ ಚಿಂತಿಸುತ್ತಾ, ಯೋಚಿಸುತ್ತಾ, ಕಾಲ ಕಳೆಯುವಂಥ ನೈಜ ಚಿತ್ರಣವು ಕೋಲುಪದಗಳಲ್ಲಿ ಕಾಣಸಿಗುತ್ತದೆ. ಕೋಲುಪದಗಳಲ್ಲಿ ಪ್ರಣಯ-ವಿರಹ ಸಂಬಂಧಿ ಹಾಡುಗಳು ಕರ್ನಾಟಕ-ಆಂಧ್ರಪ್ರದೇಶದ ಒಳಗೂ ಹೇಗೆ ಸಿಗುತ್ತವೆಯೋ ಹಾಗೆಯೇ ಕರ್ನಾಟಕ-ಆಂಧ್ರಗಡಿ ಪ್ರಾಂತಗಳಲ್ಲಿ ತುಂಬಾ ವಿಪುಲವಾಗಿ ದೊರಕುತ್ತವೆ. ಕರ್ನಾಟಕ ಮತ್ತು ಆಂಧ್ರದಾದ್ಯಂತ ಕೋಲುಪದಗಳಲ್ಲಿ ಹೆಚ್ಚಾಗಿ ಶೃಂಗಾರ ಪ್ರಣಯ ಸಂಬಂಧಿ ಹಾಡುಗಳೇ ಸಿಗುತ್ತವೆಂದರೆ ಅದು ಶೃಂಗಾರ ಕೋಲುಪದ ಗೀತೆಗಳ ಪ್ರಸಿದ್ಧಿಗೆ ಸಾಕ್ಷಿಯೆನಿಸಿದೆ.

ಕೋಲುಪದಗಳಲ್ಲಿ ಪ್ರಣಯ ಅಥವಾ ಪ್ರೇಮ ಸಂಬಂಧಿಯ ವಸ್ತುವೈವಿಧ್ಯತೆಯ ಹಾಡುಗಳು ಅಪಾರ ಹಾಗೂ ಹಲವು ರೀತಿಯ ವಿಶಿಷ್ಟತೆಗಳನ್ನು ಒಳಗೊಂಡಿವೆ. "ಬಳ್ಳಾರಿ ಭಾವೈಕ್ಯದ ಹೆಣ್ಣೆ, ಕಲ್ಲು ಬಾವಿ ನೀರು ತರುವೆ, ನಿಲ್ಲೇ ನಿಲ್ಲೇ ರಮಣಿ ನಿನ್ನ ಗಲ್ಲವು ಬಿಡಲೊಲ್ಲೆ" ಎಂದು ಹೆಣ್ಣಿನ ಪ್ರೀತಿಗಾಗಿ ಹಂಬಲಿಸುವ ಪ್ರೇಮಿಯಿಂದ ಮೊದಲು ಮಾಡಿ, "ಹೌದಲ್ಲೆ ಕೆಂಪಾದ ಹೆಣ್ಣೆ, ನಿನ ಮ್ಯಾಲೆ ಇಟ್ಟಿದ್ದೆ ಬಹುದಿನ ಕಣ್ಣೆ" ಎಂದು ತನ್ನ ಪ್ರೇಮಿಗಾಗಿ ಕಾಯುತ್ತಾ ಕುಳಿತಿರುವ ಪ್ರೇಮಿ ತನ್ನ ಗೆಳತಿಯನ್ನು ನೆನಪಿಸಿಕೊಳ್ಳುವುದು. ಯುವಕ- ಯುವತಿಗಾಗಿ ಹೊಂಚು ಹಾಕುವುದು ಇತ್ಯಾದಿ ಪ್ರೇಮ-ಪರಿತಾಪಗಳು, ಗಂಡನನ್ನು ಬಿಟ್ಟ ಹೆಣ್ಣು ತನ್ನ ಗೆಳೆಯನನ್ನು ಕೂಡುವುದು, ತನ್ನ ಮಕ್ಕಳು-ಗಂಡನನ್ನು ನಿರ್ಲಕ್ಷಿಸಿ ಪರಪುರುಷನ ಸಂಗ ಸೇರುವ ಹೆಣ್ಣುಗಳು ಹೀಗೆ ಜೀವನದಲ್ಲಿ ನಡೆಯುವ ನೈಜ ಸ್ಥಿತಿಗತಿಗಳನ್ನು ಬಿತ್ತರಿಸುವ ಸಾಹಿತ್ಯ ಕೋಲುಪದಗಳಲ್ಲಿ ಕಣ್ಣಿಗೆ ಕಟ್ಟುವಂತೆ ಒಡಮೂಡುವುದಿದೆ. ಪ್ರೇಮಿಸಿದವರೊಡನೆ ಹಸೆಮಣೆ ಏರಿದಾಗಲೇ ಪ್ರೇಮಿಗಳು ಬದುಕಿದು ಸಾರ್ಥಕ ಎಂದುಕೊಳ್ಳುತ್ತಾರೆ. ಇದು ಎಲ್ಲರಿಗೂ ಲಭಿಸದು. ಹೀಗೆ ನೈಜ ಜೀವನ ಚಿತ್ರಣವು ಕೋಲುಪದಗಳಲ್ಲಿ ಕಾಣಸಿಗುತ್ತವೆ.

"ಬಾಯಾರಿ ಬಂದೆ ಕುಡಿಯುವುದಕ್ಕೆ ನೀರು ಕೊಡು" ಎಂದು ಯುವಕ(ಹುಡುಗ)ನೊಬ್ಬ ಯುವತಿಯನ್ನು ಕೇಳಿದಾಗ ಅದಕ್ಕೆ ಪ್ರತಿಯಾಗಿ ಅವಳು "ಹೋಗಯ್ಯ ಹರಿವೋ ಜಲಧಿಗೆ' ಎನ್ನುತ್ತಾಳೆ. ಕುಡಿಯುವುದಕ್ಕೆ ನೀರು ಕೊಡು ಎಂದು ಕೇಳುವುದು ಅಥವಾ ಬಾಳೆಗಿಡದ ಕೆಳಗೆ ಅಥವಾ ಮಾವಿನ ಮರದ ಕೆಳಗೆ ಕುಳಿತುಕೊಳ್ಳಲು ಅವಕಾಶ ಕೇಳುವುದು. ಪ್ರೇಮಯಾಚನೆ, ನೀರು ಕುಡಿಯುವುದು ಅಥವಾ ಮರದ ನೆರಳಿನಲ್ಲಿ ವಿಶ್ರಮಿಸುವುದು ಮಿಲನದ ಸಂಕೇತ ಹಾಗೇ ಬಾವಿಯ ನೀರು ವೇಶ್ಯೆಗೂ ಅನ್ವಯವಾಗುವ ಸಂಕೇತಗಳು ಹಲವು ಪ್ರೇಮಗೀತೆಗಳಲ್ಲಿ ಗುಡುಗು, ಮೋಡ, ಮಿಂಚುಗಳ ಆವರಣ ಕಂಡು ಬರುತ್ತದೆ(ಚಂದ್ರಶೇಖರ ಕಂಬಾರ, ೧೯೭೩, ಪುಟ ೯೨) ಎಂದು ಚಂದ್ರಶೇಖರ ಕಂಬಾರ ಅಭಿಪ್ರಾಯಿಸಿರುವುದು ಸೂಕ್ತವಾಗಿದೆ. ಇವರ ಅಭಿಪ್ರಾಯದಂತೆ ಬಾವಿಯ ನೀರು ಅವಿವಾಹಿತಳಿಗೆ ನೀಡಿರುವ ಹೋಲಿಕೆ - ಉಪಮೆ ಇವಕ್ಕೆ ಸಂಬಂಧಿಸಿದಂತೆ ಒಂದು ಕೋಲುಪದ ಚಿತ್ರದುರ್ಗ ಮತ್ತು ಬಳ್ಳಾರಿ ಸುತ್ತಮುತ್ತಲ ಗಡಿಪ್ರಾಂತಗಳ ಒಳ ಹೊರಗೂ ಪ್ರಚಲಿತವಿದೆ.

ಬಳ್ಳಾರಿ ಭಾವೈಕ್ಯದ ಹೆಣ್ಣೇ ಕಲ್ಲುಬಾವಿ ನೀರು ತರುವೆ  
ನಿಲ್ಲೆ ನಿಲ್ಲೆ ರಮಣಿ ನಿಲ್ಲೆ ಗಲ್ಲವು ಬಿಡುವೇನೆ  
ಹಸಾಲಮೆಗ್ಗೆ ಸೀರೆಯುಟ್ಟು ಕುಸಾಲೆಮಗ್ಗೆ, ಕುಬುಸವ  
ತೊಟ್ಟ ಹಸನಾದ ಗುಸಿಗಳ ಮೇಲೆ ನೊಸಲಿದಳು ಕೊಡನಾ  
(ವಕ್ತೃ: ಪೂಜಾರಿ ಓಬಯ್ಯ, ದೊಣಮಂಡಲಹಟ್ಟಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಬಾವಿ ನೀರು ಎಂದರೆ ಅವಿವಾಹಿತ ಹೆಣ್ಣನ್ನು ಸೂಚಿಸುವಂತಹ ಪ್ರತಿಮೆಯಾಗಿದೆ. ಅವಿವಾಹಿತ ಸ್ತ್ರೀ ನೀರನ್ನು ತರಲು ಕಲ್ಲು ಬಾವಿಯ ಬಳಿ ಸುಳಿದಾಗ ಆಕೆಯ ಪ್ರಿಯಕರನೊ

ಅಥವಾ ಸರೀಕ ವಯಸ್ಸಿನ ಪೋರ ಬಾವಿಕಟ್ಟೆಯ ಹತ್ತಿರ ಅವಳು ನೀರು ತುಂಬಿಕೊಂಡು ಹೊರಟಾಗ ಅವಳನ್ನು ಕೆಣಕುವ ಮೂದಲಿಸುವ, ಛೇಡಿಸುವ, ಚಿತ್ರಣವನ್ನು ಈ ಗೀತೆ ಕಟ್ಟಿಕೊಡುತ್ತದೆ.

ಕೋಲುಪದಗಳಲ್ಲಿ ಶೃಂಗಾರ, ಪ್ರೇಮ - ಪ್ರಣಯದ ಜೊತೆ ಜೊತೆಗೆ ಗಂಡ- ಹೆಂಡತಿಯರ ಸರಸ-ವಿರಸ, ಪ್ರೇಮಿಗಳ ಅಗಲಿಕೆಯ ನೋವು ಸಾಂಸಾರಿಕ ಜೀವನದಲ್ಲಿ ನಡೆಯುವ ಕಲಾಪಗಳು ಇತ್ಯಾದಿ ನೈಜ ಸಂಗತಿಗಳನ್ನು ತಾವು ಕಂಡುಂಡ ಸಿಹಿ-ಕಹಿ ಅನುಭವಗಳನ್ನು ಈ ಜನಪದರು ಕೋಲುಪದಗಳಲ್ಲಿ ಅನಾವರಣ ಮಾಡಿರುವುದು ಕಾಣಸಿಗುತ್ತದೆ.

**ಗಂಡ - ಹೆಂಡತಿಯ ವಿರಹ ವೇದನೆಗೆ ಸಂಬಂಧಿಸಿದ ಕೋಲುಪದ**

ಕೂಸೆ ಬ್ಯಾಡಿಂಕಾ ನ್ಯಾಯದೋಳ್ ಕದಾನಾ
ಅಟ್ವೀ ಮೇಲ್‌ಸಾರ್ ಹುಡುಗಿ ಇಟ್ವಳ್ತೀ ಕದನಾ
ಇಟ್ವಳ್ತೀ ಕದನಾಽ... ಹೆಂಗೇ ಮರೆಯಲಿ ನಿನ್ನಾ
ಎಬ್ಬಿರಿಸೋ ಹಿಂದಿನ ಗಾಳಿ ಗಾಳಿ ಕೆಂದೋಳವು
ಗಾಳಿ ಕೆಂದೋಳವುಽ... ಹೆಂಗೆ ಮರೆಯಲೆ ನಿನ್ನಾ

(ವಕ್ತೃ: ಚಂದ್ರಪ್ಪ, ಸೂಲದಹಳ್ಳಿ, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ

ಈ ಗೀತೆ ಗಂಡ-ಹೆಂಡತಿಯರಲ್ಲಿ ವಿರಹ - ವೇದನೆಯನ್ನು ಒಳಗೊಂಡಿದ್ದರೂ ಪರಸ್ಪರರಲ್ಲಿ ಆಲಂಬನಾ ವಿಭಾವವನ್ನು, ಭವಿಷ್ಯದಲ್ಲಿ ಪರಸ್ಪರ ಸೇರುವಿಕೆಯನ್ನು ಸೂಚಿಸುತ್ತದೆ. ನೆರೆ-ಹೊರೆಯವರ ಹೇಳಿಕೆ ಮಾತುಗಳಿಗೆ, ಚಾಡಿ ಮಾತುಗಳಿಗೆ ಕಿವಿಗೊಟ್ಟು ಗಂಡ-ಹೆಂಡತಿಯರಿಬ್ಬರು ತಮ್ಮ ನಡುವೆ ಆಳವಾದ ವಿರಹ, ದುಃಖದ ಕಂದಕವನ್ನು ಸೃಷ್ಟಿಸಿಕೊಂಡಿರುವ ಚಿತ್ರಣವಿದೆ. ಇದನ್ನು ಜನಪದರು ಕೋಲುಪದದಲ್ಲಿ ಸೂಚ್ಯವಾಗಿ ನಿರೂಪಿಸಿದ್ದಾರೆ.

ಸಾಯಂಕಾಲದ ಸಮಯದಲ್ಲಿ ಕೆಂದೋಳಿನ ಬಿರುಗಾಳಿ ಇಡೀ ವಾತಾವರಣವನ್ನೇ ಹೇಗೆ ಕೆಂಪಡರಿಸುತ್ತದೆಯೋ ಹಾಗೆ ಯುವ ಪ್ರೇಮಿಗಳ ಅಥವಾ ನವವಧು - ವರರ ಸಂಸಾರದ ಸಾಗರದಲ್ಲಿ ಆದ ಏರಿಳಿತಗಳನ್ನು ಸಾಯಂಕಾಲದ ಕೆಂದೋಳಿನ ಚಿತ್ರಣವನ್ನು ಉಪಮಾ ರೀತಿಯಲ್ಲಿ ನೀಡಿದ್ದಾರೆ. ಇಂಥ ಸಾಂಸಾರಿಕ ಜೀವನದಲ್ಲಿ ಕೆಂದೋಳಿನ ವಾತಾವರಣವಿದ್ದರೂ ಗಂಡ ತನ್ನ ಹೆಂಡತಿಯನ್ನು ಮರೆಯದೆ, ಪ್ರತಿದಿನವೂ ರಾತ್ರಿ ಮಲಗಿಕೊಂಡಾಗ ತನ್ನ ಪತ್ನಿಯನ್ನು ಪುನಃ ಪುನಃ ಸ್ಮರಣೆಗೆ ತಂದುಕೊಂಡು ತನ್ನ ದುಃಖವನ್ನು ಮತ್ತು ವಿರಹ-ವೇದನೆಯನ್ನು ಅನುಭವಿಸುತ್ತಾ ತನ್ನ ಹೆಂಡತಿಯನ್ನು ಬಿಟ್ಟು ಬದುಕಲಾರೆ ಎನ್ನುವಂಥ ಸ್ಥಿತಿಯನ್ನು ಅನುಭವಿಸುತ್ತಿರುವ ಚಿತ್ರಣವನ್ನು ಈ ಗೀತೆ ಕಟ್ಟಿಕೊಡುತ್ತದೆ.

ಗಂಡ - ಹೆಂಡತಿಯರ ವಿರಹ-ವೇದನೆ, ಕಾಮನೆ, ಪ್ರೇಮಿಗಳ ಸರಸ-ಸಲ್ಲಾಪ ಪರಪುರುಷನ ಸಖ್ಯ ಬಯಸುವ ಹೆಣ್ಣುಗಳ ವ್ಯಾಪ್ತಿಮುಖ ಈ ತರಹದ ಹತ್ತು ಹಲವು ತೆರನಾದ ಕೋಲುಪದಗಳು ಸಿಗುತ್ತವೆ. ಗೆಳೆಯ-ಗೆಳತಿಯರಿಬ್ಬರು ಪರಸ್ಪರ ಜಗಳ ಮಾಡಿಕೊಂಡು ಕೋಪಿಸಿಕೊಂಡು, ಮುಸಿಮುನಿಸಿ ಕೊಂಡಿರುವ ಒಂದು ಗೀತೆ,

**ಗೆಣೆಯ - ಗೆಣತಿ**

ಗೆಣೆಯ - ಗೆಣತಿ ಹೊಡೆದಾಡಿ ಗೆಣತಿ ಓಡಿ
ಹೋದಳಣ್ಣಾ ಗೆಣೆಯನಾದ್ರೂ ಪರದೇಸಿ
ಹೇ ಹೊತ್ತು ಮುಳುಗಿ ಸಂಜೆಯಾಗಿ ದುಃಖ
ಮಾಡಿ ಮನುಗುತಾಳೆ ಮತ್ತೆ ಜಮಖಾನಾಸಿ ||ಪ||
ಆಕೆ ಬಂದು ಹೊರಗೆ ನಿಂತು ಕನಸಿನಲಿ
ಕರೆದಂಗಾದ್ರೂ ಆಕೆನಾದ್ರೂ ಮರೆತಿಲ್ಲ
ಹೇ ನಿದ್ದೆಗಣ್ಣಲ್ಲಿ ಎದ್ದು ಹೋಗಿ ಗೋಡೆ ಹತ್ತಿ
ನೋಡಿದರೂ ಸುಂದ್ರುವಾಣಿ ಸುಡಲಿಲ್ಲ

(ವಕ್ತೃ: ಜಯಣ್ಣ, ಬೋಸೆದೇವರಹಟ್ಟಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಈ ಗೀತೆಯು ಗೆಳೆಯ - ಗೆಳತಿಯರ ಸರಸ - ವಿರಸದ ವಸ್ತುವನ್ನು ಒಳಗೊಂಡಿದೆ. ಇಲ್ಲಿ ಪ್ರೇಮಿಗಳಿಬ್ಬರು ಯಾವುದೋ ಕ್ಷುಲ್ಲಕ ಕಾರಣಕ್ಕಾಗಿ, ವಿಷಗಳಿಗೆಯಲ್ಲಿ ಹೊಡೆದಾಡಿ ಮತ್ತೆ ಮತ್ತೆ ಪರಸ್ಪರರು ತಮ್ಮ ಹಳೆಯ ನೆನಪುಗಳನ್ನು ನೆನೆಸಿಕೊಂಡು ವಿರಹ ವೇದನೆಯನ್ನು ಅನುಭವಿಸುವುದನ್ನು ಈ ಕೋಲುಪದ ಚಿತ್ರಿಸುತ್ತದೆ.

ಯುವ ಪ್ರೇಮಿಗಳಿಬ್ಬರು ಮುನಿಸಿಕೊಂಡು ಬೈದಾಡಿ, ಹೊಡೆದಾಡಿ, ಜಗಳ ಮಾಡಿಕೊಂಡರು. ಮತ್ತೆ ತಮ್ಮ ನೆನಪುಗಳ ಬುತ್ತಿಯನ್ನು ತೆರೆದುಕೊಳ್ಳುತ್ತದೆ. ಪ್ರತಿ ದಿನ ಮಲಗುವಾಗ ಅವನಿಗೆ ಅವಳದೇ ಚಿಂತೆ. ಅವಳಿಗೆ ಅವನದೇ ಧ್ಯಾನ ಎನ್ನುವಂತೆ ಪ್ರಿಯಕರನು ಕನಸಿನಲ್ಲಿ ಪ್ರಿಯೆ ಕರೆದಂತೆ ಕಲ್ಪಿಸಿಕೊಳ್ಳುತ್ತಿದ್ದನು. ಹೀಗೆ ತನ್ನ ಪ್ರಿಯತಮೆಯನ್ನು ನೋಡುವ ಹಂಬಲದಿಂದ ನಿದ್ದೆಯಿಲ್ಲದೆ ಅವನಿಗೆ ಅಡ್ಡವಾಗಿದ್ದ ತಡೆಗೋಡೆಯನ್ನು ಏರಿ ತನ್ನ ಪ್ರೇಯಸಿಯನ್ನು ನೋಡಲು ಹವಣಿಸುತ್ತಿದ್ದನು. ಅವಳು ಕೂಡ ತನ್ನ ಪ್ರಿಯಕರನ ಸ್ಮರಣೆಯಲ್ಲಿ ಬಾಗಿಲ ಬಳಿ ಕಾದು ಕುಳಿತಿರುವ ಚಿತ್ರಣವನ್ನು ಈ ಕೋಲುಪದ ಸೂಕ್ತವಾಗಿ ನಿರೂಪಿಸುತ್ತದೆ. ಈ ಗೀತೆ ಸರಸ-ವಿರಸದ ವಸ್ತುವಿಷಯವನ್ನು ಒಳಗೊಂಡಿದ್ದರೂ ಸಂಪೂರ್ಣ ಆಲಂಬನಾ ವಿಭಾವವನ್ನೆ ಸ್ಫುರಿಸುತ್ತಿರುವುದು ಕಂಡು ಬಂದಿದೆ. ಅಂದರೆ ಶೃಂಗಾರ ಅಥವಾ ಪ್ರೇಮವನ್ನೇ ಸೂಚಿಸುತ್ತದೆ.

ಇದೇ ಮಾದರಿಯ ಇನ್ನೊಂದು ಪ್ರೇಮಗೀತೆಯಲ್ಲಿ ಗೆಳೆಯನು ತನ್ನ ಗೆಳತಿ ಅಥವಾ ಪ್ರಿಯತಮೆಗಾಗಿ ಮಾಡಿದ ಸಾಹಸ ಕಾರ್ಯ ಮತ್ತು ಅನುಭವಿಸಿದ ಪಡಿಪಾಟಲುಗಳನ್ನು ಈ ಕೋಲುಪದದಲ್ಲಿ ಕಾಣಬಹುದು.

ಹೌದೆಲ್ಲೆ ಕೆಂಪಾದೆಣ್ಣೆ ನಿನ
ಮ್ಯಾಲಿಟಿದ್ದೆ ಬಹುದಿನ ಕಣ್ಣೆ
ನಿನಗಂತ ಹಾರಿದ್ದೆ ಹಾರ್ಮಟಕಳ್ಳಿ
ನಿನಗಂತ ಹಾರಿದ್ದೆ ಹಾರ್ಮಟಕಳ್ಳಿ

ಕಾಲಿಗೆ ಸುತ್ತೈತೆ ಮಾಲಿಂಗನ ಬಳ್ಳಿ
ಹೌದೆಲ್ಲೆ... ಹೌದೆಲ್ಲೆ ಕೆಂಪಾದೆಣ್ಣೆ ನಿನ
ಮ್ಯಾಲಿಟಿದ್ದೆ ಬಹುದಿನ ಕಣ್ಣೆ

(ವಕ್ತೃ: ಗುರುನಾಥಯ್ಯ, ಜುಮೋಬನಹಳ್ಳಿ, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ)

ಶೃಂಗಾರದ ಒಂದು ಭಾಗವೆನಿಸಿದ ವಿರಹ ವೇದನೆಯು ಇಲ್ಲಿ ಕಂಡು ಬರುತ್ತದೆ. ತನ್ನ ಗೆಳತಿಗೋಸ್ಕರ ಬಹುದಿನದವರೆಗೂ ಕಾಯುತ್ತಾ ಇರುವುದು ಹಾಗೂ ಅವಳನ್ನು ಸೇರಿಕೊಳ್ಳಲು ಮಾಡಿದ ಸಾಹಸ ಮತ್ತು ಪಟ್ಟ ಪಡಿಪಾಟಲುಗಳನ್ನು ಸ್ಮರಣೆಗೆ ತಂದುಕೊಳ್ಳುವುದೂ ಇದೆ. ತನ್ನ ಪ್ರಿಯತಮೆಗಾಗಿ ಎದೆಮಟ್ಟದವರೆಗಿನ ಕಳ್ಳಿಯ ಬೇಲಿಯನ್ನು ಹಾರಿದಂಥ ಸಾಹಸವನ್ನು ಹಾಗೆಯೇ ಕಳ್ಳಿ ಬೇಲಿಯನ್ನು ಹಾರಿದಾಗ ಬೇಲಿಯೊಳಗಿನ ಕಳ್ಳಿಮರಗಳಿಗೆ ಆವರಿಸಿಕೊಂಡಿರುವ, ಸುತ್ತಿಕೊಂಡಿರುವ ಮಾಲಿಂಗನಬಳ್ಳಿ ಪ್ರಿಯಕರನ ಕಾಲಿಗೆ ಸುತ್ತಿಕೊಂಡು ಪಡಿಪಾಟಲಿಗೆ, ನಗೆಪಾಟಲಿಗೆ ಈಡಾಗಿರುವುದು ಮೇಲ್ನೋಟಕ್ಕೆ ಕಂಡು ಬರುತ್ತದೆ.

ಹಾಲ್ಕುಡ್ಸಿದಲ್ಲೆ ಲೋಲಾಡಿದಲ್ಲೆ
ಹಾಲ್ಕುಡ್ಸಿದಲ್ಲೆ ಲೋಲಾಡಿದಲ್ಲೆ
ಮೇಲೆ ಮಲಗಿಸಿಕೊಂಡು ಲೋಲಾಡಿದಲ್ಲೆ
ಹೌದಲ್ಲೆ ಹೌದಲ್ಲೆ ಕೆಂಪಾದೆಣ್ಣೆ ನಿನ
ಮ್ಯಾಲಿಟ್ಟಿದ್ದೆ ಬಹುದಿನ ಕಣ್ಣೆ

(ವಕ್ತೃ: ಓಬಳೇಶ, ಮಾಕನಡಕು, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ)

ಈ ಗೀತೆಯಲ್ಲಿ ಗೆಳೆಯ ಅಥವಾ ಪ್ರಿಯಕರನಿಗೆ ಪ್ರಿಯತಮೆಯು ಹಾಲು ಕುಡಿಸಿದ್ದು, ಹಾಗೆಯೇ ಪ್ರಿಯಕರನನ್ನು ತನ್ನ ಎದೆಯ ಮೇಲೆ ಮಲಗಿಸಿಕೊಂಡು ಚಿಕ್ಕ ಮಗುವಿಗೆ ಜೋಗುಳ ಹಾಡುವಂತೆ ಹಾಡಿದ್ದು ಇತ್ಯಾದಿ ಸಂಗತಿಗಳನ್ನು ಪ್ರಿಯಕರ ನೆನಪಿಸಿಕೊಂಡು ದುಃಖಿಸುತ್ತಿರುವ ಚಿತ್ರಣವನ್ನು ಕಾಣಬಹುದು. ಜೀವನದ ನೈಜ ಸಂಗತಿಗಳನ್ನು ಕೋಲುಪದಗಳು ತೆರೆದಿಡುತ್ತವೆ.

ಕೋಲುಪದಗಳಲ್ಲಿ ಶೃಂಗಾರ ಅಥವಾ ಪ್ರಣಯಕ್ಕೆ ಸಂಬಂಧಿಸಿದ ಪದಗಳು ಹೆಚ್ಚಾಗಿ ಸಿಗುತ್ತವೆ, ಇವುಗಳದ್ದೇ ಸಿಂಹಪಾಲು. ಅಂತಹ ಒಂದು ಗೀತೆಯಲ್ಲಿ ಮಾವ-ಸೊಸೆಯರ ಪ್ರಣಯದಾಟವನ್ನು-ಚೆಲ್ಲಾಟವನ್ನು ಈ ಗೀತೆಯಲ್ಲಿ ನೋಡಬಹುದು.

ಮಾವನ ಮಗಳು ಮಾರುದ್ದ ಜಡೆಯವಳೆ
ಬಾಗುಲಾಗೆಮ್ಮೆ ಕರೆಯವಳು ಕೋಲನ್ನ ಕೋಲೆ
ಬಾಯಾರಿ ಬಂದೆ ಕೊಡು ನೀರು ಕೋಲನ್ನ ಕೋಲೆ
ನೀರು ಕೇಳಲಿಕ್ಕೆ ನಾನ್ಯಾರೋ ನೀನ್ಯಾರೋ
ಹರಿವ ಜಲಧಿಗೆ ಹೋಗಯ್ಯ ಕೋಲನ್ನ ಕೋಲೆ
(ವಕ್ತೃ: ಸಣ್ಣಮಲ್ಲಯ್ಯ, ಚಿಕ್ಕುಂತಿ, ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಕೋಲುಪದಗಳಲ್ಲಿ ನೀರು ಕೇಳುವುದು, ವಿಶ್ರಮಿಸುತ್ತಾ ಮರದ ಕೆಳಗೆ ಕೂರುವುದು ಅಥವಾ ನೀರಿನ ಉಪಮೆಯೊಂದಿಗೆ ಬಂದರೆ ಅವು ಪ್ರೇಮ-ಕಾಮ-ಪ್ರಣಯಕ್ಕೆ ಸಂಕೇತವೆಂದೇ ನೋಡಲಾಗಿದೆ. ಹಾಗೆಯೇ ಹರಿವ ನೀರನ್ನು ವೈಶ್ಯೆಯರಿಗೆ ದೃಷ್ಟಾಂತೀಕರಿಸುವುದು ನೋಡಿದ್ದೇವೆ. ಈ ಕೋಲುಪದದಲ್ಲಿ ಮಾವನಾದ ಪೋರ ತನ್ನ ಮಾವನ ಮಗಳನ್ನು ಅಥವಾ ಸೊಸೆಯನ್ನು ಪ್ರೇಮದಿಂದ ಕಾಮದಿಂದ ಕುಡಿಯಲು ನೀರು ಕೊಡೆಂದು ಕೇಳುವುದು ಕಂಡು ಬಂದಿದೆ. ನೀರು ಕಾಮಕ್ಕೆ ಸಂಕೇತವಾಗಿ ಬಳಕೆಯಾಗಿದೆ. ಆದರೆ ಸೊಸೆಯು ತನ್ನ ಮಾವನ ಕಾಮದ ಪ್ರೇಮ -ಪ್ರಣಯಕ್ಕೆ ಓಗೊಡದೆ "ಹರಿವ ಜಲಧಿಗೆ ಹೋಗಯ್ಯ" ಎಂದು ಹೇಳುತ್ತಾಳೆ. ಅಂದರೆ ನಿನ್ನ ಕಾಮದ ಪ್ರಣಯ ನಾನೊಲ್ಲೆ ಅದಕ್ಕೆಂದೇ ಸೂಳೆಯರು ಇದ್ದಾರೆ(ಹರಿವ ಜಲಧಿ) ಅಲ್ಲಿಗೆ ಹೋಗೋ ಮಾವ ಎಂದು ಮಾರ್ಮಿಕವಾಗಿ ಮಾವನಿಗೆ ಸೊಸೆ ಪ್ರತಿಯುತ್ತರ ನುಡಿದಿರುವುದು ಕಾಣಬಹುದು. ಹೀಗೆ ಬಾವಿಯ ನೀರು-ಅವಿವಾಹಿತ ಹೆಣ್ಣು, ಕೆರೆನೀರು-ವಿವಾಹಿತ ಸ್ತ್ರೀ ಹರಿವ ನೀರು-ವೇಶ್ಯೆ (ಸೂಳೆ) ಎಂಬಂತಹ ಮಾತುಗಳು, ಸಂಕೇತಗಳನ್ನು ಚಂದ್ರಶೇಖರ ಕಂಬಾರರು(ಸಂ), 'ಜನಪದ ಸಾಹಿತ್ಯ' ಕೃತಿಯಲ್ಲಿ 'ಪ್ರೇಮಗೀತೆಗಳು' ವರ್ಗೀಕರಣದ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

ಕೋಲುಪದಗಳಲ್ಲಿ ಪ್ರಣಯ ಅಥವಾ ಪ್ರೇಮಕ್ಕೆ ಸಂಬಂಧಿಸಿದಂತೆ ಗಂಡ-ಹೆಂಡತಿಯರ ಪ್ರಣಯ, ಗೆಳೆಯ-ಗೆಳತಿಯರ ಪ್ರಣಯ, ಹದಿಹರೆಯ ಮನಸುಗಳ ಪ್ರೇಮ ಪರಿತಾಪಗಳು ಇತ್ಯಾದಿಯಾಗಿ ಇವರ ಪ್ರಣಯ-ಪ್ರೇಮದಲ್ಲಿ ನೈತಿಕತೆಯ ಮೌಲ್ಯಗಳು ಕಾಣಸಿಗುತ್ತವೆ. ಆದರೆ ಗಂಡನನ್ನು ತೊರೆಯದೆ, ಗಂಡನಿಗೆ ತಿಳಿಯದೆ ಪರಪುರುಷನ ಸಖ್ಯತೆ ಬಯಸುವ ಸ್ತ್ರೀ-ಪುರುಷರ ಅನೈತಿಕ ಸಂಗತಿಗಳನ್ನು ಅಶ್ಲೀಲವಾಗಿ ಬಿಚ್ಚಿಡದೆ ಶೀಲತೆಯ ನೆರಳಿನಲ್ಲೇ ಅವರ ಚಾರಿತ್ರ್ಯವನ್ನು ಬಯಲಿಗೆಳೆಯುತ್ತವೆ. ಹಾಗೆಯೇ ಗಂಡನನ್ನು ತೊರೆದು ಹೋದ ಹೆಣ್ಣುಗಳು ಕೊನೆಗೆ ತನ್ನ ತಪ್ಪಿಗೆ ತಾನು ಪಶ್ಚಾತ್ತಾಪ ಪಡುವುದು ಇದೆ.

ಪ್ರೇಮಕ್ಕೆ ಕಣ್ಣಿಲ್ಲ, ಕಿನ್ನುಡಿ ನುಡಿಸುತ್ತಾ ಬಂದ ಜೋಗಿಯ ದನಿಯ ಇಂಪಿಗೂ ಆತನು ಧರಿಸಿದ್ದ ಉಂಗುರದ ಚಂದಕ್ಕೂ ಮನಸೋತ ನಾರಿಯೊಬ್ಬಳು ಮನೆ ಬಿಟ್ಟು ಅವನ ಹಿಂದೆ ಓಡಿ ಹೋಗುತ್ತಾಳೆ. ಅನಂತರ ಜೋಗಿಗೆ ಮನೆ ಮಠ ಇಲ್ಲವೆಂಬ ವಸ್ತುಸ್ಥಿತಿಯ ಅರಿವಾಗಿ ಪಶ್ಚಾತ್ತಾಪ ಪಡುತ್ತಾಳೆ.

**ಏಸು ದಿನಂತ ನೋಡಲಮ್ಮಾ**

ಏಸುಽ ದಿನಂತ ನೋಡಲಮ್ಮಾ - ಈ ನಲ್ಲನ ದಾರಿನ್
ಯಾವಽ ಕಾಲಂತ ಕಾಯಲಮ್ಮಾ
ಏಸುಽ ದಿನಂತ ನೋಡ್ಲಿ
ಯಾವಽ ಕಾಲಂತ ಕಾಯ್ಲಿ
ಘಾಸು ಮಾಡಿ ಗಲ್ಲದ ಮ್ಯಾಲೆ
ಗಂಧದ ಬಟ್ಟೇಟ ಹೋದನ ದಾರಿನ್

(ಚಂದ್ರಶೇಖರ ಕಂಬಾರ; ೧೯೭೩; ಪುಟ ೯೩-೯೪)

ಈ ಕೋಲುಪದದಲ್ಲಿ ಜೋಗಿಯ ಕಿನ್ನುಡಿಗೂ, ಅವನ ಹಾಡಿಗೂ ದನಿಗೂ ಮನಸೋತ ಒಬ್ಬ ಹೆಣ್ಣು ಅವನ ಸಂಗಡ ಓಡಿ ಹೋಗುತ್ತಾಳೆ. ಓಡಿ ಹೋಗಿ ಕೊನೆಗೆ ಅವನ ನಿಜಸ್ಥಿತಿಯು ಬಯಲಾದಾಗ ಪರಿತಪಿಸುತ್ತಾಳೆ, ದುಃಖಿಸುತ್ತಾಳೆ. ಹಾಗೆಯೇ ತನ್ನ ಬಗ್ಗೆ ತಾನೇ ನಾಚಿಕೆಪಟ್ಟು ಕೊಳ್ಳುವಂಥ ಸ್ಥಿತಿಗೆ ಬಂದು ತಲುಪುತ್ತಾಳೆ. 'ಏಸು ದಿನಂತ ನೋಡಲಮ್ಮಾ' ಎನ್ನುವಂಥ ಕೋಲುಪದದಲ್ಲಿ ಹೆಣ್ಣು ಅಥವಾ ಸ್ತ್ರೀಯು ಪರಪುರುಷನಾದ ಜೋಗಿಯ ಸಂಗಡ ತೆರಳಿ ಗಂಡನನ್ನು ಮತ್ತು ತನ್ನ ಕುಟುಂಬದವರನ್ನು ಮರೆತು ತಾತ್ಕಾಲಿಕ ಸುಖದಿಂದ ತನ್ನನ್ನೇ ಮೈಮರೆತು ಜೋಗಿಯ ಜೊತೆಗೂಡಿ ಪ್ರಯಾಣಿಸುತ್ತಾಳೆ. ತಾತ್ಕಾಲಿಕ ಸುಖಕ್ಕಾಗಿ ಅವನೆಡೆ ಹೋದ ಸ್ತ್ರೀಯು ಜೋಗಿಗೆ ಮನೆ-ಮಠ, ಆಸ್ತಿ-ಪಾಸ್ತಿ ಹಾಗೂ ಅವನದೆಂಬುದು ಯಾವುದು ಇಲ್ಲದೆ ಊರೂರು ತಿರುಗುತ್ತಿರುವವನು ಎಂಬ ವಿಚಾರ ಅವಳಿಗೆ ತಿಳಿದಾಗ ಬೇಸರಿಸಿಕೊಳ್ಳುತ್ತಾಳೆ, ವ್ಯಥೆ ಪಡುತ್ತಾಳೆ. ಹಾಗೆಯೇ ತನ್ನವರನ್ನೆಲ್ಲಾ ಬಿಟ್ಟು ಬಂದೆನೆಲ್ಲಾ ಎಂದು ಗೋಳಿಡುವುದು ಈ ಕೋಲುಪದದಲ್ಲಿ ಸೂಚ್ಯವಾಗಿ ಕಾಣಸಿಗುತ್ತದೆ.

ಮನುಷ್ಯ ಜೀವನದ ಒಂದು ಪ್ರಮುಖ ಘಟ್ಟ ಕಾಮ. ಕಾಮದ ಕಾಮನೆ ಪ್ರಕೃತಿ ಸಹಜವಾದ ಒಂದು ಪ್ರವೃತ್ತಿ. ಮಾನವನು ಆದಿಯಿಂದ ಇಂದಿನವರೆಗೂ ಕಾಮದ ಕಾಮನೆಗಳನ್ನು-ವಾಂಛೆಗಳನ್ನು ವಿಸ್ತರಿಸಿಕೊಳ್ಳುತ್ತಾ ಬಂದಿದ್ದಾನೆ. ಕೋಲುಪದಗಳಲ್ಲಿ ಕಾಮ ಮತ್ತು ಪ್ರಣಯಗಳನ್ನು ವಿವಿಧ ಮಜಲುಗಳಲ್ಲಿ ತೋರ್ಪಡಿಸಲಾಗಿದೆ. ಈ ಗೀತೆಗಳಲ್ಲಿ ಸ್ತ್ರೀಯರ ಪಾತಿವ್ರತ್ಯದ, ಆದರ್ಶದ ಒಂದು ಮುಖ ಮತ್ತು ವ್ಯಭಿಚಾರದ ಮತ್ತೊಂದು ಮುಖ ಎರಡನ್ನೂ ಅನಾವರಣಗೊಳಿಸುತ್ತವೆ. ಗಂಡ-ಹೆಂಡತಿಯರ ಪ್ರಣಯ ಪ್ರಸಂಗಗಳು ಪರಸ್ಪರರನ್ನು ಮೂದಲಿಸುವುದು, ಛೇಡಿಸುವುದು, ಪ್ರೀತಿಯ ಹುಸಿಕೋಪ, ಮುನಿಸು ಇತ್ಯಾದಿ ಸನ್ನಿವೇಶಗಳು-ಗೆಳೆಯ-ಗೆಳತಿಯರ ಕಾಮಾಲಾಪನೆಗಳು, ಪ್ರೇಮಿಗಳ ಸಾಹಸ, ತ್ಯಾಗ, ಬಲಿದಾನ, ಪಡಿಪಾಟಲುಗಳು ಇವೆಲ್ಲವೂ ಸಾಮಾಜಿಕ ಜನಜೀವನದ ಆಗು-ಹೋಗುಗಳೇ ಆಗಿವೆ. ಈ ತರಹದ ಎಲ್ಲಾ ಮಾದರಿಯ ಪ್ರಣಯ ಪ್ರಸಂಗಗಳು ಈ ಗೀತೆಗಳಲ್ಲಿ ವಸ್ತುವಾಗಿರುವುದು ಕಾಣಬಹುದು. ಹಾಗೆಯೇ ಗಂಡ-ಮಕ್ಕಳನ್ನು ಕಣ್ತಪ್ಪಿಸಿ ಪರಪುರುಷನ ಸಂಗಡ ತನ್ನ ಕಾಮದ ವಾಂಛೆಗಳನ್ನು ಪೂರೈಸಿಕೊಳ್ಳುವ ಹೆಣ್ಣುಗಳು(ಹೆಂಡತಿ), ಮಡದಿ-ಮಕ್ಕಳನ್ನು ಕಡೆಗಣಿಸಿ ಸೂಳೆಯರಿಗೋಸ್ಕರ ತನ್ನ ಜೀವನವನ್ನೇ ಮುಡಿಪಾಗಿಡುವ ಪುರುಷರು, ಹಾದಿ ತಪ್ಪಿದ ಹೆಣ್ಣು ಪರಪುರುಷನಿಗಾಗಿ ಇಡೀ ರಾತ್ರಿ ಪೂರಾ ಕಾದು ಅವನ ಜೊತೆ ಕೂಡಿಕೆ ಮಾಡಿಕೊಳ್ಳಲು ಮೋಟುಗೋಡೆಗಳನ್ನು ಏರಿ ಹೋಗುವುದು, ದುರ್ಗಮ ದಾರಿಗಳನ್ನು ಹಾದು ಹೋಗುವುದು ಕೋಲುಪದಗಳಲ್ಲಿ ಕಾಣಸಿಗುತ್ತದೆ.

ವಿವಾಹಿತ ಹೆಣ್ಣು ತಾಳಿ ಕಟ್ಟಿದ ಗಂಡ ಮತ್ತು ಮಕ್ಕಳಿಗಿಂತ ತನ್ನ ಪ್ರಿಯಕರನಿಗೆ ಅಂದರೆ ಕಟ್ಟಿಕೊಂಡ ಗಂಡನಿಗಿಂತ ಹೆಚ್ಚಾಗಿ ಇಟ್ಟುಕೊಂಡ ಪರಪುರುಷನಿಗೆ ವಿಶೇಷ ಪ್ರೀತ್ಯಾದರಗಳಿಂದ ಉಪಚರಿಸುವಂತಹ ಪ್ರಸಂಗಗಳು ಈ ಕೋಲುಪದಗಳಲ್ಲಿ ಗೋಚರಿಸುತ್ತದೆ.

ಕೋಲಾಟದಲ್ಲಿ ತಾಳಪುಕಡ್ಡಿ(ತಾಳಗಡ್ಡಿ) ಪ್ರಕಾರಕ್ಕೆ ಸೇರಿದ ಒಂದು ಗೀತೆಯನ್ನು ಉದಾಹರಣೆಯಾಗಿ ನೋಡಬಹುದಾಗಿದೆ.

ಎಂಥೆಂಥಾ ಮಾತಂಬುತಾನಾ ತಂದೆ
ತಾಯರು ಬಂಧು ಬಳಗದ ಮುಂದೆ ||ಪ||
ಮಕ್ಕಳಿಗೆ ನೀಡ್ಯಾಳವ್ವಾ ತಂಗಾಳು ಮುದ್ದೆ
ಗಂಡಗೆ ನೀಡ್ಯಾಳವ್ವಾ ಒಣಗಿದ ರೊಟ್ಟಿ
ಮಿಂಡಗೆ ನೀಡ್ಯಾಳವ್ವಾ ಸಣ್ಣಕ್ಕಿ ಅನ್ನ
ತಾನು ಉಂಡಾಳವ್ವಾ ಕರಿಕಡುಬಿನೂಟ
ಎಂಥೆಂಥ ಮಾತಂಬುತಾನ ತಂದೆ
ತಾಯರು ಬಂಧು ಬಳಗದ ಮುಂದೆ

ಮಕ್ಕಳಿಗೆ ಕಡಿಯಲವ್ವಾ ಅಡವಿಯಾಗಳ ಚೇಳು
ಗಂಡಗೆ ಕಡಿಯಲವ್ವಾ ಹುತ್ತದಾಗಳ ಸರ್ಪ
ಮಿಂಡಗೆ ಕಡಿಯಲವ್ವಾ ಸಗಣ್ಯಾಗಳ ಹುಳ
ನನಗೆ ಕಡಿಯಲವ್ವಾ ತಲಿಯಾಗಳ ಹೇನು
ಎಂಥೆಂಥಾ ಮಾತಾಂಬುತಾ

(ವಕ್ತೃ: ಶಿವಯ್ಯ, ವಲಸೆ, ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಈ ಗೀತೆಯಲ್ಲಿ ಸಾಮಾಜಿಕ ಜನಜೀವನದಲ್ಲಿ ನಡೆಯಬಹುದಾದ ಅಥವಾ ನಡೆದ, ನಡೆಯುವ ನೈಜ ಘಟನೆಗಳನ್ನು, ಸಂಗತಿಗಳನ್ನು ಇಲ್ಲಿ ಬಿಚ್ಚಿಡುತ್ತದೆ. ಗಂಡನು ಹೆಂಡತಿಗೆ ಅವಳ ತಂದೆ-ತಾಯಿಗಳ ಮುಂದೆ ಕರೆದು ಬುದ್ಧಿವಾದ ಅಥವಾ ಸನ್ನಡತೆಯಿಂದ ಇರಬೇಕೆಂದು ಸೂಚಿಸುವುದು ಸಂಸಾರದಲ್ಲಿ ಸಹಜ ಪ್ರಕ್ರಿಯೆ, ಆದರೆ ಇದನ್ನೇ ನೆಪ ಮಾಡಿಕೊಂಡು ತನ್ನ ಗಂಡ ಮತ್ತು ಹಡೆದ ಮಕ್ಕಳಿಗೆ ತಾನೇ ಹಗೆ ಸಾಧಿಸುವುದು, ಹಿಡಿಶಾಪ ಹಾಕುವುದು, ಇದೆಲ್ಲ ಅವಳ ಮನಸ್ಸಿನಲ್ಲಿ ದ್ವೇಷವಾಗಿ ಪರಿವರ್ತಿತವಾಗಿರುವುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಮಕ್ಕಳಿಗೆ ತಂಗಳು ಮುದ್ದೆ, ಗಂಡನಿಗೆ ಒಣಗಿದ ರೊಟ್ಟಿ ಆದರೆ ತಾನು ಇಟ್ಟುಕೊಂಡ ಪರಪುರುಷನಿಗೆ ಸಣ್ಣಕ್ಕಿ ಅನ್ನ(ಸೋನಮಸೂರಿ ಅಕ್ಕಿಯ ಅನ್ನ) ಹಾಗೆಯೇ ಮಕ್ಕಳು ಮತ್ತು ಗಂಡನಿಗೆ ಚೇಳು, ಸರ್ಪಗಳೆಂಬ ವಿಷಜಂತುಗಳು ಕಡಿಯಲೆಂದು ಹಿಡಿಶಾಪ ಹಾಕುವುದು ಇದೆ. ಇದರೊಟ್ಟಿಗೆ ಇಟ್ಟುಕೊಂಡವನಿಗೆ ಸಗಣಿಯಲ್ಲಿನ ಹುಳ ಕಡಿಯಲೆಂದು ಬಯಸುವುದು ಕಾಣಸಿಗುತ್ತದೆ ಹಾಗೂ ತನ್ನ ಗಂಡ ಮತ್ತು ಮಕ್ಕಳು ನಾಶವಾಗಲಿ ಎನ್ನುವ ಬಯಕೆಯ ಜೊತೆಗೆ ಇಟ್ಟುಕೊಂಡ ಪರಪುರುಷನಿಗೆ ಯಾವುದೇ ತರಹದ ನೋವಾಗಿದಿರಲೆಂಬ ಆಶಯವೂ ಈ ಪದದಲ್ಲಿ ಅಡಗಿರುವುದನ್ನು ಕಾಣಬಹುದು.

ಹೆಣ್ಣನ್ನು ವಿಧೇಯತೆ, ಕ್ಷಮಾಯಾಧರಿತ್ರಿ, ಸಚ್ಚಾರಿತ್ರ್ಯ-ಸದ್ಗುಣಗಳ ಪ್ರತಿಬಿಂಬವಾಗಿ ಚಿತ್ರಿಸಿದಂತೆಯೇ, ಅವಳಲ್ಲಿನ ಅಸೂಯೆ, ಕ್ರೌರ್ಯ, ನಾಚಿಕೆಗೇಡಿತನ ಮೊದಲಾದ ದುರ್ಗುಣಗಳ ಪ್ರತಿಬಿಂಬದ ಮತ್ತೊಂದು ಮುಖವೂ ಕೋಲಾಟ ಪದಗಳಲ್ಲಿ ಕಾಣಬಹುದು.

೩.೫.೩. ಚಾರಿತ್ರಿಕ ಅಥವಾ ಐತಿಹಾಸಿಕ ಸಂಬಂಧಿ ಕೋಲುಪದಗಳು

ಸ್ಥಳೀಯ ಚರಿತ್ರೆಯಲ್ಲಿ ನಡೆದು ಹೋದ ಅದೆಷ್ಟೋ ಘಟನೆಗಳು ಮುನ್ನೆಲೆಗೆ ಬಾರದೆ ಅಳಿಯುವ ಹಾದಿಯಲ್ಲಿವೆ. ಸ್ಥಳೀಯ ಚರಿತ್ರೆಯು ಚರಿತ್ರೆಯ ಒಂದು ಭಾಗವಾಗಿರುವುದರಿಂದ ಇದರ ಅಧ್ಯಯನದಿಂದ ರಾಜಕೀಯ, ಶೈಕ್ಷಣಿಕ, ಧಾರ್ಮಿಕ, ಕಲೆ ಮತ್ತು ವಾಸ್ತುಶಿಲ್ಪ ಮೊದಲಾದ ಸಂಗತಿಗಳನ್ನು ಚಾರಿತ್ರಿಕ ಹಿನ್ನೆಲೆಯಲ್ಲಿ ಗ್ರಹಿಸಿಕೊಳ್ಳಬಹುದು. ಗತಿಸಿದ ಘಟನೆಗಳನ್ನು ಮೌಖಿಕ ಸಾಹಿತ್ಯ ಚರಿತ್ರೆಯ ದಾಖಲೆಗಳೆನಿಸಿದ ಕೋಲಾಟ, ಯಕ್ಷಗಾನ, ಬುರ್ರಕಥಾ, ದಾಸರಾಟ, ವೀರಗಾಸೆ, ಕರಪಾಲಮೇಳ, ಭಜನೆಪದ ಸೋಬಾನೆ ಪದಗಳಂಥ ಜಾನಪದೀಯ ಕುರುಹು ಗಳನ್ನಾಧರಿಸಿ ಐತಿಹಾಸಿಕ ದಾಖಲೆಗಳಾಗಿ ಬಳಸಿಕೊಂಡು ಅಧ್ಯಯನಶಿಸ್ತಿಗೆ ಒಳಪಡಿಸಿದರೆ ಅಳಿದು-ಉಳಿದಿರುವ ಅದೆಷ್ಟೋ ಸಂಗತಿಗಳನ್ನು ತಿಳಿಯಲು ಸಾಧ್ಯವಾಗುತ್ತದೆ.

ಹಕ್ಕಿಪಿಕ್ಕಿ, ಕಾಡುಗೊಲ್ಲ, ಕೊರಗ, ಕೊರವ, ಲಂಬಾಣಿ, ಕಾಡುಕುರುಬ ಮತ್ತು ಕೊರಚ ಮುಂತಾದ ಬುಡಕಟ್ಟು ಸಮುದಾಯಗಳ ಮೂಲ ಪುರುಷರ ಕುರಿತಾದ ಜೀವನಗಾಥೆ ಹಾಗೂ ಸಾಂಸ್ಕೃತಿಕ ನಾಯಕ-ನಾಯಕಿಯರ ಜೀವನ ಮತ್ತು ಅವರ ಸ್ಥಳೀಯ ಚರಿತ್ರೆಗೆ ಸಂಬಂಧಿಸಿದ ಚಾರಿತ್ರಿಕ ಅಂಶಗಳನ್ನು ಮುನ್ನೆಲೆಗೆ ತರಲು ಎಡವುತ್ತಿರುವುದಕ್ಕೆ ಚರಿತ್ರೆಕಾರರ ಮತ್ತು ವಿದ್ವಾಂಸರು, ಪಂಡಿತರು ಮೌಖಿಕ ದಾಖಲೆಗಳನ್ನು ಚರಿತ್ರೆಯ ರಚನೆಯಲ್ಲಿ ತೋರಿದ ನಿರ್ಲಕ್ಷ್ಯ ಧೋರಣೆ ಮೇಲ್ನೋಟಕ್ಕೆ ಕಾಣುತ್ತದೆ.

ಇತ್ತೀಚೆಗೆ ಬಹುಬಗೆಯಲ್ಲಿ ಚರ್ಚೆಗೆ ಒಳಗಾಗುತ್ತಿರುವ ಬಹುಸಂಸ್ಕೃತಿಯ ನೆಲೆಗಳು ಜನಪದ/ ಮೌಖಿಕ ಚರಿತ್ರೆಯ ನೆಲೆಗಳು ಕೆಳಸ್ತರದ ಜನರ/ಸಮುದಾಯಗಳ ಧ್ವನಿಗಳು ಸಬಾಲ್ಟರ್ನ್ ಅಧ್ಯಯನ ಕ್ರಮದ ವ್ಯಾಪ್ತಿಯಲ್ಲಿ ಪ್ರತಿಧ್ವನಿಗಳಾಗುತ್ತಿರುವುದನ್ನು ನಾವು ಗಮನಿಸಬಹುದು(ವಿಜಯ್ ಪೂಣಚ್ಚ ತಂಬಂಡ; ೨೦೦೯; ಪುಟ ೧) ಎಂದು ವಿಜಯ್ ಪೂಣಚ್ಚ ತಂಬಂಡ ಅವರು ಹೇಳಿರುವುದು ಸೂಕ್ತವೆನಿಸುತ್ತದೆ.

ಪ್ರತಿಯೊಂದು ಬುಡಕಟ್ಟಿನ ವ್ಯಕ್ತಿಯ ಹಿಂದೆ ಅವನದೇ ಆದ ಚರಿತ್ರೆಯೊಂದು ಚಲಾವಣೆ ಯಲ್ಲಿರುತ್ತದೆ. ಅಂತಹ ಚಾರಿತ್ರಿಕ ಸಂಗತಿಗಳ ಮೇಲೆ ಬೆಳಕು ಚೆಲ್ಲಲು ಅಲ್ಲಿಯೇ ಜೀವಂತಿಕೆಯಿಂದ, ವ್ಯಕ್ತಿಯಿಂದ-ವ್ಯಕ್ತಿಗೆ ಬಾಯಿಂದ-ಬಾಯಿಗೆ ಹರಿದಾಡುವ ಮೌಖಿಕ ಸಾಹಿತ್ಯದ ಗೀತೆಗಳ ಅಧ್ಯಯನ ನಡೆಯಬೇಕಿದೆ. ಅಂತಹ ಮಹಾನ್ ವೀರರ, ಸಾಹಸ-ಪರಾಕ್ರಮ, ಜೀವನಗಾಥೆಯಂಥ ನೈಜ ಜೀವಿತದ ಚಿತ್ರಣವನ್ನು ಗೀತ ಸಾಹಿತ್ಯದ ಮುಖಾಂತರ ಕಟ್ಟಿ ಕೊಡಬಹುದಾಗಿದೆ.

ಚರಿತ್ರೆಯಲ್ಲಿ ನಿರ್ಲಕ್ಷ್ಯಕ್ಕೆ ಒಳಗಾದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ನಾಯಕರಾದ ನಾಯಕನಹಟ್ಟಿಯ ತಿಪ್ಪೇಸ್ವಾಮಿ, ಗಾದಿರಿಪಾಲನಾಯಕ, ಒನಕೆ ಓಬವ್ವ, ಕೆಂಚವ್ವ-ಕಾಮವ್ವ, ಎತ್ತಪ್ಪ, ಜುಂಜಪ್ಪ ಮತ್ತು ಮದಕರಿನಾಯಕ, ಜಗಳೂರು ಪಾಪನಾಯಕನ ವಿಚಾರಗಳು ಗೀತ ಸಾಹಿತ್ಯ ಪ್ರಕಾರದ ಕೋಲಾಟ ಪದಗಳಲ್ಲಿ ಚಿತ್ರದುರ್ಗ, ಬಳ್ಳಾರಿ, ಸುತ್ತಮುತ್ತಲ ಆಂಧ್ರಗಡಿ

ಪ್ರಾಂತಗಳಲ್ಲಿ ಹರಿದಾಡುತ್ತಿವೆ. ಐತಿಹಾಸಿಕತೆಯ ಅಂಶಗಳನ್ನು ಒಳಗೊಂಡ ಕೋಲುಪದಗಳು ವಿಪುಲವಾಗಿ ಸಿಗುತ್ತಿರುವುದು ಕೋಲಾಟದ ಪ್ರಸಿದ್ಧಿಗೆ ಸಾಕ್ಷಿಯೆನಿಸಿದೆ.

ಜನಪದ ಗೀತೆ ಸಾಹಿತ್ಯದಲ್ಲಿ ಐತಿಹಾಸಿಕ ವಸ್ತುಗಳನ್ನೇ ಆಧಾರವಾಗಿಟ್ಟುಕೊಂಡು ರಚಿತವಾಗಿರುವ ಗೀತೆಗಳು ತುಂಬಾ ವಿರಳ. ಗೀತಸಾಹಿತ್ಯದ ಪ್ರಕಾರವಾದ ಕೋಲುಪದಗಳಲ್ಲಿ ಚಾರಿತ್ರಿಕತೆಯ ಕುರುಹುಗಳು ವಿಪುಲವಾಗಿ ದೊರೆಯುತ್ತವೆ. ಚಿತ್ರದುರ್ಗ ಪರಿಸರದಲ್ಲಿ ಕೋಲಾಟ ಕಲೆಯು ತುಂಬಾ ಪ್ರಸಿದ್ಧಿ ಪಡೆದಿದೆ. ಪ್ರತಿ ಹಳ್ಳಿಯಲ್ಲೂ ಕೋಲಾಟ ತಂಡಗಳು ಕಾಣಸಿಗುತ್ತವೆ. ಇತರೆ ಪದ್ಯ ಸಾಹಿತ್ಯವಾದ ಸೋಬಾನೆ, ಭಜನೆ, ಪದಗಳಂಥ ಇತ್ಯಾದಿ ಗೀತಸಾಹಿತ್ಯ ಪ್ರಕಾರಗಳಿಗಿಂತ ಕೋಲಾಟ ಪದಗಳ ಗೀತಸಾಹಿತ್ಯದಲ್ಲಿ ಹಲವು ರಾಜ-ಮಹಾರಾಜರ, ಸಾಂಸ್ಕೃತಿಕ-ನಾಯಕ-ನಾಯಕಿಯರ, ಸಾಮಂತ ದೊರೆಗಳ, ಅವಧೂತರ ಕುರಿತಾಗಿ ಅಧಿಕೃತ ದಾಖಲೆಗಳೆನಿಸಿದೆ. ಲಿಖಿತ ದಾಖಲೆಗಳಾದ ಶಾಸನಗಳು, ಸ್ಥಳೀಯ ಹಸ್ತಪ್ರತಿಗಳು, ಗ್ರಂಥಗಳು, ನಾಣ್ಯಗಳು ನೀಡದ ಅದೆಷ್ಟೋ ಐತಿಹಾಸಿಕ ವಿಚಾರಗಳನ್ನು ಕೋಲುಪದಗಳು ತೆರೆದಿಡುತ್ತವೆ.

**೩.೫.೩.೧. ನಾಯಕನಹಟ್ಟಿ ತಿಪ್ಪೇಸ್ವಾಮಿಯ ಚಾರಿತ್ರಿಕತೆ**

ಚಿತ್ರದುರ್ಗ ಇತಿಹಾಸದ ಸ್ಥಳೀಯ ಚರಿತ್ರೆಯಲ್ಲಿ ತುಂಬಾ ಮಹತ್ತರವಾದ ಅನುಭಾವಿಕ ವ್ಯಕ್ತಿತ್ವವೆಂದರೆ ನಾಯಕನಹಟ್ಟಿಯ ತಿಪ್ಪೇಸ್ವಾಮಿ. ಈತನ ನೈಜ ಜೀವನದ ಅಧಿಕೃತ ದಾಖಲೆಗಳೆನಿಸಿದ ಕುರುಹುಗಳು ಇಂದಿಗೂ ದೊರೆಯದಿರುವುದು ವಿಪರ್ಯಾಸ ಮತ್ತು ಲಿಖಿತ ದಾಖಲೆಗಳು ನಿಗೂಢವಾಗಿರುವುದು ಸಂಶೋಧಕರಲ್ಲಿ ಕುತೂಹಲವನ್ನು ಮೂಡಿಸುತ್ತದೆ.

ಈ ಅವಧೂತನ ಚಾರಿತ್ರಿಕತೆಯು ಲಿಖಿತ ದಾಖಲೆಗಳಿಗಿಂತ ಹೆಚ್ಚಾಗಿ ಜನಪದರ ಸಹಜ ಹಾಡುಗಳೆನಿಸಿದ ಕೋಲಾಟ ಪದಗಳಲ್ಲಿ, ಸೋಬಾನೆ ಪದಗಳಲ್ಲಿ ಭಜನೆ ಪದಗಳಲ್ಲಿಯೇ ಈತನ ನೈಜ ಜೀವಿತದ ದಾಖಲೆಗಳು ಸಿಗುತ್ತವೆ. ಕೋಲಾಟ ಪದಗಳಂಥ ಜನಪದರ ಸಹಜ ಹಾಡುಗಳಲ್ಲಿ ತಿಪ್ಪೇಸ್ವಾಮಿ ಕುರಿತ ಮಾಹಿತಿಯು ಸಮೃದ್ಧವಾಗಿ ದೊರೆಯುತ್ತದೆ.

ಹಟ್ಟಿಯ ತಿಪ್ಪಯ್ಯ ಜಗಲೂರು ಪಾಪಯ್ಯ
ಸಿಕ್ಕೇರಿ ಕೋಡಿ ಬಸವಯ್ಯ - ಇವ್ರು ಮೂವಾರು
ಲೆತ್ತನ್ಯಾಡ್ಯಾರೆ ಕೆರಿಯಾಗೆ

(ಹನುಮಂತರಾಯಪ್ಪ.ಕೆ.; ೨೦೦೯; ಪುಟ ೨೧೮).

ಈ ಗೀತೆಯಲ್ಲಿ ತಿಪ್ಪೇಸ್ವಾಮಿಯ ಸಂಗಡ ಕೆರೆಯಲ್ಲಿ ಲೆತ್ತನಾಡಿದವರು(ಪಗಡೆಯಾಟ) ಮ್ಯಾಸಬೇಡರ ಸಾಂಸ್ಕೃತಿಕ ನಾಯಕನಾದ ಜಗಳೂರು ಪಾಪನಾಯಕ. ಈತನು ತಿಪ್ಪೇಸ್ವಾಮಿಯ ಸಂಬಂಧಿಯೋ ಅಥವಾ ಬಾಲ್ಯ ಸ್ನೇಹಿತನೋ? ಆಗಿರಬಹುದೆಂದು ಈ ಹಾಡಿನ ಮುಖಾಂತರ ಊಹೆ ಮಾಡಬಹುದು. ಒಂದು ವೇಳೆ ಈ ಅವಧೂತನು ಜಗಳೂರು ಪಾಪನಾಯಕನ ಸಂಬಂಧಿಯೇ ಆಗಿದ್ದರೆ ಮ್ಯಾಸಬೇಡ(ನಾಯಕ) ಕುಲಕ್ಕೆ ಸೇರಿದವನಾಗುತ್ತಾನೆ. ಇದಕ್ಕೆ ಪುಷ್ಠಿ

ನೀಡುವಂತೆ ಇಂದಿಗೂ ನಾಯಕನಹಟ್ಟಿಯ ತಿಪ್ಪೇಸ್ವಾಮಿ ಜೀವೈಕ್ಯನಾಗಿರುವುದು ಅಥವಾ ಜೀವಸಮಾಧಿಯಾಗಿರುವ ಹೊರಮಠದಲ್ಲಿನ ಪೂಜಾಕಾರ್ಯಗಳನ್ನು, ವಿಧಿವಿಧಾನಗಳನ್ನು ನೆರವೇರಿಸುವುದು ಬೇಡನಾಯಕ ಸಮುದಾಯಕ್ಕೆ ಸೇರಿದವರು. ಹಾಗಾಗಿ ತಿಪ್ಪೇಸ್ವಾಮಿಯು ಬೇಡರ ಕುಲಮೂಲಕ್ಕೆ ಸೇರಿದವನಿರಬೇಕೆಂಬ ಊಹಾಪೋಹಗಳು ಏಳುವುದಂತೂ ದಿಟ.

ಪ್ರತಿ ವರ್ಷ ಮಾರ್ಚ್ ತಿಂಗಳಲ್ಲಿ ನಡೆಯುವ ತಿಪ್ಪೇಸ್ವಾಮಿಯ ಜಾತ್ರೆಯಲ್ಲಿ ಈ ಅವಧೂತನು ಜೀವ ಸಮಾಧಿಯಾಗಿರುವ ಹೊರಮಠದ ಸುತ್ತಮುತ್ತಣ ಪ್ರದೇಶಗಳಲ್ಲಿ ಇಂದಿಗೂ ಮದ್ಯ-ಮಾಂಸಗಳನ್ನೇ ಎಡೆಯಾಗಿ ಸಮರ್ಪಣೆ ಮಾಡುವುದು ಕಂಡುಬರುತ್ತದೆ ಹಾಗೂ ನಾಯಕನಹಟ್ಟಿಯ ಸುತ್ತಮುತ್ತಲ ಹಳ್ಳಿಗಳಲ್ಲಿ ಶೇಕಡ ನೂರಕ್ಕೆ ಎಂಬತ್ತರಷ್ಟು ಮಂದಿ ಬೇಡರೇ ವಾಸ ಮಾಡುತ್ತಿದ್ದಾರೆ ಹಾಗೂ ಬೇಡ ಸಮುದಾಯದ ಸಾಂಸ್ಕೃತಿಕ ವೀರ ಜಗಳೂರು ಪಾಪನಾಯಕನ ಸಂಗಡ ಮಗುವಾಗಿದ್ದಾಗ ಪಗಡೆಯಾಟ ಆಡಿರುವ ಕುರುಹುಗಳು ಕೂಡ ಮೌಖಿಕ ಸಾಹಿತ್ಯದಲ್ಲಿ ಸಿಗುತ್ತವೆ. ಹಾಗಾಗಿ ತಿಪ್ಪೇಸ್ವಾಮಿಯು ಬೇಡನಾಗಿರುವ ಸಾಧ್ಯತೆಗಳನ್ನು ಅಲ್ಲಗಳೆಯುವಂತಿಲ್ಲ. ಅನಂತರ ದಿನಗಳಲ್ಲಿ ಈ ಅವಧೂತನನ್ನು ವೀರಶೈವೀಕರಣಗೊಳಿಸಿರಬಹುದು. ಈ ಎಲ್ಲಾ ಅಂಶಗಳು ತಿಪ್ಪೇಸ್ವಾಮಿಯನ್ನು ಬೇಡರ ಕುಲಕ್ಕೆ ಸೇರಿದವನೆಂಬ ನಿಷ್ಠುರ ಸತ್ಯವನ್ನು ಕೋಲುಪದಗಳು ಬಿಚ್ಚಿಡುತ್ತವೆ.

ತಿಪ್ಪೇಸ್ವಾಮಿಯನ್ನು ಇಂದಿಗೂ ನಾಯಕನಹಟ್ಟಿಯ ಪರಿಸರದಲ್ಲಿ ತಿಪ್ಪಯ್ಯ ಹಟ್ಟಿ ತಿಪ್ಪಯ್ಯ, ತಿಪ್ಪೇಶ ಮತ್ತು ತಿಪ್ಪಣ್ಣ ಎಂಬ ಹೆಸರುಗಳಿಂದ ಕರೆಯುವುದನ್ನು ಕಾಣಬಹುದು. ಈ ಹೆಸರುಗಳ ಮೂಲವನ್ನು ಕೋಲಾಟ ಪದಗಳಲ್ಲಿ ವಿಶ್ಲೇಷಿಸಿದಾಗ ತಿಪ್ಪೇಸ್ವಾಮಿ ಹೆಸರಿನ ಮೂಲವನ್ನು ಉಲ್ಲೇಖಿಸುವ ಕೋಲುಪದಗಳು ನಾಯಕನಹಟ್ಟಿ ಪರಿಸರದಲ್ಲಿ ಹೆಚ್ಚಾಗಿ ಸಿಗುತ್ತಿರುವುದು ಗಮನಾರ್ಹ ಸಂಗತಿ. ಆದರೆ ಕೆಲವು ದಶಕಗಳಿಂದೀಚೆಗೆ ತಿಪ್ಪಯ್ಯ, ತಿಪ್ಪಣ್ಣ ಎಂಬ ಹೆಸರುಗಳಿಂದ ಕರೆಯದೆ ತಿಪ್ಪೇರುದ್ರಸ್ವಾಮಿ, ತಿಪ್ಪೇಸ್ವಾಮಿ, ರುದ್ರಪ್ಪ ಎಂಬ ಹೆಸರುಗಳಿಂದ ಕರೆಯುತ್ತಿರುವುದನ್ನು ಗಮನಿಸಿದರೆ ತಿಪ್ಪಯ್ಯನನ್ನು ಮೇಲ್ಜಾತಿಯೊಂದು ತನ್ನ ಜಾತಿಗೆ ಸೇರಿಸಿಕೊಳ್ಳುವುದರ ಮೂಲಕ ವೈದೀಕರಿಸಿ ಕೊಂಡಿರುವುದು ಕಂಡುಬರುತ್ತದೆ.

"ಶಿಷ್ಠ ಸಂಸ್ಕೃತಿ ಆರೋಪಿಸುತ್ತಿರುವಂತೆ ಅವನೊಬ್ಬ ತಿಪ್ಪೇರುದ್ರಸ್ವಾಮಿ ಅಲ್ಲ, ಅವನೊಬ್ಬ ಜನಪದ ಸಂಸ್ಕೃತಿಯ ಸ್ನಿಗ್ಧ -ಮುಗ್ಧ ಭಂಗಿ ಮಾಂಸದ ಅವಧೂತ 'ತಿಪ್ಪಯ್ಯ'ನೇ ಇರಬೇಕೆಂದು ಇತಿಹಾಸದ ಮರಳಲ್ಲಿ ಅಸ್ಪಷ್ಟ ಹೆಜ್ಜೆಗಳು ಹೇಳುವಂತಿಲ್ಲವೆ"? ಎಂದು ಮೀರಾಸಾಬಿಹಳ್ಳಿ ಶಿವಣ್ಣ ಅಭಿಪ್ರಾಯಪಟ್ಟಿರುವುದು ಸಮಂಜಸವೆನಿಸುತ್ತದೆ(ಮೀರಾಸಾಬಿಹಳ್ಳಿ ಶಿವಣ್ಣ; ಪುಟ ೭೩).

ಮೀರಾಸಾಬಿಹಳ್ಳಿ ಶಿವಣ್ಣ ಅವರ ಈ ಪ್ರಶ್ನಾರ್ಥ ವ್ಯಾಖ್ಯಾನಕ್ಕೆ ಪುಷ್ಠಿ ನೀಡುವಂತೆ ತಿಪ್ಪೇಸ್ವಾಮಿಯ ನಿಜ ನಾಮವಾದ ತಿಪ್ಪಣ್ಣ, ತಿಪ್ಪಯ್ಯ ಹೆಸರುಗಳು ಉಲ್ಲೇಖವಿರುವ ಹಲವು ಕೋಲಾಟ ಪದಗಳು ನಾಯಕನಹಟ್ಟಿ ಪರಿಸರದ, ಜನಪದರ ಸಹಜ ಹಾಡುಗಳಲ್ಲಿ ಹರಿದಾಡುತ್ತಿರುವುದು ಕಾಣಬರುತ್ತದೆ.

ತಿಪ್ಪೇಸ್ವಾಮಿಯ ಹೆಸರನ್ನು 'ತಿಪ್ಪಯ್ಯ' ಎಂದು ಉಲ್ಲೇಖಿಸಿರುವ ಕೋಲು ಪದ ಇದು. ಜಡೇ ಕೋಲಾಟದ ಪ್ರಕಾರಕ್ಕೆ ಸೇರಿದೆ ಹಾಗೂ ದೇವರುಗಳನ್ನು ಸ್ತುತಿಸುವ ಪ್ರಾರ್ಥನಾ ಗೀತೆಯಾಗಿದೆ.

ಜಡೆಯನಾಕಿರಣ್ಣಗಳಿರಾ ಜಡೆಯನಾಕಿರೊ
ಸ್ವಾಮಿ ಜಡೆಯನಾಕಿರೋ ||ಪ||
ಸ್ವಾಮಿ ಬೋಸಯ್ಯಾಗೆ ಜಡೆಯಾನಾಕಿರೋ
ಸ್ವಾಮಿ ತಿಪ್ಪಯ್ಯಾಗೆ ಜಡೆಯಾನಾಕಿರೋ
(ವಕ್ತೃ: ಚಿತ್ತಯ್ಯ, ನೆಲಗೇತನಹಟ್ಟಿ, ಚಳ್ಳಕೆರೆ ತಾಲ್ಲೂಕು ಚಿತ್ರದುರ್ಗ ಜಿಲ್ಲೆ).

ಹೀಗೆ ಮ್ಯಾಸಬೇಡ ಬುಡಕಟ್ಟಿಗೆ ಸೇರಿದ ಸಾಂಸ್ಕೃತಿಕ-ನಾಯಕರುಗಳನ್ನು ಸ್ತುತಿಸುವ ಕಾಲಕ್ಕೆ ತಿಪ್ಪೇಸ್ವಾಮಿಯನ್ನು ಸ್ತುತಿಸುವುದನ್ನು ನೋಡಿದರೆ ಈತನು ಬೇಡರ ಕುಲಕ್ಕೆ ಸೇರಿದವನೆಂದು ಖಾತ್ರಿಯಾಗುತ್ತದೆ. ಹಾಗೆಯೇ ಈತನ ನಿಜ ನಾಮವಾದ 'ತಿಪ್ಪಯ್ಯ' ಹೆಸರಿನ ಪ್ರಸ್ತಾಪವು ಬಂದಿದೆ. ಹಾಗಾಗಿ ಈತನ ನಿಜವಾದ ಹೆಸರು ತಿಪ್ಪಯ್ಯ ಅಥವಾ ತಿಪ್ಪಣ್ಣನೇ ಹೊರತು ತಿಪ್ಪೇರುದ್ರಸ್ವಾಮಿ ಅಲ್ಲ ಎಂಬುದನ್ನು ಈ ಕೋಲುಪದದಿಂದ ತಿಳಿಯಬಹುದಾಗಿದೆ.

**ತಿಪ್ಪೇಸ್ವಾಮಿಯನ್ನು 'ತಿಪ್ಪಣ್ಣ' ಎಂದು ಉಲ್ಲೇಖಿಸಿರುವ ಇನ್ನೊಂದು ಕೋಲುಪದ**

ವಿಚಾರದೊಳಗೆ ಇದು ದೊಡ್ಡಾಚಾರ, ನಾಯ್ಕನಹಟ್ಟಿ ವಿಚಾರ
ನಾಯ್ಕನಟ್ಟಿಯೊಳಗೆ ಮೂರ್ತಿಯಾದನು 'ತಿಪ್ಪಣ್ಣ' ದೇವರಾ
ಆತ್ವಾರ ಸೋಮಾರ ವರಕಾಕಿದರೆ ಥೇರಿನ ಸ್ವಾಮಾನಾ
(ಮುತ್ತಯ್ಯ ಎಸ್.ಎಂ.; ೨೦೧೨; ಪುಟ ೪೪)

ಈ ಗೀತೆ ನಾಯಕನಹಟ್ಟಿಯ ತಿಪ್ಪೇಸ್ವಾಮಿಯ ಜಾತ್ರೋತ್ಸವವನ್ನು ಮಾಡುವಂತಹ ಸಂದರ್ಭದಲ್ಲಿ 'ತಿಪ್ಪಣ್ಣ'ನ ತೇರಿನ ಸಾಮಾನುಗಳನ್ನು ಬಿಚ್ಚಿ ಶುಚಿಯಾಗಿ ನೀರಿನಿಂದ ತೊಳೆದು ಮತ್ತೆ ಅವುಗಳನ್ನು ತೇರಿಗೆ ಜೋಡಿಸುವ ದೃಶ್ಯವನ್ನು ಈ ಗೀತೆ ನೆನಪಿಗೆ ತರುತ್ತದೆ ಹಾಗೂ ತಿಪ್ಪಣ್ಣನಿಗೆ ಭಾನುವಾರ ಮತ್ತು ಸೋಮವಾರಗಳಂದು ವಿಶೇಷವಾಗಿ ಪೂಜೆ ಪುನಸ್ಕಾರಗಳು ನಡೆಯುತ್ತವೆ ಎಂಬುದನ್ನು ತಿಳಿಸುತ್ತದೆ. ಹಾಗೆಯೇ ಈ ಪವಾಡ ಪುರುಷನ ನಿಜನಾಮವಾದ 'ತಿಪ್ಪಣ್ಣ' ಎನ್ನುವ ಹೆಸರನ್ನು ಇಲ್ಲಿ ಉಲ್ಲೇಖಿಸಿರುವುದನ್ನು ಕಾಣಬಹುದು.

ಇನ್ನೊಂದು ಕೋಲುಪದದಲ್ಲಿ ತಿಪ್ಪೇಸ್ವಾಮಿಯ ಹೆಸರು 'ಹಟ್ಟಿ ತಿಪ್ಪೇಶ' ಎಂದು ಉಲ್ಲೇಖಿಪಿರುವುದನ್ನು ಗಮನಿಸಬಹುದು. ಇದು ಕೋಲಾಟದಲ್ಲಿ ಗಣಸ್ತುತಿಗೆ ಸಂಬಂಧಿಸಿದಂಥ ಗೀತೆಯಾಗಿದೆ.

ಶರಣನ್ನಿರಣ್ಣಯ್ಯ ಶರಣನ್ನಿರೋ
ಮಾಮುದ್ದಿ ಮಲಕಿನಾ ಕೋಲನ್ನಿರೋ ||ಪ||

ಶರಣನ್ನಿರಣ್ಣಯ್ಯಾ ಶರಣನ್ನಿರೊ
ಸ್ವಾಮಿ ಮಾರಮ್ಮಗೆ ಶರಣೆನ್ನಿರೊ
ನಾಯ್ಕನಟ್ಟಿ ತಿಪ್ಪೇಶಗೆ ಶರಣನ್ನಿರೊ

(ವಕ್ತೃ: ಮಾರಮ್ಮ; ಮಾಕನಡಕು; ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ)

ಕೋಲಾಟ ಪ್ರದರ್ಶನವನ್ನು ಆರಂಭಿಸಿ ಪ್ರದರ್ಶಿಸಿದ ನಂತರ ಆ ದಿನದ ಮಟ್ಟಿಗೆ ಮುಕ್ತಾಯ ಮಾಡುವ ಸಂದರ್ಭದಲ್ಲಿ ತಿಪ್ಪೇಸ್ವಾಮಿಯನ್ನು ಸ್ತುತಿಸುವುದರ ಜೊತೆಗೆ ಸಾಂಸ್ಕೃತಿಕ ನಾಯಕರನ್ನು ಪ್ರಾರ್ಥಿಸುವುದು ಮತ್ತು ಶಕ್ತಿದೇವತೆಗಳನ್ನು ಪೂಜಿಸುವಂತಹ ಉಲ್ಲೇಖ ಈ ಕೋಲುಪದದಲ್ಲಿ ಬರುತ್ತದೆ. ತಿಪ್ಪೇಸ್ವಾಮಿಯ ನಿಜನಾಮವಾದ 'ಹಟ್ಟಿ ತಿಪ್ಪೇಶ' ಎಂದು ಉಲ್ಲೇಖಿತಗೊಂಡಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ.

ಹೀಗೆ ತಿಪ್ಪೇಸ್ವಾಮಿಯ ನಿಜನಾಮವು ಹಟ್ಟಿ ತಿಪ್ಪೇಶ, ತಿಪ್ಪಯ್ಯ ಮತ್ತು ತಿಪ್ಪಣ್ಣ ಎಂದು ಕೋಲುಪದಗಳಲ್ಲಿ ಉಲ್ಲೇಖಿತವಾಗಿರುವುದನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಈತನ ನೈಜ ಜೀವಿತದ ದಾಖಲೆಗಳನ್ನು ಮರೆಮಾಚಿ ತಿರುಚಲಾಗಿದೆ ಎಂದು ಹೇಳಬಹುದು. ಪ್ರಸ್ತುತ ಈ ಅವಧೂತನ ಹೆಸರನ್ನು ಶ್ರೀ ಗುರು ತಿಪ್ಪೇರುದ್ರಸ್ವಾಮಿ, ರುದ್ರಪ್ಪ, ತಿಪ್ಪೇಸ್ವಾಮಿ ಎಂಬ ಹೆಸರುಗಳಿಂದ ಕರೆದು ಶೈವೀಕರಣಗೊಳಿಸಿರುವ ಸಂಗತಿ ಮೇಲ್ನೋಟಕ್ಕೆ ಕಾಣುವಂಥದ್ದಾಗಿದೆ.

ಹಟ್ಟಿ ತಿಪ್ಪೇಶ, ತಿಪ್ಪಯ್ಯ ಮತ್ತು ತಿಪ್ಪಣ್ಣ ಎನ್ನುವ ಹೆಸರುಗಳು ಕೇವಲ ತಳಸಮುದಾಯಗಳಲ್ಲಿ ಮಾತ್ರ ಕಾಣಸಿಗುತ್ತವೆ. ಇಂದಿಗೂ ತಿಪ್ಪೇಸ್ವಾಮಿಯ ಹೊರಮಠ ಮತ್ತು ಒಳಮಠಗಳ ಸುತ್ತಮುತ್ತಲು ಸಾಧು-ಸಂತರು, ಸನ್ಯಾಸಿಗಳು ಈ ಪವಾಡ ಪುರುಷನನ್ನು ಕರೆಯುವುದೇ ತಿಪ್ಪಯ್ಯ, ತಿಪ್ಪಣ್ಣ ಎಂಬ ಹೆಸರುಗಳಿಂದ ಎಂಬುದು ಕಟುಸತ್ಯವಾಗಿದೆ. ಇತಿಹಾಸದಲ್ಲಿ ಸ್ಥಳೀಯ ಚಾರಿತ್ರಿಕತೆಯ ದಾಖಲೆಗಳನ್ನು ದಾಖಲಿಸಲು ಮರೆತ ಅದೆಷ್ಟೋ ಘಟನೆಗಳನ್ನು, ಸತ್ಯಸಂಗತಿಗಳನ್ನು, ನೈಜ ಚಿತ್ರಣವನ್ನು ಕೋಲುಪದಗಳು ತೆರೆದಿಡುತ್ತವೆ. ಈ ಕೋಲುಪದಗಳು ಚರಿತ್ರೆಯ ಅಧ್ಯಯನಕ್ಕೆ ಪೂರಕ ಆಕರಗಳಾಗಿವೆ ಹಾಗೂ ಹಟ್ಟಿ ತಿಪ್ಪಯ್ಯನ ನೈಜ ಜೀವನದ ಅದೆಷ್ಟೋ ಸಂಗತಿಗಳು ಜೀವಂತವಾಗಿರುವುದು ಜಾನಪದದಲ್ಲೇ ಎಂಬುದಕ್ಕೆ ಈ ಕೋಲುಪದಗಳೇ ಸಾಕ್ಷಿಯಾಗಿವೆ.

ಕೋಲುಪದಗಳು ನಾಯಕನಹಟ್ಟಿ ತಿಪ್ಪೇಸ್ವಾಮಿಯ ಜೀವಿತದ ಐತಿಹಾಸಿಕ ಅಂಶಗಳ ಹೊರತಾಗಿಯೂ ಚಿತ್ರದುರ್ಗದ ಪ್ರಸಿದ್ಧ ಪಾಳೇಗಾರ ಮದಕರಿನಾಯಕ, ವೀರವನಿತೆ ಒನಕೆ ಓಬವ್ವ, ಗಾದಿರಿಪಾಲನಾಯಕ ಮುಂತಾದವರ ಸಾಹಸ - ಪರಾಕ್ರಮ, ತ್ಯಾಗ-ಬಲಿದಾನಗಳ ಚಿತ್ರಣವನ್ನು ಕಟ್ಟಿಕೊಡುತ್ತವೆ.

ಚಿತ್ರದುರ್ಗ ಎಂದಾಕ್ಷಣ ನೆನಪಿಗೆ ಬರುವುದು ಹೆಬ್ಬಂಡೆಗಳಿಂದ ಕೂಡಿದ ಏಳುಸುತ್ತಿನ ಕೋಟೆ, ರಾಕ್ಷಸಾಕೃತಿಯಂತೆ ಮೈವೆತ್ತ ಕಲ್ಲುಬಂಡೆಯ ಬೆಟ್ಟಗಳು, ಮದಕರಿನಾಯಕನ ಸಿಂಹರೂಪದಂಥ ವ್ಯಕ್ತಿತ್ವ, ಪಾಳೆಯಗಾರರ ಸಾಹಸಗಾಥೆ, ಒನಕೆ ಓಬವ್ವನ ಸಾಹಸ-ಶೌರ್ಯ ಪರಾಕ್ರಮದ ಕಥೆಗಳು, ಗೀತೆಗಳು, ನಮ್ಮ ಕಣ್ಣ ಮುಂದೆ ಬಂದು ನಿಲ್ಲುತ್ತವೆ. ಚಿತ್ರದುರ್ಗದ

ನಾಯಕರ ಸಾಹಸ-ಜೀವನಗಾಥೆಯನ್ನು ಚಿತ್ರಿಸುವ ಸೋಬಾನೆ ಗೀತೆಗಳು, ಭಜನೆ ಪದಗಳು, ಕೋಲುಪದಗಳೂ ಸೇರಿ ಸಾವಿರಾರು ಹಾಡುಗಳು ಜನಮಾನಸದಲ್ಲಿ ಅಚ್ಚಳಿಯದಂತೆ ನೆಲೆನಿಂತಿವೆ. ಜನಪದರ ಹಾಡುಗಳಲ್ಲಿ ಅತ್ಯಂತ ಜನಪ್ರಿಯ ಪ್ರಕಾರವಾದ ಕೋಲುಪದಗಳಲ್ಲಿ ಇವರ ಸಾಹಸಮಯ ಬದುಕಿನ ಶೈಲಿ, ತ್ಯಾಗಬಲಿದಾನದ ಚಿತ್ರಣವನ್ನು ಇತಿಹಾಸ ಮತ್ತು ಜಾನಪದಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸುವುದು ಸೂಕ್ತವೆನಿಸುತ್ತದೆ. "ಕೋಲುಪದಗಳಲ್ಲಿ ಇಂದಿಗೂ ಚಿತ್ರದುರ್ಗವನ್ನು ಚಿಂತರಕಲ್ಲು ಎಂದೇ ಕರೆಯಲಾಗಿದೆ"(ವೀರಾಸಾಬಿಹಳ್ಳಿ ಶಿವಣ್ಣ; ಪುಟ ೭೬).

### ೩.೫.೩.೨. ಮದಕರಿನಾಯಕ

ಚಿತ್ರದುರ್ಗ ಎಂದಾಕ್ಷಣ ಮದಕರಿನಾಯಕ, ಮದಕರಿನಾಯಕ ಎಂದಾಕ್ಷಣ ಚಿತ್ರದುರ್ಗ ನೆನಪಾಗುವುದು ಸಹಜ. ದುರ್ಗದ ಪಾಳೆಯಗಾರರಲ್ಲಿ ಗತ್ತು-ಗಮ್ಮತ್ತಿನೊಂದಿಗೆ ಹೋರಾಡಿ ತನ್ನ ಹೆಸರನ್ನು ಕರ್ನಾಟಕದಾಚೆಗೂ ವಿಸ್ತರಿಸಿಕೊಂಡ ಪಾಳೆಯಗಾರನೆಂದರೆ ಮದಕರಿನಾಯಕ. ಈತನ ಸಾಹಸ ಜೀವನಗಾಥೆಯು ಜನಪದರ ಕಥೆ, ಗಾದೆ, ಹಾಡುಗಳಲ್ಲಿ ತುಂಬಾ ವಿಪುಲವಾಗಿ ಸಿಗುವುದು ನೋಡಿದರೆ ಈತನ ಪ್ರಸಿದ್ಧಿಯ ಅರಿವಾಗುತ್ತದೆ. ತಿಪರಿಯ ಪ್ರಕಾರಕ್ಕೆ ಸೇರಿದ ಕೋಲಾಟ ಪದಗಳಲ್ಲಿ ಈತನ ಕುರಿತಾಗಿ ಚಿತ್ರದುರ್ಗ, ಬಳ್ಳಾರಿ, ತುಮಕೂರು, ದಾವಣಗೆರೆ ಪರಿಸರದಲ್ಲಿ ವಿಪುಲವಾದ ಕೋಲಾಟ ಸಾಹಿತ್ಯವು ಸಿಗುತ್ತದೆ.

ದುರ್ಗದ ಸುತ್ತಮುತ್ತ ಸಣ್ಣ-ಪುಟ್ಟ ಪಾಳೇಪಟ್ಟುಗಳನ್ನು ಕಟ್ಟಿಕೊಂಡು ಆಳ್ವಿಕೆ ಮಾಡುತ್ತಿದ್ದ ಪಾಳೇಯಗಾರರಿಗೆ, ಸಾಮಂತರಿಗೆ, ಹಟ್ಟಿ ಪಾಳೆಯಗಾರರಿಗೆ ಮದಕರಿನಾಯಕನು ಸಿಂಹಸ್ವಪ್ನವಾಗಿದ್ದನು. ಈತನ ಸಾಹಸ-ಶೌರ್ಯ-ಪರಾಕ್ರಮಗಳು ಸಹಜ ಹಾಡುಗಳಾಗಿ ಜನಪದರ ನುಡಿಗಳಿಂದ ಬಾಯಿಂದ-ಬಾಯಿಗೆ, ಪೀಳಿಗೆಯಿಂದ ಪೀಳಿಗೆಗೆ ಹರಿದುಬಂದಿವೆ. ಮದಕರಿನಾಯಕನ ಸಾಹಸ - ವೀರತ್ವಗಳು ಕೋಲುಪದಗಳಲ್ಲಿ ನಲಿದಾಡಿರುವುದನ್ನು ಗಮನಿಸಬಹುದು.

ಚಿತ್ರದುರ್ಗ ಪರಿಸರದ ಸುತ್ತಮುತ್ತಲೂ ಮದಕರಿನಾಯಕನ ಸಾಧನೆಗಳನ್ನು ಗುಣಗಾನ ಮಾಡಿರುವಂಥ ಕೋಲುಪದ ಈ ಭಾಗದಲ್ಲಿ ಹೆಚ್ಚು ಪ್ರಚಲಿತದಲ್ಲಿದೆ.

ಕೋಲನಿ ಕೋಲನ್ನ ಕೋಲೆ ಸಿಂಗಂಧಾದಿ
ಕೋಲನಿ ಕೋಲನ್ನ ಕೋಲೆ ||ಪ||

ಸೀರೆಯಗೆದ್ದ ಚಿನ್ನದುಂಗುರ ಗೆದ್ದ
ಮಾತಿಲಿ ಗೆದ್ದ ಮಲೆನಾಡ ಮದಿಕೇರಿ
ಮಾತಿಗೆ ಗೆದ್ದ ದುರುಗವು ರನ್ನಾದಿ
ಕೋಲನಿ ಕೋಲನ್ನ ಕೋಲೆ ಸಿರಿಗಂಧಾದಿ ||ಪ||

ಕೋಲನಿ ಕೋಲನ್ನ ಕೋಲೆ
ಮೇಲೆ ದುರ್ಗದ ಮೇಲೆ ಜೋಡೆರಡು ಫೀರಂಗಿ

ನೋಡೆ ಸಿದ್ದವ ನಿನ ಮಗ ಮದಿಕೇರಿ
ಸೀರೆಯ ಗೆದ್ದು ಬರುತಾನೆ ರನ್ನಾದಿ
ಕೋಲನಿ ಕೋಲನ್ನ ಕೋಲೆ ಸಿರಿಗಂಧಾದಿ ||ಪ||
ಕೋಲನಿ ಕೋಲನ್ನ ಕೋಲೆ

(ವಕ್ತೃ: ಪಾಪಣ್ಣ, ಪೆತ್ತಮರನಹಟ್ಟಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಈ ಗೀತೆಯಲ್ಲಿ ಮದಕರಿನಾಯಕನು ತನ್ನ ಸಾಹಸ ಶೌರ್ಯ ಪರಾಕ್ರಮಗಳಿಂದ ನಿಡಿಗಲ್ಲು ಮತ್ತು ಮಲೆನಾಡಿನ ಸುತ್ತಮುತ್ತಣ ಪಾಳೆಯಗಾರರ ಪ್ರಾಂತಗಳನ್ನು ಗೆದ್ದು ತನ್ನ ಆಳ್ವಿಕೆಗೆ ಒಳಪಡಿಸಿಕೊಂಡಿರುವ ವಿಚಾರವನ್ನು ಪ್ರಸ್ತಾಪಿಸುತ್ತದೆ. ಹಾಗೆಯೇ ಹಾಡಿನಲ್ಲಿ 'ಫೀರಂಗಿ' ಎನ್ನುವ ವಿವರವಿರುವ ಐತಿಹಾಸಿಕ ದಾಖಲೆಯು ಸಿಗುತ್ತದೆ. 'ಫೀರಂಗಿ' ಶಬ್ದವಿರುವ ಹಾಡುಗಳು ಅಥವಾ ದಾಖಲೆಗಳು ಸಿಗುವುದು ತುಂಬಾ ವಿರಳವೆಂದೇ ಹೇಳಬಹುದು.

ಮದಕರಿನಾಯಕನನ್ನು ನಿದ್ದೆಯಿಂದ ಎದ್ದೇಳಿಸುವ ಹಾಡು ಈ ಭಾಗದಲ್ಲಿ ಅತ್ಯಂತ ಪ್ರಸಿದ್ಧಿ ಪಡೆದಿದೆ.

ಎದ್ದೇಳೋ ಮದಕೇರಿ ಎಷ್ಟೊತ್ತು ಮಲಗಿದ್ದಿ
ವಾಲೆ ಬಂದಾವೆ ನಿಮ್ಮ ಚದುರೀಗೆ

(ಮೀರಾಸಾಬಿಹಳ್ಳಿ ಶಿವಣ್ಣ; ಪುಟ ೮೦)

ದೇವರನ್ನು ನಿದ್ರೆಯಿಂದ ಏಳಿಸುವ ಸುಪ್ರಭಾತದ ಪ್ರಾರ್ಥನೆಯನ್ನು ನೆನಪಿಗೆ ತರುವುದರೊಂದಿಗೆ "ರಾಜಾ ಪ್ರತ್ಯಕ್ಷ ದೇವತಾ" ಎಂದು ಆ ಜನ ಭಾವಿಸಿದ್ದನ್ನು ಇಲ್ಲಿ ತೋರಿಸುತ್ತದೆ ಎಂದು ಮೀರಾಸಾಬಿಹಳ್ಳಿ ಶಿವಣ್ಣ ಅವರು ಹೇಳಿರುವುದು ಸೂಕ್ತವೆನಿಸುತ್ತದೆ.

ಚಿತ್ರದುರ್ಗದ ಇತಿಹಾಸದಲ್ಲಿ ಕೊನೆಯ ಮದಕರಿನಾಯಕನು ತನ್ನ ಆಡಳಿತ ಹಾಗೂ ಪರಾಕ್ರಮ, ತಂತ್ರಗಳಿಂದಲೇ ಹೆಚ್ಚು ಪ್ರಸಿದ್ಧಿ ಪಡೆದಂಥ ಉಜ್ವಲ ತಾರೆ ಎನಿಸಿದ್ದನು. ದುರ್ಗದ ಸುತ್ತಮುತ್ತಲಿನ ಪಾಳೆಯಗಾರರ, ಸಾಮಂತರ ಪ್ರಾಂತಗಳನ್ನು ಗೆದ್ದುಕೊಂಡಿರುವ ಸಾಹಸಗಾಥೆಯನ್ನು ಗುಣಗಾನ ಮಾಡಿರುವ ಒಂದು ಕೋಲುಪದವನ್ನು ಇಲ್ಲಿ ಪ್ರಸ್ತಾಪಿಸೋಣ.

**ಮದಕರಿಭೂಪ**

ಎಂಥಾ ಮೊನೆಗಾರ ನೋಡಣ್ಣ - ಮದಕರಿ ಭೂಪ
ನೆಂಥಾ ವಜ್ಜೀರ ನೋಡಣ್ಣ
ಕುಂತ್ ಕಡ್ದ ಕುಂದರಪೆ ತಂಕ
ನಿಂತ್ ಕಡ್ದ ನಿಡುಗಲ್ಲಿನ ತಂಕ
ಬಾಗಿ ಕಡ್ದ ಬಳ್ಳಾರಿ ತಂಕ
ತೂಗಿ ಕಡ್ದ ತುಂಕೂರು ತಂಕ

ಧೀರ ಮದಕರಿ ಕಡಿದ

ಸೀರ್ಯಾದೂರ್ ಬಾಗಿಲ ತಂಕ - ಎಂಥಾ

(ಚಂದ್ರಶೇಖರ ಕಂಬಾರ; ೧೯೭೩; ಪುಟ ೯೧)

ಈ ಹಾಡಿನ ವಿಶೇಷತೆ ಎಂದರೆ ಮದಕರಿನಾಯಕನು ಗೆದ್ದುಕೊಂಡಿರುವ ಪ್ರದೇಶಗಳನ್ನು ಗೀತೆಯ ಆರಂಭದ ಅಕ್ಷರದಿಂದ ಆರಂಭವಾಗುವ ಹೆಸರುಗಳ ಪ್ರಾಂತಗಳನ್ನು ಹೆಕ್ಕಿ ಪೋಣಿಸಿರುವುದನ್ನು ಗಮನಿಸಿದರೆ ಕೋಲಾಟದ ಹಾಡುಗಳನ್ನು ರಚಿಸಿದ ಜನಪದರ ಅಗಾಧ ಜ್ಞಾನವಂತಿಕೆಗೆ ಇದೊಂದು ಉದಾಹರಣೆ ಅಷ್ಟೆ.

ಕೋಲುಪದಗಳಲ್ಲಿ ಪ್ರಾಸಗಳನ್ನು ಒಳಗೊಂಡ ಹಾಡುಗಳು ಸಿಗುವುದು ವಿರಳ. ಈ ಗೀತೆಯಲ್ಲಿ 'ಕಡ್ದ' ಎನ್ನುವಂಥ ಪದವು ಮಧ್ಯಪ್ರಾಸವಾಗಿ ಬಳಕೆ ಆಗಿರುವುದನ್ನು ಗಮನಿಸಬಹುದು. ಮದಕರಿನಾಯಕ ತನ್ನ ಆಳ್ವಿಕೆಯ ಕಾಲದಲ್ಲಿ ಕುಂದರಪೆ, ನಿಡುಗಲ್ಲು ಬಳ್ಳಾರಿ, ತುಮಕೂರು ಮತ್ತು ಸಿರಾದ ಬಾಗಿಲವರೆಗೂ ತನ್ನ ಸಾಮ್ರಾಜ್ಯದ ಗಡಿ ಪ್ರಾಂತವನ್ನು ವಿಸ್ತರಿಸಿಕೊಂಡಿದ್ದನು ಎಂಬುದನ್ನು ಈ ಪದ ತಿಳಿಸುತ್ತದೆ. ಒಟ್ಟಾರೆ ಮದಕರಿನಾಯಕನ ಬಗೆಗೆ ಕೋಲಾಟ ಪದಗಳಲ್ಲಿ ತುಂಬಾ ವಿಪುಲವಾದ ಸಾಹಿತ್ಯ ದೊರಕುತ್ತದೆ.

**೩.೫.೩.೩. ಒನಕೆ ಓಬವ್ವ**

ಚಿತ್ರದುರ್ಗದ ಕೋಟೆಯನ್ನು ಹೈದರಾಲಿ ಸೈನಿಕರಿಂದ ರಕ್ಷಿಸಿದ ವೀರವನಿತೆ ಒನಕೆ ಓಬವ್ವ, ಓಬವ್ವ ಮತ್ತು ಆಕೆಯ ಪತಿ ಚಿತ್ರದುರ್ಗದ(ಪಾಳೆಯಗಾರ) ನಾಯಕರ ಹತ್ತಿರ ಚಿತ್ರದುರ್ಗದ ಕೋಟೆಯ ಕಾವಲುಗಾರರಾಗಿ ನಿಯುಕ್ತರಾಗಿದ್ದರು. ಹೈದರಾಲಿಯ ಸೈನಿಕರ ಪಡೆಯಿಂದ ಚಿತ್ರದುರ್ಗ ಕೋಟೆಯನ್ನು ಮತ್ತು ಅಲ್ಲಿನ ಜನತೆಯನ್ನು ರಕ್ಷಿಸಿದ ಕೀರ್ತಿ ಒನಕೆ ಓಬವ್ವಳಿಗೆ ಸಲ್ಲುತ್ತದೆ. ಕೋಟೆಯನ್ನು ರಕ್ಷಿಸಿದ ಓಬವ್ವನ ಸಾಹಸ - ಪರಾಕ್ರಮಗಳನ್ನು ಜನಪದರ ಸಹಜ ಹಾಡುಗಳಲ್ಲಿ ಹಾಡಿ ಹೊಗಳಿರುವುದು ಕಾಣಸಿಗುತ್ತದೆ. ಚರಿತ್ರೆಯ ಅಧಿಕೃತ ದಾಖಲೆಗಳೂ ನೀಡದ ಎಷ್ಟೋ ನಿಜ ಸಂಗತಿಗಳನ್ನು ಜನಪದರ ಗೀತೆ, ಕಥಾನಕ ಕಾವ್ಯಗಳಲ್ಲಿ ಕಾಣಬಹುದಾಗಿದೆ.

ಓಬವ್ವನು ಮುಸಲ್ಮಾನ ಸೈನಿಕರೊಂದಿಗೆ ಹೋರಾಡಿ ಮಡಿದ ಸಾಹಸಗಾಥೆಯನ್ನು ಸಾರುವಂತಹ ಕೋಲುಪದವು ಚಿತ್ರದುರ್ಗದ ಪರಿಸರದಲ್ಲಿ ತುಂಬಾ ಪ್ರಸಿದ್ಧಿ ಪಡೆದಿದೆ.

ತಾನಿ ತಾನಂದನೊ ತಂದನಾನೊ

ತಂದಾನಿ ತಾನಂದನೊ ತಂದನಾನೋ ||ಪ||

ಕಟ್ಟೆಯ ಹಿಂದಕ್ಕೆ ಹೋದಳು ಓಬವ್ವಾ

ನೆಟ್ಟನ್ನ ಬಿದಿರು ಸೆಳೆದಾಳೋ

ತಂದಾನಿ ತಾನಂದನೋ ತಂದನಾನೊ

ಮೇಲೆಯೆ ದುರುಗವು ಹತ್ಯಾಳೆ ಓಬವ್ವ

ಕ್ವಾಟೆಯ ಸುತ್ತ ನಡೆದಾಳೊ

ತಂದಾನಿ ತಾನಂದನೊ ತಂದನಾನೊ

ವೀರಗಚ್ಚೆಯ ಹಾಕ್ಯಾಳೋ ಕೈಗೆ ಸಿಕ್ಕ

ಒನಕೆಯಾ ಗಂಡಿಗೆ ನಿಂತಾಳೊ ಓಬವ್ವ

ಒನಕೆಯಾ ಬೀರಿ ವೈರಿಗಳ ಕೊಂದಾಳೊ

ತಂದಾನಿ ತಾನಂದನೊ ತಂದನಾನೊ

(ವಕ್ತೃ: ಕುರಿಬೋರಯ್ಯ, ಬೋಸೆದೇವರಹಟ್ಟಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಚಿತ್ರದುರ್ಗ ಕೋಟೆಯನ್ನು ಶತ್ರುಗಳಿಂದ ರಕ್ಷಿಸುವ ಸಾಹಸ-ಪರಾಕ್ರಮವನ್ನು ಮೆರೆದು ಇಂದಿಗೂ ಕನ್ನಡ ನಾಡಿನ ಜನತೆಯಲ್ಲಿ ಅಮರಗಳಾಗಿರುವ ಒನಕೆ ಓಬವ್ವಳ ಕುರಿತಾಗಿ ಜನಪದರು ತಮ್ಮ ಸಹಜ ಹಾಡು-ನುಡಿಗಳಲ್ಲಿ ಪ್ರಸ್ತುತ ಪಡಿಸಿರುವುದನ್ನು ಕೋಲುಪದಗಳಲ್ಲಿ ಕಾಣಬಹುದಾಗಿದೆ.

**೩.೫.೪. ಹಾಸ್ಯ ಅಥವಾ ತಮಾಷೆ ಸಂಬಂಧಿ ಕೋಲುಪದಗಳು**

ಮಾನವರ ಜೀವನದಲ್ಲಿ ಸುಖ, ದುಃಖಗಳಂತೆ, ಹಾಸ್ಯ ಅಥವಾ ತಮಾಷೆಗಳೂ ಎಷ್ಟು ಅವಶ್ಯಕವೋ ಅಷ್ಟೇ ಅನಿವಾರ್ಯವಾಗಿರುತ್ತವೆ. ಕೋಪ, ಮುನಿಸುಗಳು ಜನರಿಂದ ಮತ್ತು ಜನರನ್ನು ದೂರವಿಟ್ಟರೆ, ಹಾಸ್ಯ, ತಮಾಷೆಗಳು ಸುತ್ತಮುತ್ತಲ ಜನರನ್ನು ಸಮೀಪ ಇದ್ದವರು ಮತ್ತಷ್ಟು ಸಮೀಪಕ್ಕೆ ಬರುವಂತೆ ಮಾಡುತ್ತವೆ. ದುಡಿತದಿಂದ ಬೇಸತ್ತ ಜನರ ಮನೆಗಳಿಗೆ, ದೇಹಕ್ಕೆ ಹಾಸ್ಯ, ತಮಾಷೆಗಳು ನವಚೈತನ್ಯವನ್ನು ಉಂಟು ಮಾಡುತ್ತವೆ. ಜನರ ನೋವು, ದುಃಖ, ಕಡುಕಷ್ಟ, ಬವಣೆಗಳನ್ನು ಮರೆಯಿಸುವ ಶಕ್ತಿ ಹಾಸ್ಯಕ್ಕಿರುತ್ತದೆ. ಹಾಸ್ಯವಿಲ್ಲದ ಜೀವನ, ತಮಾಷೆಗಳಿಲ್ಲದ ಬದುಕು ಮರಳುಗಾಡಿನಲ್ಲಿ ಏಕಾಂಗಿಯಾಗಿ ಚಾರಣ ಮಾಡಿದಂತಾಗುತ್ತದೆ. ಕಷ್ಟಮಯವಾದ ಬದುಕಿನ ಮಹಾಸಾಗರವನ್ನು ಹಾಸ್ಯ ತಮಾಷೆಗಳೆಂಬ ಹರಿಗೋಲುಗಳ ನೆರವಿನಿಂದ ದಡ ಸೇರಬಹುದು.

ಹಾಸ್ಯ, ತಮಾಷೆಗಳೆಂದರೆ ಮತ್ತೊಬ್ಬರ ಅವನತಿಯನ್ನು ನೋಡಿ ನಗುವುದಲ್ಲ. ಕುಹಕ ನುಡಿಗಳಿಲ್ಲದ, ಕೊಂಕು ನುಡಿಗಳಿಲ್ಲದ ಮನಸ್ಸಿನ ಅಂತರಾಳದಲ್ಲಿ ಹೊರಹೊಮ್ಮಿದ ತಿಳಿ ಮನದ, ತನ್ನ ಸುತ್ತಮುತ್ತಲು ನೆರೆದಿರುವ ಎಲ್ಲರನ್ನು ನಕ್ಕು ನಗಿಸುವ ಹಾಸ್ಯವು ಬಾಳಿನಲ್ಲಿ ಸಿಹಿ ಬುತ್ತಿಯಾಗುವುದು. ಹಾಸ್ಯ, ತಮಾಷೆಗಳನ್ನು ನಾಗರೀಕರ ಗಾಂಭೀರ್ಯ ತುಂಬಿದ ಬದುಕಿನಲ್ಲಿ ಹುಡುಕಬೇಕಾಗುತ್ತದೆ. ಜನಪದರ ಜೀವನದಲ್ಲಿ ಪ್ರತಿ ಹೆಜ್ಜೆ ಹೆಜ್ಜೆಗೂ ಹಾಸ್ಯ, ತಮಾಷೆಗಳು ಹೊರಹೊಮ್ಮುತ್ತವೆ. ಅಂತೆಯೇ ಜನಪದದ ಗೀತ ಪ್ರಕಾರವಾದ ಕೋಲಾಟ ಪದಗಳಲ್ಲಿ ಶೃಂಗಾರ, ಪ್ರಣಯ, ಭಕ್ತಿ, ಐತಿಹಾಸಿಕ ಇತ್ಯಾದಿಗಳನ್ನು ಒಳಗೊಂಡಂತೆ ಹಾಸ್ಯ, ತಮಾಷೆಗಳೂ ಕೂಡ ಕೋಲಾಟದ ಹಾಡುಗಳಲ್ಲಿ ವಿಪುಲವಾಗಿ ದೊರಕುತ್ತವೆ.

ಕೋಲಾಟ ಪ್ರದರ್ಶನದ ವೇಳೆ ಹಾಸ್ಯಕ್ಕೆ ಸಂಬಂಧಿಸಿದ ಕೋಲಾಟ ಪದಗಳಿಗೆ ವಿಶಿಷ್ಟ ಸ್ಥಾನವಿದೆ. ಯಾವುದೇ ಜನಪದ ಪ್ರಕಾರವಾಗಿರಲಿ, ಗೀತ ಸಾಹಿತ್ಯ ಪ್ರಕಾರವಾಗಿರಲಿ, ಕಥಾ

ಪ್ರಕಾರವಾಗಿರಲಿ, ಕಥನಕಾವ್ಯ, ಒಗಟು, ಗದ್ಯ ಯಾವುದೇ ಪ್ರಕಾರವಿರಲಿ, ಅವುಗಳು ಹಾಸ್ಯ, ತಮಾಷೆಗಳನ್ನು ಒಳಗೊಂಡಿದ್ದರೆ ಸುತ್ತಮುತ್ತ ನೆರೆದಿರುವ ಪ್ರೇಕ್ಷಕ ವರ್ಗವನ್ನು ಆಕರ್ಷಿಸುವಲ್ಲಿ ಯಶಸ್ವಿಯಾಗುತ್ತವೆ. ಇದಕ್ಕೆ ಕೋಲಾಟವೇ ಉತ್ತಮ ನಿದರ್ಶನವೆಂದು ಹೇಳಬಹುದು. ಜನರು ಗಾಂಭೀರ್ಯಕ್ಕಿಂತ ಹಾಸ್ಯ, ತಮಾಷೆಯಂತಹ ವಿನೋದಾವಳಿಗೆ ಹೆಚ್ಚು ಆಕರ್ಷಿತರಾಗುತ್ತಾರೆ. ಜನರ ನೋವು ಬವಣೆಗಳನ್ನು ಕ್ಷಣ ಕಾಲ ಮರೆಯಿಸುವ ಶಕ್ತಿ ಹಾಸ್ಯಕ್ಕಿದೆ. ಹಾಗಾಗಿ ಕೋಲಾಟವು ಸೇರಿದಂತೆ ಇತರೆ ಎಲ್ಲಾ ಜನಪದ ಪ್ರಕಾರಗಳಲ್ಲಿಯೂ ಕೂಡ ಹಾಸ್ಯ ತಮಾಷೆ ಮತ್ತು ವಿನೋದಾವಳಿಗೆ ಪ್ರಮುಖ ಸ್ಥಾನವಿದೆ.

ಕೋಲಾಟ ಪ್ರದರ್ಶನ ಮಾಡುವಾಗ ಕೋಲುಪದಗಳನ್ನು ಕೋಲು ಮೇಳಗಾರರು ಹಾಡುತ್ತಾರೆ. ಪದಗಳಿಲ್ಲದೆ ಕೋಲಾಟವಿಲ್ಲ. ಹೀಗೆ ಕೋಲುಪದಗಳನ್ನು ಅತ್ತೆ, ಸೊಸೆ, ಮಾವ - ಅಳಿಯ ಮತ್ತು ನೆಂಟರಿಷ್ಟರ ಮೇಲೆ ಹಾಸ್ಯಭರಿತ ಪದಗಳನ್ನು ಕೋಲು ತಂಡದ ನಾಯಕರು ಹಾಡುವುದು ಕಂಡುಬರುತ್ತದೆ. ಹಾಗೆಯೇ ಕುಲ, ಬೆಡಗುಗಳ ಕುರಿತಾಗಿಯೂ ಕೋಲಾಟದ ಪದಗಳನ್ನು ಹಾಡುತ್ತಾರೆ. ಈ ರೀತಿ ಬಳಿ, ಕುಲ, ಅತ್ತೆ, ಸೊಸೆಯರಿಗೆ ಸಂಬಂಧಿಸಿದ ಹಾಡುಗಳು ಹಾಸ್ಯದ ವಸ್ತುವನ್ನೇ ಒಳಗೊಂಡಿರುವಂತಹ ಪದಗಳೇ ಹೆಚ್ಚಾಗಿ ಕಂಡು ಬರುತ್ತವೆ. ಹಾಸ್ಯ, ತಮಾಷೆಯ ಪದಗಳು ನೋಡುಗರಿಗೆ ಹೆಚ್ಚು ಮನೋರಂಜನೆಯನ್ನು ಒದಗಿಸುತ್ತವೆ ಎಂಬುದು ಕೋಲುಪದಗಳಿಂದ ವೇದ್ಯವಾಗಿದೆ. ಕೋಲುಮೇಳಗಾರ ಮತ್ತು ಕೋಲಾಟ ಪ್ರದರ್ಶಿಸುವ ಆಳುಗಳು ಯಥೇಚ್ಛವಾಗಿ ಹಾಸ್ಯದ ವಸ್ತುವನ್ನು ಒಳಗೊಂಡಿರುವ ಕೋಲುಪದಗಳನ್ನು ಇಷ್ಟಪಡುತ್ತಾರೆ ಮತ್ತು ಹಾಡುತ್ತಾರೆ ಎಂಬುದು ಗಮನಾರ್ಹವಾಗಿದೆ.

ಮ್ಯಾಸಬೇಡ ಬುಡಕಟ್ಟಿನಲ್ಲಿ ಹಲವು ತೆರನಾದ ಬೆಡಗುಗಳು ಕಂಡುಬರುತ್ತವೆ. ಈ ಬುಡಕಟ್ಟು ಸಮುದಾಯದ ಬೆಡಗುಗಳಲ್ಲಿ ಕೆಲವು ಬೆಡಗುಗಳು ಕೋಲುಪದಗಳಲ್ಲಿ ಹಾಸ್ಯ ಅಥವಾ ತಮಾಷೆಗೆ ವಸ್ತುವಾಗಿರುವುದನ್ನು ಕಾಣಬಹುದು. "ಎನುಮುಲಾರು" ಎನ್ನುವಂಥ ಒಂದು ಬೆಡಗು ಬರುವುದು ಮ್ಯಾಸಬೇಡ ಬುಡಕಟ್ಟಿನ ಸಮುದಾಯದಲ್ಲಿ(ನಾಯಕ) ಈ ಬೆಡಗಿನ ಹದಿಹರೆಯ ಹೆಣ್ಣುಮಕ್ಕಳನ್ನು, ಸ್ತ್ರೀಯರನ್ನು ಹಾಸ್ಯಕ್ಕೀಡು ಮಾಡುವ ಹಾಡುಗಳು ಕೋಲಾಟ ಪದಗಳಲ್ಲಿ ಕಾಣಸಿಗುತ್ತವೆ. 'ಎನುಮುಲಾರು' ಬೆಡಗಿಗೆ ಸಂಬಂಧಿಸಿದ ಸ್ತ್ರೀಯರನ್ನು, ಎನುಮುಲಾರಿಗೆ ವಿರುದ್ಧ ಬೆಡಗಾದ 'ಮಂದಾಲುವಾರು' ಬೆಡಗಿನ ಕೋಲುಮೇಳಗಾರ 'ಎನುಮುಲಾರು' ಹೆಣ್ಣುಮಕ್ಕಳ ಕುರಿತು ಕೋಲಾಟದ ಹಾಡನ್ನು ಕಟ್ಟಿರುವ ಸಾಧ್ಯತೆ ಇರುತ್ತದೆ. ಏಕೆಂದರೆ 'ಎನುಮುಲಾರು' ಮತ್ತು 'ಮಂದಾಲುವಾರು' ಪರಸ್ಪರ ನೆಂಟರು - ಬಂಟರಾಗುತ್ತಾರೆ. ಅಂದರೆ ಹೆಣ್ಣನ್ನು ಕೊಡುವುದು ಮತ್ತು ಪಡೆಯುವುದು ಮಾಡಿಕೊಳ್ಳುತ್ತಾರೆ. ಹಾಗಾಗಿ ಇವರಲ್ಲಿ ಕೋಲಾಟ ಪ್ರದರ್ಶನವಾಗುವ ಸಮಯದಲ್ಲಿ ಈ ಬೆಡಗುಗಳಲ್ಲಿನ ಅತ್ತೆ-ಸೊಸೆ, ಮಾವ-ಅಳಿಯ, ಎದುರು-ಬದುರಾದಾಗ ಪರಸ್ಪರರ ಮೇಲೆ ಹಾಸ್ಯಪೂರಿತ ಮಾತುಗಳನ್ನು ಮತ್ತು ಕೋಲಾಟ ಪ್ರದರ್ಶನ ನೋಡಲು ಬಂದ ಪ್ರೇಕ್ಷಕರನ್ನು ನಗೆಗಡಲಲ್ಲಿ ತೇಲಿಸುವಂಥ ಕೋಲುಪದಗಳ ಮುಖಾಂತರ ಹಾಸ್ಯ - ತಮಾಷೆಗಳನ್ನು

ಮಾಡುವುದು ಕಾಣಸಿಗುತ್ತದೆ. ಇದು ಬರೀ ಮ್ಯಾಸಬೇಡರ ಅಥವಾ ನಾಯಕರ ಬೆಡಗುಗಳ ವಿಚಾರದಲ್ಲಿ ಮಾತ್ರ ಅಲ್ಲದೆ ಬೇರೆ ಬೇರೆ ಸಮುದಾಯಗಳಾದ ಕಾಡುಗೊಲ್ಲರು, ಮಾದಿಗರು ಇತ್ಯಾದಿ ಸಮುದಾಯಗಳಲ್ಲಿಯೂ ಈ ತರಹದ ಹಾಸ್ಯ, ತಮಾಷೆಯ ವಸ್ತುವನ್ನು ಒಳಗೊಂಡಿರುವ ಹಲವು ಪ್ರಕಾರದ ಕೋಲಾಟ ಪದಗಳನ್ನು ಕಾಣಬಹುದು.

ಕೋಲುಪದಗಳಲ್ಲಿ ಬೆಡಗುಗಳಿಗೆ ಸಂಬಂಧಿಸಿದ ಪದಗಳನ್ನು ಹೊರತುಪಡಿಸಿ ಕೋಲಾಟ ಪ್ರದರ್ಶನ ವೀಕ್ಷಿಸಲು ಬಂದಿರುವಂಥ ಅತ್ತೆ-ಮಾವ, ಸೊಸೆ-ಅಳಿಯ, ಇತರೆ ಸಂಬಂಧಿಕರನ್ನು ಸೇರಿಸಿಯೂ ಅಥವಾ ಬೇರೆ ಬೇರೆ ಸಮುದಾಯಗಳಲ್ಲಿಯ ಅತ್ತೆ-ಮಾವ, ಸೊಸೆಯ ಕುರಿತಾಗಿ ಹಾಸ್ಯ, ತಮಾಷೆಯ ಹಾಡುಗಳನ್ನು ತಕ್ಷಣಕ್ಕೆ ಆ ಕ್ಷಣಕ್ಕೆ ಪದಗಳನ್ನು ರಚಿಸಿ ಹಾಡುವಂಥ ಚಾಕಚಕ್ಯತೆ ಕೋಲಾಟ ತಂಡದ ನಾಯಕ ಅಥವಾ ಕೋಲುಮೇಳಗಾರರಲ್ಲಿ ಕರಗತವಾಗಿರುತ್ತದೆ. ಹಾಸ್ಯದ ಹಾಡುಗಳಿಂದ ಜನರು ತಮ್ಮ ತಮ್ಮ ಕಷ್ಟ - ಕೋಟಲೆಗಳನ್ನು, ದುಃಖ ದುಮ್ಮಾನಗಳನ್ನು ಮರೆತು ಆ ಕ್ಷಣಕ್ಕಾದರೂ ನೆಮ್ಮದಿಯ ನಿಟ್ಟುಸಿರು ಆಡುವಂತೆ ಮಾಡುವ ಶಕ್ತಿ ಕೋಲಾಟ ಪದಗಳಲ್ಲಿ ಹಾಸ್ಯ ಅಥವಾ ತಮಾಷೆಯ ಪ್ರಕಾರದ ಪದಗಳಲ್ಲಿ ಇರುವುದನ್ನು ಗಮನಿಸಬಹುದಾಗಿದೆ.

ಕೋಲುಪದಗಳಲ್ಲಿ ಹಾಸ್ಯದ ವಸ್ತುವಿಷಯಕ್ಕೆ ಸಂಬಂಧಿಸಿದಂತೆ ಮ್ಯಾಸಬೇಡರ 'ಎನುಮುಲಾರು' ಬೆಡಗಿನ ಹುಡುಗಿಯ ಕುರಿತು ತಮಾಷೆ ಮಾಡಿರುವ ಕೋಲುಪದವನ್ನು ಪ್ರಸ್ತಾಪಿಸಲಾಗುವುದು. ಈ ಹಾಡು ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಹಾಡು ಹಾಡಿದವರು ಮ್ಯಾಸಬೇಡರ 'ಮಂದಲುವಾರು' ಬೆಡಗಿಗೆ ಸೇರಿದ್ದು, ಮೊಳಕಾಲ್ಮೂರು ತಾಲೂಕಿನ ಕಂಪಳದೇವರಹಟ್ಟಿಯ ಸಣ್ಣಮಲ್ಲಯ್ಯ ಎನ್ನುವಂಥ ವಕ್ತೃ ಅಥವಾ ಕೋಲು ಮೇಳಗಾರ. ಈ ಗೀತೆ ಕೋಲಾಟದಲ್ಲಿ ಈಚುಕಡ್ಡಿ ಪ್ರಕಾರಕ್ಕೆ ಸೇರಿದೆ. ಕಂಪಳದೇವರಹಟ್ಟಿಯ ಕೋಲುಮೇಳಗಾರರಾದ ಸಣ್ಣಮಲ್ಲಯ್ಯ ಅವರು ಮ್ಯಾಸಬೇಡ ಸಮುದಾಯಕ್ಕೆ ಸೇರಿದವರಾಗಿದ್ದು ಅವರ ಮನೆ ಮಾತು ತೆಲುಗು ಹಾಗೂ ಅವರು ಹಾಡಿದ ಕೋಲುಪದವು ಸಹ ತೆಲುಗು ಭಾಷೆಯಲ್ಲಿ ಹಾಡಿರುವುದು ಗಮನಿಸಬಹುದು.

ಕೋಲುಪದ - ತೆಲುಗು ಭಾಷೆಯದಾದರೂ ಕನ್ನಡ ಲಿಪಿಯಲ್ಲಿ ನೀಡಲಾಗಿದೆ.

ಎನುಮುಲಾರು ಈಚುಕಡ್ಡಿ ಪ್ರಕಾರಕ್ಕೆ ಸೇರಿದುದ್ದು

ಸಜ್ಜಲು ತೀನಿ ಗೆಜ್ಜೆಲು ಬಿಗಿಸೆದೆ
ಕೋಲನ್ನ ಕೋಲೆ ಸೈ
ಕೋಲನ್ನ ಕೋಲೆ
ಎನುಮುಲಾರು ಗಿಡ್ಡ ಪಿಲ್ಲ
ಕೋಲನ್ನ ಕೋಲೆ ||೨||

ಸೈ ಕೋಲನ್ನ ಕೋಲೆ
ಸೂರ್ಯಕಾಂತ್ಲು ಕುಬುಸಮು ಪೆಟ್ಟೆದೆ
ಕೋಲನ್ನ ಕೋಲೆ
ಸೈ ಕೋಲನ್ನ ಕೋಲೆ

ಬಾಣಲು ಬನ್ನಮು ಸೀರೆ ಕಟ್ಟಿದೆ
ಕೋಲನ್ನ ಕೋಲೆ
ಸೈ ಕೋಲನ್ನ ಕೋಲೆ
ಹುಡಿಗೆಲ್ತೆಲ್ಲಾ ಕೂಡಾ ಮೆರಿಪೆದೆ
ಕೋಲನ್ನ ಕೋಲೆ
ಸೈ ಹುಡಿಗೆಲ್ತೆಲ್ಲಾ ಕೂಡ ಮೆರಿಪೆದೆ
ಕೋಲನ್ನ ಕೋಲೆ
ಸೊಂದು ಕೊಕಿರ್ತಾ ಕಾಯ ಪೆಟ್ಟಿದೆ
ಕೋಲನ್ನ ಕೋಲೆ
ಸೈ ಕೋಲನ್ನ ಕೋಲೆ

(ವಕ್ತೃ: ಸಣ್ಣೋಬಯ್ಯ, ಚಿರತಗುಂಡು, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ)

ಎನುಮುಲಾರು ಬೆಡಗಿನ ಹದಿಹರೆಯದ ಹುಡುಗಿ - ಸೊಸೆ ಅಥವಾ ಅತ್ತೆ, ಮಾವ, ಅಳಿಯರ ಹೆಸರುಗಳ ಮೇಲೆ ಮಂದಾಲುವಾರು ಎನ್ನುವಂಥ ಬೆಡಗಿನ ಕೋಲುಮೇಳಗಾರ ಉಪಹಾಸ್ಯ ಮಾಡುವುದು ಕಂಡುಬರುತ್ತದೆ. ಹಾಗೆಯೇ ಈ ಹಾಡಿನಲ್ಲಿ ಮ್ಯಾಸಬೇಡರಲ್ಲಿನ ಒಂದು ಉಪಪಂಗಡ ಅಥವಾ ಬೆಡಗಾದ 'ಎನುಮುಲಾರು'ವಿನಲ್ಲಿ ಒಬ್ಬ ಹದಿಹರೆಯದ ಹೆಣ್ಣಿನ ಕುರಿತು ತಮಾಷೆ ಮಾಡಿರುವುದು ಮೇಲ್ನೋಟಕ್ಕೆ ಕಾಣುತ್ತದೆ. ಹಾಡಿನಲ್ಲಿ ಎನುಮುಲಾರುವಿನ ಹೆಣ್ಣು ಅಥವಾ ಹದಿಹರೆಯ ಹುಡುಗಿ ಉಟ್ಟಿರುವ(ತೊಟ್ಟಿರುವ) ಸೀರೆಯ ವರ್ಣನೆ ಮಾಡುವುದರ ಜೊತೆಗೆ ಅವಳು ಹದಿಹರೆಯ ಹುಡುಗರೊಟ್ಟಿಗೆ ಹೇಗೆ ವ್ಯವಹರಿಸುತ್ತಾಳೆ, ನಡೆದುಕೊಳ್ಳುತ್ತಾಳೆ ಎಂಬುದನ್ನು ತಿಳಿಸುತ್ತದೆ. ಹಾಡಿನ ಕೆಲವು ತುಣುಕುಗಳನ್ನು ಪ್ರಸ್ತಾಪಿಸುತ್ತಾ ನೋಡೋಣ. ಈ ಪದ ಕರ್ನಾಟಕದ ಗಡಿ ತಾಲೂಕಾದ ಮೊಣಕಾಲ್ಮೂರುವಿನ ಕಂಪಳದೇವರಹಟ್ಟಿಯಲ್ಲಿ ಸಂಗ್ರಹಿಸಲಾಗಿದೆ.

### ತೆಲುಗು ಕೋಲಾಟಪದ

ಹುಡಿಗೆಲ್ತೆಲ್ಲಾ ಕೂಡ ಮೆರಿಪೆದೆ
ಕೋಲನ್ನ ಕೋಲೆ
ಸೈ ಕೋಲನ್ನ ಕೋಲೆ
ಸೊಂದು ಕೊಕ್ಕಿರ್ತಾ ಕಾಯಾಪೆಟ್ಟಿದೆ
ಕೋಲನ್ನ ಕೋಲೆ
ಸೈ ಕೋಲನ್ನ ಕೋಲೆ
ದನಾನ ಒಕರಿಕನ್ನ ಖಾಯಂ ನೇದು
ಕೋಲನ್ನ ಕೋಲೆ
ಸೈ ಕೋಲನ್ನ ಕೋಲೆ

(ವಕ್ತೃ: ಸಣ್ಣೋಬಯ್ಯ, ಚಿರತಗುಂಡು, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ)

'ಒಂದು ಹೆಣ್ಣು ಸುಂದರವಾಗಿದ್ದಾಗ ನೋಡುವ ಕಣ್ಣು ನೂರಾರು' ಎಂಬಂತೆ ಹಾಡಿನಲ್ಲಿ ಬರುವ ಎನುಮುಲಾರು ಬೆಡಗಿನ ಹುಡುಗಿ ಸೌಂದರ್ಯವತಿಯಾಗಿರುವುದರಿಂದ ಪಡ್ಡೆ ಹುಡುಗರು ಅಥವಾ ಹರೆಯದ ಹುಡುಗರೆಲ್ಲಾ ಅವಳನ್ನು ನೋಡಲು ಒಂದೆಡೆ ಸೇರುವುದು. ಅಲ್ಲದೆ ಪ್ರತಿಯೊಂದು ಕೇರಿ, ಬೀದಿಯಲ್ಲೂ ಸೊಂದುಗೊಂದುಗಳಲ್ಲಿ ಅವಳ ಸೌಂದರ್ಯವನ್ನು ನೋಡಲು ಕಾಯುತ್ತಿದ್ದರೆಂಬುದು ಹಾಡಿನಲ್ಲಿ ಸೂಚ್ಯವಾಗಿ ತೋರಿಸಲಾಗಿದೆ.

ಹಾಡಿನಲ್ಲಿ 'ಎನುಮುಲಾರು ಗಿಡ್ಡಪಿಲ್ಲ' ಎಂದು ಹಾಸ್ಯ ಮಾಡಿರುವುದಿದೆ. ಅಂದರೆ ಎನುಮುಲಾರು ಗಿಡ್ಡ(ಕುಳ್ಳ) ಹುಡುಗಿ ಎಂಬುದಾಗಿ ಅರ್ಥವಿದೆ. ಈ ಗಿಡ್ಡ ಹುಡುಗಿಯ ಹಿಂದೆ ಪ್ರತಿ ಕೇರಿಯ ಬೀದಿಯ ಹುಡುಗರೆಲ್ಲರೂ ಎಷ್ಟೇ ಅಲೆದರೂ, ತಿರುಗಾಡಿದರೂ ಅವಳಿಗಾಗಿ ಕಾದು ಕಾದು ಒಂದೆಡೆ ಸೇರಿದರೂ ಕೂಡ ಆ ಹುಡುಗಿ ಯಾರೊಬ್ಬರಿಗೂ ಸಿಗದೆ ಕಟ್ಟಕಡೆಗೆ ತಾನು ಇಷ್ಟಪಟ್ಟ ಪ್ರೀತಿಸಿದ ಹುಡುಗನ ಜೋಡಿ ಕೂಡಿ ಓಡಿ ಹೋದಳು ಎಂಬುದು ಮೇಲ್ನೋಟಕ್ಕೆ ತಿಳಿಯುವ ಸಂಗತಿಯಾಗಿದೆ. ಹಾಗೆಯೇ ಈ ಹುಡುಗಿಯನ್ನು ಮತ್ತೊಂದು ರೀತಿಯಲ್ಲಿ ಉಪಹಾಸ್ಯ ಮಾಡುವ ಹಾಡಿನ ಒಂದು ಸಾಲನ್ನು ನೋಡೋಣ.

> 'ಪಿಲ್ಲಾ ಹುಡಿಗೆಡು ವಂಕಾ ಪೆಟ್ರಿ ಕೋಲನ್ನ ಕೊಲೆ
> ಸೈ ಕೋಲನ್ನ ಕೋಲೆ.'

ಈ ಸಾಲಿನ ಅರ್ಥವೇನೆಂದರೆ ಎಷ್ಟೇ ಹುಡುಗರು ಹಿಂಬಾಲಿಸಿದರೂ ಆ ಹುಡುಗಿ ಕೊನೆಗೆ ಎನುಮುಲಾರು ಬೆಡಗಿನ ಹುಡುಗಿ ಇಷ್ಟಪಟ್ಟ ಹುಡುಗನ ಜೊತೆ ಹಳ್ಳ ಹಿಡಿದಳು ಎಂಬುದನ್ನು ಅರ್ಥೈಸುತ್ತದೆ. ಕೋಲಾಟ ಪ್ರದರ್ಶನ ನೋಡುವವರ ಮನರಂಜಿಸಲು ಆ ಸಂದರ್ಭದಲ್ಲಿ ತಮಾಷೆಯನ್ನು ಮಾಡಿರುವುದು ಕಂಡು ಬರುವುದು. ಹಾಗೆಯೇ ಇನ್ನೊಂದು ದಿಸೆಯಲ್ಲಿ ಹೇಳುವುದಾದರೆ, ಎನುಮುಲಾರುವಿನ ಹುಡುಗಿ ಎಲ್ಲರಿಗೂ ಕೈಕೊಟ್ಟು ತಾನು ಇಷ್ಟಪಟ್ಟವನೊಂದಿಗೆ ಮದುವೆಯಾದಳು ಎಂಬುದನ್ನು ಮಾರ್ಮಿಕವಾಗಿ ಹೇಳುವುದರ ಮೂಲಕ ಅವಳನ್ನು ಹಾಸ್ಯಕ್ಕೆ ಗುರಿ ಮಾಡಿರಬಹುದು. ಮತ್ತೊಂದು ರೀತಿಯಾಗಿ ನೋಡಿದಾಗ, ಈ ಕೋಲು ಪದದಲ್ಲಿ ಎನುಮುಲಾರು ಬೆಡಗಿನ ಗಿಡ್ಡ ಹುಡುಗಿಯ ಅಥವಾ ಕುಳ್ಳಿ ಎಂದು ಹಾಸ್ಯ ಮಾಡಿದವಳ ಬುದ್ಧವಂತಿಕೆ, ಚತುರತೆ, ಚಮತ್ಕಾರಗಳು ಎದ್ದು ಕಾಣುತ್ತವೆ. ಹೇಗೆಂದರೆ ಹಾಡಿನ ಒಂದು ಸಾಲನ್ನು ನೋಡಿದಾಗ ಇದು ನಿಜವೆನಿಸುತ್ತದೆ.

> ಹುಡಿಗೆಲ್ತೆಲ್ಲಾ ಕೂಡ ಮೆರಿಪೆದೆ
> ಕೋಲನ್ನ ಕೋಲೆ
> ಸೈ ಕೋಲನ್ನ ಕೋಲೆ
> ಸೊಂದುಕೊಕ್ಕಿರ್ತಾ ಕಾಯಪೆಟ್ಟೇದೆ
> ಕೋಲನ್ನ ಕೋಲೆ
> ಸೈ ಕೋಲನ್ನ ಕೋಲೆ.
>
> (ವಕ್ತೃ: ಸಣ್ಣೋಬಯ್ಯ, ಚಿರತಗುಂಡು, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ)

ಅಂದರೆ ಹುಡುಗರನ್ನೆಲ್ಲಾ ಒಂದೆಡೆ ಸೇರುವ ಹಾಗೆ ಮಾಡಿರುವುದು ಮತ್ತು ಕೇರಿಗೆ, ಬೀದಿಗೆ, ಸೊಂದು-ಗೊಂದುಳಿಗೆ ಒಬ್ಬೊಬ್ಬರನ್ನು ಕಾವಲು ಕಾಯುವ ಹಾಗೆ ಮಾಡಿ ಕೊನೆಗೆ ತಾನು ಮೆಚ್ಚಿದವನನ್ನೇ ವರಿಸಿರುವುದನ್ನು ಗಮನಿಸಿದರೆ ಹಾಸ್ಯದ ಕೋಲುಪದಗಳಲ್ಲೂ ಕೂಡ ಸಾಮಾನ್ಯ ಜನಗಳ ಜಾಣ್ಮೆ ಚತುರತೆಗಳನ್ನು ಕಾಣಬಹುದು ಎಂಬುದು ತಿಳಿಯುವ ಸಂಗತಿಯಾಗಿದೆ. ಎನುಮುಲಾರುವಿನ ಗಿಡ್ಡ ಹುಡುಗಿಯ ಜಾಣತನಕ್ಕೆ ಈ ಕೋಲುಪದವೇ ಸಾಕ್ಷಿಯಂತಿದೆ. ಇಂತಹ ಹಾಸ್ಯ, ತಮಾಷೆಯ ಕೋಲುಪದಗಳನ್ನು ಕಟ್ಟಿದ ಜನಪದರು ಸಾಮಾನ್ಯ ಜನಗಳ ವರ್ತನೆ ವ್ಯವಹಾರಗಳಲ್ಲಿ ಹಾಸ್ಯ ಮಾದರಿಯ ಗೀತೆಗಳನ್ನು ಕಟ್ಟಿ ಹಾಡುವುದು ಕಂಡು ಬರುತ್ತದೆ ಹಾಗೂ ತಮಾಷೆಯ ಕೋಲುಪದಗಳಲ್ಲಿ ಸಾಮಾನ್ಯರ ಜಾಣತನ ಬುದ್ಧಿವಂತಿಕೆಗಳನ್ನು ಸೂಕ್ಷ್ಮವಾಗಿ ಅನಾವರಣ ಮಾಡುವುದು ಸಹ ಕಂಡುಬಂದಿದೆ.

ಜನಪದರು ತಮ್ಮ ಜೀವನದಲ್ಲಿ ಹಾಸ್ಯ-ತಮಾಷೆಗಳಿಗೆ ಹೆಚ್ಚು ಪ್ರಾಧಾನ್ಯತೆ ನೀಡುತ್ತಾ ಬಂದಿದ್ದಾರೆ. ಜಾನಪದ ವಿದ್ವಾಂಸರು, ತಜ್ಞರು, ಜನಪದರ ಹಾಸ್ಯಕ್ಕೆ ಸಂಬಂಧಪಟ್ಟಂತೆ ಹಲವು ತೆರನಾದ ಹೇಳಿಕೆ, ವ್ಯಾಖ್ಯಾನಗಳನ್ನು ನೀಡಿದ್ದಾರೆ. ಅವರಲ್ಲಿ ಒಬ್ಬರಾದ ಸಿಂಪಿ ಲಿಂಗಣ್ಣ ಅವರು ಹಾಸ್ಯದ ಕುರಿತು ಮಾತನಾಡುತ್ತಾ ತಮ್ಮ "ಜಾನಪದ ಜೀವನದಲ್ಲಿ ಹಾಸ್ಯ" ಎಂಬ ಲೇಖನದಲ್ಲಿ ಪಾಂಡಿಚೇರಿಯ ಶ್ರೀಮಾತಾಜಿಯವರ ಹಾಸ್ಯದ ವ್ಯಾಖ್ಯಾನವನ್ನು ನೆನಪಿಸಿಕೊಳ್ಳುತ್ತಾರೆ. ಅದೇನೆಂದರೆ "ಮೋಡಗಳ ಮುಂದೆ ಸೂರ್ಯನಿದ್ದ ಹಾಗೆ ವೈರಿಗಳ ಮುಂದೆ ನಗೆಮುಖವೆಂದೂ ಅದರಿಂದ ವೈರಿಗಳನ್ನು ನಿಶ್ಯಸ್ತ್ರಗೊಳಿಸಿದಂತಾಗುವುದೆಂದೂ ಪಾಂಡಿಚೇರಿಯ ಶ್ರೀಮಾತಾಜಿಯವರ ಅಮೃತಬಿಂದುವಿದೆ" (ಸಿಂಪಿಲಿಂಗಣ್ಣ, ೧೯೬೦, ಪುಟ ೪೮) ಎಂದು ಹಾಸ್ಯ ಕುರಿತು ಹೇಳಿರುವ ಮಾತು ಸೂಕ್ತವಾಗಿದೆ ಎಂದು ಹೇಳಬಹುದು.

ಕೋಲುಪದಗಳಲ್ಲಿ ಗಾಂಭೀರ್ಯಕ್ಕಿಂತ ಹಾಸ್ಯ - ತಮಾಷೆಗಳಿಗೆ ಸಂಬಂಧಿಸಿದ ಹಾಡುಗಳಿಗೆ ಪ್ರದರ್ಶನ ಮಾಡುವುದೇ ಜಾಸ್ತಿ. ಈ ಹಿನ್ನೆಲೆಯಲ್ಲಿ ಮತ್ತೊಂದು ತೆಲುಗು ಕೋಲುಪದವನ್ನು ಇಲ್ಲಿ ವಿಚಾರ ಮಾಡೋಣ.

ಈ ಹಾಡು ಕಂಪಳದೇವರಹಟ್ಟಿಯ ಮ್ಯಾಸಬೇಡ ಸಮುದಾಯಕ್ಕೆ ಸೇರಿದ ಸಣ್ಣಮಲ್ಲಯ್ಯ ಎನ್ನುವವರು ಹಾಡಿದ್ದಾರೆ. ಕೋಲುಮೇಳಗಾರರು, ಭಜನೆಪದಗಳ ಹಾಡುಗಾರರು ಆಗಿರುವ ಅವರು ಹಾಸ್ಯದ ಕುರಿತು ಕೋಲುಪದಗಳನ್ನು ಹಾಡಿರಿ ಎಂದು ಕೇಳಿಕೊಂಡಾಗ ಸ್ವಲ್ಪ ಸಂಕೋಚ ಮನದಿಂದಲೇ ಕೆಲವೊಂದಿಷ್ಟು ಹಾಸ್ಯ-ತಮಾಷೆಗೆ ಸಂಬಂಧಿಸಿದ ಹಾಡುಗಳನ್ನು ಹಾಡಿದರು. ಕೋಲುಪದಗಳಲ್ಲಿ ಹೆಚ್ಚಾಗಿ ಅಥವಾ ವಿಶೇಷವಾಗಿ ಅತ್ತೆ-ಸೊಸೆ ಹದಿಹರೆಯ - ಹೆಣ್ಣುಗಳ ಮೇಲೆಯೇ ಹೆಚ್ಚೆಚ್ಚು ತಮಾಷೆ, ವಿನೋದಾವಳಿಗಳನ್ನು ಮಾಡುವುದಿದೆ ಎಂದರು.

ಸಣ್ಣಮಲ್ಲಯ್ಯ ಅವರು ಹೇಳಿದಂತೆ ಕೋಲಾಟ ಪ್ರದರ್ಶನದ ವೇಳೆ ಕೋಲಾಟ ನೋಡಲು ಬಂದ ಜನಸಮೂಹದಲ್ಲಿ ಅತ್ತೆ-ಸೊಸೆ ಆಗುವಂಥವರು ಕಂಡಾಗ ಅಥವಾ ಕೆಲವೊಂದು ಅನುಭವಗಳ ಹಿನ್ನೆಲೆಯಲ್ಲಿ ಹಾಸ್ಯ ಅಥವಾ ತಮಾಷೆಯ ಪದಗಳನ್ನು ಹೇಳಲಾಗುತ್ತದೆ. ಹಾಗೆಯೇ ನೆರೆದ ಜನರಿಗೆ ಮತ್ತಷ್ಟು ಮನೋರಂಜನೆ ನೀಡಲು ಹಾಗೂ ಕೋಲು ಹುಯ್ಯುವವರ

ಪ್ರದರ್ಶನ ಮತ್ತಷ್ಟು ಉತ್ತೇಜಿಸಲು ಅವರ ಉತ್ಸಾಹವನ್ನು ಇಮ್ಮಡಿಗೊಳಿಸಲು ಹಾಸ್ಯ ಮತ್ತು ತಮಾಷೆಯ ಪದಗಳನ್ನು ಜಾಸ್ತಿ ಹಾಡಲಾಗುತ್ತದೆ ಎಂದರು. ಅವರೇ ಹಾಡಿದ ಹಾಸ್ಯ ವಸ್ತುವನ್ನು ಒಳಗೊಂಡಿರುವ ಒಂದು ಕೋಲುಪದವನ್ನು ಪ್ರಸ್ತಾಪಿಸಲಾಗುವುದು. ಇದು ಕನ್ನಡ ಲಿಪಿಯನ್ನು ಒಳಗೊಂಡಿರುವ ತೆಲುಗು ಕೋಲುಪದವಾಗಿದೆ.

ವಚ್ಚೆ ಕದುರಾ ಸ್ವಜ್ಜ ಶೇನುಕಿ ಮಾ ಅತ್ತ
ನಡಿಗೆ ವಚ್ಚೆ ಕದುರಾ ಸ್ವಜ್ಜ ಶೇನುಕಿ
ಹೇ ಮೆಲ್ಲಗ ಮೆತ್ತಗಥತ್ತಾ ಜಂತಕಾ
ವಚ್ಚೆ ಕದುರಾ ಸ್ವಜ್ಜ ಶೇನುಕಿ ಮಾ ಅತ್ತ
ನಡಿಗೆ ವಚ್ಚೆ ಕದುರಾ ಸ್ವಜ್ಜ ಶೇನುಕಿ
ಆವು ಈನಿ ಗೂಡು ಸೇರೇರೊ ಮಾ
ಇಂಟಿನಾನಾ ಮ್ಯಾಕ ಕಟ್ಟೆ ಎವ್ರು ತ್ಯಾವರೋ
ಹೇ ಮೆಲ್ಲಗೆ ಮೆತ್ತಗಾ ಥತ್ತಾ ಜಂತಕ್ ದಿಗತಕಾ

(ವಕ್ತೃ: ಬಸಣ್ಣ, ಸಿದ್ದಯ್ಯನ ಕೋಟೆ, ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಜಾನಪದ ಕಲೆ ಮತ್ತು ಪ್ರದರ್ಶನಗಳಲ್ಲಿ ಹಾಸ್ಯ ರಸ ಉಕ್ಕಿ ಹರಿಯುವುದು ಸಾಮಾನ್ಯ ಸಂಗತಿ. ಕೋಲಾಟದಂಥ ಪ್ರದರ್ಶನ ಕಲೆಯಲ್ಲಿ ಹಾಸ್ಯ, ತಮಾಷೆ, ವಿನೋದಾವಳಿಗಳು ತುಸು ಹೆಚ್ಚೆಂದೇ ಹೇಳಬಹುದು. ಯಾವುದೇ ಜಾತಿ, ಸಮುದಾಯ, ಪಂಗಡಗಳಲ್ಲಿ ಕೋಲಾಟ ಕಲಿಸುವ ಕೋಲುಮೇಳಗಾರರು ಹಾಸ್ಯ, ತಮಾಷೆಗೆ ಸಂಬಂಧಪಟ್ಟಂತಹ ಕೋಲುಪದಗಳನ್ನು ಹೆಚ್ಚು ಹೆಚ್ಚಾಗಿ ಆಯ್ಕೆ ಮಾಡಿಕೊಳ್ಳುವುದು ಕಂಡುಬಂದಿದೆ.

ವಚ್ಚೆ ಕದುರಾ ಸ್ವಜ್ಜ ಶೇನುಕಿ ಮಾ ಅತ್ತ
ನಡಿಗೆ ವಚ್ಚೆ ಕದುರಾ ಸ್ವಜ್ಜ ಶೇನುಕಿ

ಎನ್ನುವ ಈ ಕೋಲುಪದ ತೆಲುಗಿನಲ್ಲಿದೆ. ಗೀತೆಯನ್ನು ಹಾಡಿದವರು ಮ್ಯಾಸಬೇಡ ಸಮುದಾಯಕ್ಕೆ ಸೇರಿದ ಸಣ್ಣಮಲ್ಲಯ್ಯ. ಮ್ಯಾಸಬೇಡರ ಮನೆ ಮಾತು ತೆಲುಗು. ಹಾಗಾಗಿ ಅವರು ಹಾಡುವ ಕೋಲಾಟ ಪದಗಳಲ್ಲಿ ಕನ್ನಡ ಮತ್ತು ತೆಲುಗು ಭಾಷೆಗಳನ್ನು ಏಕಕಾಲಕ್ಕೆ ಬಳಸುವುದು ಕಂಡು ಬರುತ್ತದೆ. ಈ ಕೋಲುಪದವು ಕೋಲಾಟ ಪ್ರದರ್ಶನ ವೀಕ್ಷಿಸಲು ಬಂದಿರುವವರಿಗೆ ಮನೋರಂಜನೆಯನ್ನು ಒದಗಿಸುವ ಸಲುವಾಗಿಯೋ ಅಥವಾ ಕೋಲುಮೇಳಗಾರರ ಅನುಭವದ ಹಿನ್ನೆಲೆಯಲ್ಲಿಯೇ ಹುಟ್ಟಿದಂತೆ ಕಾಣುತ್ತದೆ.

ಈ ಗೀತೆಯು ಅತ್ತೆಯ ಕುರಿತು ಮಾಡಿದಂಥ ಹಾಸ್ಯ ಪ್ರಸಂಗವೆಂದು ಹೇಳಬಹುದು. ಅತ್ತೆಯನ್ನು ನೋಡಿದ ಕೋಲು ಮೇಳಗಾರ ಅವಳ ಮೇಲೆ ಕೋಲುಪದವನ್ನು ತಕ್ಷಣಕ್ಕೆ ಕಟ್ಟಿ ಹಾಡಿರುವುದು ಕಾಣಬರುತ್ತದೆ. ಬೇರೆ ಬೇರೆ ರೀತಿಯಲ್ಲಿ ಈ ಕೋಲುಪದವನ್ನು ನೋಡುವುದಾದರೆ

ಅತ್ತೆಯಾಗುವಂಥ ಒಂದು ಹೆಣ್ಣು ಸಜ್ಜೆ ಹೊಲದಲ್ಲಿ ಕಟಾವಿಗೆ ಬಂದ ಸಜ್ಜೆತೆನೆ ಕಟಾವು ಮಾಡಲೋ ಅಥವಾ ಸಜ್ಜೆ ಸಪ್ಪೆ(ದಂಟು)ಗಳನ್ನು ಕತ್ತರಿಸಲು ಸಜ್ಜೆ ಹೊಲಕ್ಕೆ ಅತ್ತೆಯ ನಡಿಗೆಯ ಸವಾರಿ ನಡೆದಿರಬಹುದು(ಹೋಗಿರಬಹುದು) ಇಲ್ಲವೆ ಅತ್ತೆಯಾದವಳ ವಿನೋದಾವಳಿಗಳನ್ನು ಸಜ್ಜೆ ಹೊಲದಲ್ಲಿ ಕೋಲು ಮೇಳಗಾರ ನೋಡಿರಬಹುದು. ಹೀಗೆ ಕೋಲು ಮೇಳಗಾರ ಸಮಾಜದಲ್ಲಿ ನಡೆಯುವ ಹಲವು ತೆರನಾದ ಸಂಗತಿಗಳು ಅಥವಾ ಕಂಡುಂಡು ಅನುಭವಿಸಿದ ನೈಜ ಘಟನೆಗಳೇ ಹಾಸ್ಯ ತಮಾಷೆಗಳೇ ಕೋಲಾಟ ಪ್ರದರ್ಶನ ವೇಳೆ ಕೋಲುಪದಗಳಾಗಿ ಇತ್ಯಾದಿ ಹಾಡುಗಳಾಗಿ ಹುಟ್ಟಿಕೊಂಡ ಸಂಭವವಿದೆ.

### ೩.೫.೫. ಇತರೆ ಕೋಲುಪದಗಳು

ಕೋಲುಪದಗಳು ಹಲವು ರೀತಿಯ ವಸ್ತುವಿಷಯವನ್ನು ಒಳಗೊಂಡಿರುತ್ತವೆ. ಅವುಗಳಲ್ಲಿ ಪ್ರಮುಖವಾಗಿ ಶೃಂಗಾರ, ಹಾಸ್ಯ, ಸಾಮಾಜಿಕ ವಿಡಂಬನೆ, ದೇವರನ್ನು ಸ್ತುತಿಸುವುದು, ಚಾರಿತ್ರಿಕ ಸಂಗತಿ ಇತ್ಯಾದಿ ವಿಷಯಗಳನ್ನು ತನ್ನಲ್ಲಿ ಸೇರಿಸಿಕೊಂಡಿರುತ್ತವೆ. ಕೋಲುಪದದ ಸಾಹಿತ್ಯದಲ್ಲಿ ಕೆಲವೊಂದು ಸಂಗತಿಗಳನ್ನು, ಘಟನೆಗಳನ್ನು ನೇರವಾಗಿ ಹೇಳುವುದಿದೆ. ಹಾಗೆಯೇ ಕೆಲವೊಂದು ಸಂದರ್ಭ, ಸನ್ನಿವೇಶಗಳನ್ನು ನೇರವಾಗಿ ಹೇಳಲಾಗದ ವಿಚಾರಗಳನ್ನು ಪರೋಕ್ಷವಾಗಿ ಹಾಡಿನ ಮುಖಾಂತರ ತನ್ನ ಪ್ರೀತಿ ಪಾತ್ರರಿಗೆ ಅಥವಾ ಆಗದವರಿಗೆ ಕೋಲುಪದಗಳ ಮೂಲಕವೇ ನಿರೂಪಿಸಲಾಗುತ್ತದೆ. ಇಲ್ಲವೆ, ತಮಗೆ ಆಗದವರನ್ನು ಕೆಲವೊಂದು ಸಂದರ್ಭಗಳಲ್ಲಿ ನೇರವಾಗಿ ಖಂಡಿಸಲಾಗದಂತಹ ಸಂದರ್ಭಗಳಲ್ಲಿ ಪದಗಳ ಮುಖಾಂತರ ಅಂಥವರ ವಿರುದ್ಧ ಚಾಟಿ ಬೀಸುವುದು ಕೋಲುಪದಗಳಲ್ಲಿ ಕಾಣಸಿಗುತ್ತದೆ.

ಯಾವುದೇ ಹಬ್ಬ-ಹರಿದಿನ, ಜಾತ್ರೆ, ಉತ್ಸವ, ಮದುವೆ ಸಮಾರಂಭಗಳಲ್ಲಿ ಸುಗ್ಗಿ ಮುಗಿದ ನಂತರ ವಿರಾಮದ ವೇಳೆಯಲ್ಲಿ ಕೋಲಾಟ ಪ್ರದರ್ಶನ ಮಾಡುವುದು ಸಾಮಾನ್ಯ ಸಂಗತಿ. ಜಾತ್ರೆ, ಹಬ್ಬ-ಹರಿದಿನಗಳಲ್ಲಿ ಕೋಲು ಹುಯ್ಯುವ ಹಲವು ತಂಡಗಳು ಬೇರೆ ಬೇರೆ ಊರುಗಳಿಂದ ಬಂದು ಭಾಗವಹಿಸುತ್ತವೆ. ಅಂತಹ ಸಂದರ್ಭದಲ್ಲಿ ಒಂದು ತಂಡದ ಎದುರು ಮತ್ತೊಂದು ತಂಡವು ಸ್ಪರ್ಧೆ ನೀಡುವಾಗ ಎದುರಾಳಿ ಅಥವಾ ತನ್ನ ತಂಡದ ಎದುರಿಗೆ ಆಡುವಂಥ ತಂಡದ ಪ್ರದರ್ಶನ ವೈಖರಿಯನ್ನು ಹಾಡಿನ ಮುಖೇನ ಟೀಕಿಸುವುದು ಅಥವಾ ಹೀಯಾಳಿಸುವುದು, ಮೂದಲಿಸುವುದು ಮಾಡುತ್ತಾರೆ. ಆದರೆ ಇದು ನೇರವಾಗಿ ತರಾಟೆಗೆ ತೆಗೆದುಕೊಳ್ಳದೆ, ಪರೋಕ್ಷವಾಗಿ ತನ್ನ ಎದುರಾಳಿ ತಂಡವನ್ನು ಕೋಲುಪದದ ಮುಖಾಂತರ ನಿಂದಿಸುವುದು, ಟೀಕೆ ಮಾಡುವುದು ಕಂಡುಬರುತ್ತದೆ.

ಮೊಳಕಾಲ್ಮೂರಿನಲ್ಲಿ ನಡೆಯುವ ನುಂಕಮಲೆ ಸಿದ್ಧನ ಜಾತ್ರೆಯ ಸಂದರ್ಭದಲ್ಲಿ ಸಂಗ್ರಹಿಸಿದ ಕೋಲುಪದ. ಈ ಕೋಲುಪದವು ಎದುರಾಳಿ ತಂಡವನ್ನು ಪರೋಕ್ಷವಾಗಿ ನಿಂದಿಸುವಂಥ ವಿಚಾರವನ್ನು ತಿಳಿಸುತ್ತದೆ.

ಥಗ ದೈ ಜಂತಕಾ ದಿಗತಕ
ತದನ್ನ ಜಂತಕಾ
ಎಕ್ಕಿದಾರ ನಾ ಯಲ್ಲುದ್ದಿಕಾಡ
ಸೊದ್ದಿಕಿದಾರ ನಾ ಸಾವುದ್ದಿಕಾಡ
ಥತ್ತ ಜಂತಕಾ ದಿಗತಕ
ಹೇ ಹಳ್ಳಿಕೇರಿ ಬೋಳಿಮಗನೆ
ತಾಳಗತ್ತು ಸಿಕ್ಕಿ ತೇನೆ ।೨।
ಮೆಲ್ಲಗ ಥತ್ತ
ಜಂತಕಾ ಮೆತ್ತಗ ಥತ್ತ
ಜಂತಕಾ ದಿಗತಕ
ಹೇ ಎಮ್ಮೆ ಕೊಳ್ಳಿಗೆ ಗಂಟೆ ಕಟ್ಟಿದ್ರೆ
ಏಲು ತಿಂಬದು ಬಿಟ್ಟಿತೇನೆ
(ವಕ್ತೃ: ರಂಗಪ್ಪ, ಮೊಳಕಾಲ್ಮೂರು, ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಈ ಹಾಡಿನಲ್ಲಿ ಒಂದು ತಂಡದ ಮೇಲೆ ಮತ್ತೊಂದು ತಂಡದ ಕೋಲುಮೇಳಗಾರ ಅಥವಾ ಕೋಲುಗುರು ಟೀಕಾಸ್ತ್ರ ಪ್ರಯೋಗಿಸಿದ್ದಾರೆ. ಎರಡು ತಂಡಗಳು ಒಂದೆಡೆ ಸೇರಿದಾಗ ಪರಸ್ಪರರನ್ನು ಹಾಡಿನ ಮುಖಾಂತರ ನಿಂದಿಸುವುದನ್ನು ಕಾಣಬಹುದಾಗಿದೆ. ಈ ಹಾಡಿನಲ್ಲಿ ಅದು ಕಾಣುತ್ತದೆ. ಈ ಗೀತೆಯ ಒಂದು ಸಾಲು ಹೀಗಿದೆ, 'ಹಳ್ಳಿಕೇರಿ ಬೋಳಿ ಮಗನೆ ತಾಳಗತ್ತು ಸಿಕ್ಕಿತೇನೆ' ಎಂದು ಪರೋಕ್ಷವಾಗಿ ನಿಂದಿಸುತ್ತಾ, ಎದುರಾಳಿ ತಂಡದ ಪ್ರದರ್ಶನ ವೈಖರಿಯನ್ನು ಪ್ರಶ್ನೆ ಮಾಡಿರುವುದಿದೆ. ಅಂದರೆ ಪರೋಕ್ಷವಾಗಿ ಎದುರಾಳಿ ತಂಡವನ್ನು, ಹಳ್ಳಿ ಗಮಾರರು ನೀವು ಕೋಲು ಹುಯ್ಯುವ ತಾಳ, ಗತ್ತು-ಗತಿ, ಹೆಜ್ಜೆಗಳು ನಿಮಗೆ ಸರಿಯಾಗಿ ಬರುವುದಿಲ್ಲ ಎಂದು ಹಾಡಿನ ಮುಖಾಂತರ ಎದುರಾಳಿ ತಂಡವನ್ನು ಹೀಯಾಳಿಸುವುದಲ್ಲದೆ, ಅವರನ್ನು ರೊಚ್ಚಿಗೆಬ್ಬಿಸುವುದು ಈ ಹಾಡಿನಲ್ಲಿ ಕಾಣಸಿಗುತ್ತದೆ. ಹೀಗೆ ನೇರವಾಗಿ ಹೇಳಲಾರದ್ದನ್ನು ಕೋಲುಮೇಳಗಾರರು ತಮ್ಮ ಜಾಣ್ಮೆಯ ಮೂಲಕ ಪದಗಳನ್ನು ಹೊಸೆದು ಪರೋಕ್ಷವಾಗಿ ಹಾಡಿನ ಮುಖೇನ ನಿರೂಪಿಸಿರುವುದು ಈ ಗೀತೆಯಲ್ಲಿ ಕಾಣಸಿಗುತ್ತದೆ.

ಜಾತ್ರೆ, ಉತ್ಸವ, ಹಬ್ಬ-ಹರಿದಿನಗಳಲ್ಲಿ ಕೋಲು ತಂಡಗಳು ಬೇರೊಂದು ಊರಿಗೆ ಹೋದಾಗ ಕೋಲು ಪ್ರದರ್ಶನ ಮಾಡುವ ಪ್ರಾರಂಭಕ್ಕೂ ಮೊದಲು ಪ್ರಾರ್ಥನಾಗೀತೆ ಅಥವಾ ಗಣಸ್ತುತಿಯ ಗೀತೆಯನ್ನು ಹಾಡುವಂಥ ಸಂದರ್ಭದಲ್ಲಿ ಕೋಲುಪದದ ಮುಖಾಂತರ ಊರಿನ ಪ್ರಮುಖರಾದ ಗುರು, ಹಿರಿಯರ, ದೇವರ ಅನುಮತಿಯನ್ನು ನೇರವಾಗಿ ಕೇಳದೆ ಹಾಡಿನ ಮುಖಾಂತರ ಕೇಳಿ ಕೋಲು ಪ್ರದರ್ಶನವನ್ನು ಆರಂಭ ಮಾಡುತ್ತಾರೆ. ಅಂತಹ ಒಂದು ಪ್ರಾರ್ಥನಾ ಗೀತೆಯನ್ನು ಇಲ್ಲಿ ಉದಾಹರಣೆಯಾಗಿ ಪ್ರಸ್ತಾಪ ಮಾಡಲಾಗಿದೆ.

## ಗಣಸ್ತುತಿ

ಕೋಲು ಹೊಯ್ಯಾಕೆ ನಾವು ಬಂದೀವಿ
ಅಪ್ಪಣೆ ಕೊಡೀರಿ ನಮ್ಮಗೇ...
ನೀವು ದೇವರು ಹಿರಿಯರು ಕುಂತೀರಿ
ಶರಣವ ಮಾಡುವೆ ನಿಮ್ಮಗೇ...
(ವಕ್ತೃ: ರಾಜಪ್ಪ, ಮೊರಬ, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ)

ಬೇರೊಂದು ಊರಿಗೆ ಕೋಲಾಟ ಪ್ರದರ್ಶನ ನೀಡಲು ಹೋದಾಗ ಆ ತಂಡದ ನಾಯಕ ಅಥವಾ ಕೋಲುಮೇಳಗಾರ ಆ ಊರಿನ ಪ್ರಮುಖರನ್ನು, ಗುರು-ಹಿರಿಯರನ್ನು, ಕೋಲುಪದದ ಮೂಲಕವೇ ನಮಗೆ ಪ್ರದರ್ಶನ ನೀಡಲು ಈ ಊರಿನಲ್ಲಿ ಅನುವು ಮಾಡಿಕೊಡಬೇಕೆಂದು ಭಿನ್ನವಿಸಿಕೊಳ್ಳುತ್ತಾನೆ. ಇಲ್ಲಿ ಊರಿನ ಹಿರಿಯರನ್ನು ಸಂಧಿಸಿ ನೇರವಾಗಿ ಕೇಳುವುದಿಲ್ಲ. ಆದರೆ ಹಾಡಿನ ಮುಖಾಂತರವೇ ಕೋಲಾಟ ಪ್ರದರ್ಶನ ನೀಡಲು ಅನುಮತಿಯನ್ನು ಪರೋಕ್ಷವಾಗಿ ಕೇಳುವುದು ಈ ಗೀತೆಯಲ್ಲಿಯೂ ಕೂಡ ಕಂಡುಬಂದಿದೆ. ಇದು ಕೇವಲ ಕೋಲಾಟ ತಂಡಗಳು ಬೇರೆ ಊರಿಗೆ ಹೋದಾಗ ಪ್ರದರ್ಶನ ಮಾಡುವ ಕಾಲಕ್ಕೆ ಪರೋಕ್ಷವಾಗಿ ಅನುಮತಿ ಕೇಳುವುದು ಮತ್ತು ಪರಸ್ಪರ ಪ್ರತಿಸ್ಪರ್ಧಿ ತಂಡಗಳಿಗೆ ನೇರವಾಗಿ ನಿಂದಿಸಲಾಗದೇ, ಟೀಕಿಸಲಾಗದೆ ಪದಗಳ ಮೂಲಕ ನಿಂದಿಸಿ, ಹೀಯಾಳಿಸುವುದು ಕಂಡು ಬರುತ್ತದೆ. ಇದು ಬೇರೆ ಊರುಗಳ ಜಾತ್ರೆ-ಉತ್ಸವಗಳಿಗೆ ಹೋದಂಥ ಸಂದರ್ಭಗಳಲ್ಲಿ ನಡೆಯುತ್ತದೆ. ಹಾಗೆಯೇ ಸ್ವಸ್ಥಳದಲ್ಲಿಯೇ ಕೋಲಾಟ ಪ್ರದರ್ಶನ ಮಾಡುವ ಕಾಲಕ್ಕೆ ಸುಂದರವಾದ ಹೆಣ್ಣುಗಳಿಗೋಸ್ಕರ ನೈಜವಾಗಿ ನಡೆದ ಕೆಲವು ಘಟನೆಗಳು ಹಾಗೂ ತಾವು ಪಟ್ಟ ಪಡಿಪಾಟಲುಗಳನ್ನು ಕೋಲು ಮೇಳಗಾರರು ನೇರವಾಗಿ ಹೇಳದೆ ಅವುಗಳನ್ನು ಹಾಡುಗಳ ಮುಖೇನ ನೆರೆದ ಜನ ಜಂಗುಳಿಗೆ ಮನೋರಂಜನೆಯನ್ನು ನೀಡಲು ಪರೋಕ್ಷವಾಗಿ ಕೋಲುಪದಗಳ ಮುಖಾಂತರ ತೋರ್ಪಡಿಸುತ್ತಾರೆ.

ಒಬ್ಬಳು ಸುಂದರವಾದ ಹೆಣ್ಣಿಗೋಸ್ಕರ ಅನುಭವಿಸಿದ ಫಜೀತಿಯನ್ನು ಹಾಡಿನ ಮುಖೇನ ಹೇಳಿರುವುದನ್ನು ಈ ಕೋಲುಪದದಲ್ಲಿ ಕಾಣಬಹುದು.

ಹೌದೆ ಕೆಂಪಾನು ಮಾರೆಣ್ಣೆ ನಿನ
ಮ್ಯಾಲಿಟ್ಟಿದ್ದೆ ಬಹುದಿನ ಕಣ್ಣೆ ||೨||
ನನ್ನಂತ ಹುಡುಗನ್ನ ನೀನೆಂಗೆ ಬಿಟ್ಟೆ
ಕೋಟ್ಯಾಗಳ ಭರಮಂಗೆ ಮಾತೆಂಗೆ ಕೊಟ್ಟೆ ||೨||
ಹೌದೆ ಕೆಂಪಾನು ಮಾರೆಣ್ಣೆ ನಿನ
ಮ್ಯಾಲಿಟ್ಟಿದ್ದೆ ಬಹುದಿನ ಕಣ್ಣೆ
ನಿನಗಾಗಿ ಹಾರಿದ್ದೆ ಗೌಡ್ರ ಹೊಲ್ದಾಗ್ಳ ವೊಡ್ಡು ||೨||
(ವಕ್ತೃ: ಬಸವರಾಜಪ್ಪ, ಬಳ್ಳಾರಿ ತಾಲ್ಲೂಕು, ಬಳ್ಳಾರಿ ಜಿಲ್ಲೆ)

ಈ ಹಾಡಿನಲ್ಲಿ ಕೆಂಪಾದ ಮುಖವುಳ್ಳ ಸುಂದರಿಯನ್ನು ಇಷ್ಟಪಟ್ಟಿರುವ ಒಬ್ಬ ಯುವಕನು, ಆ ಸುಂದರ ಯುವತಿಗೆ ನೇರವಾಗಿ ಹೇಳದೆ ಪರೋಕ್ಷವಾಗಿ ಹಾಡಿನ ಮುಖಾಂತರ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದು ಗೋಚರಿಸುತ್ತದೆ. ತಾನು ಇಷ್ಟಪಟ್ಟಿರುವ ಹುಡುಗಿ ಬೇರೊಬ್ಬ ಯುವಕನನ್ನು ಇಷ್ಟಪಟ್ಟು ಒಪ್ಪಿಕೊಂಡಿರುವುದನ್ನು ಈ ಗೀತೆಯಲ್ಲಿ ಕಾಣಬಹುದು. ಹಾಗೆಯೆ ಆ ಸುಂದರಿಯು ಬೇರೊಬ್ಬ ಹುಡುಗನನ್ನು ಇಷ್ಟ ಪಟ್ಟಿರುವುದು, ಅವಳನ್ನು ಇಷ್ಟ ಪಡುವ ಹುಡುಗನಿಗೆ ತಿಳಿದು ಹೋಗಿದೆ. ಈ ವಿಚಾರವಾಗಿ ಆ ಹುಡುಗಿಯನ್ನು, ನನ್ನ ಬಿಟ್ಟು ಹೇಗೆ 'ಭರಮ' ಎನ್ನುವಂಥ ಹುಡುಗನನ್ನು ಒಪ್ಪಿಕೊಂಡೆ ಎಂಬುದಾಗಿ ಪ್ರಶ್ನೆ ಮಾಡಿರುವುದಿದೆ. ಹೀಗೆ ಕೋಲುಪದಗಳಲ್ಲಿ ನೇರವಾಗಿ ಹೇಳಲಾರದ ಹಲವು ರೀತಿಯ ವಿಷಯ, ಸಂದರ್ಭ ಮತ್ತು ಘಟನೆಗಳನ್ನು ಪರೋಕ್ಷವಾಗಿ ಪದಗಳ ಮುಖಾಂತರ ನಿರೂಪಿಸುವುದನ್ನು ಕಾಣಬಹುದು.

ಕೋಲುಪದಗಳಲ್ಲಿ ವಸ್ತುವಿಷಯವು ಹತ್ತು-ಹಲವು ಮಾದರಿಯಲ್ಲಿ ಕಾಣಸಿಗುತ್ತದೆ. ಅವುಗಳು ಶೃಂಗಾರ ಅಥವಾ ಪ್ರಣಯ, ಹಾಸ್ಯ, ಚಾರಿತ್ರಿಕ ಮತ್ತು ದೇವರನ್ನು ಸ್ತುತಿಸುವ ಪ್ರಾರ್ಥನಾ ಹಾಡುಗಳು, ಸಾಮಾಜಿಕ ವಿಡಂಬನೆ, ಹೀಗೆ ಹಲವು ವಿಧವಾಗಿ ಕಾಣಿಸಿಕೊಳ್ಳುತ್ತದೆ. ಈ ವಸ್ತುವಿಷಯದ ಕೋಲು ಪದಗಳಲ್ಲಿಯೂ ಕೂಡ ನೇರವಾಗಿ ಹೇಳದ ಹಲವು ವಿಚಾರಗಳನ್ನು, ಸಂಗತಿಗಳನ್ನು, ಘಟನೆಗಳನ್ನು ಹಾಡುಗಳ ಮುಖಾಂತರ ಅಭಿವ್ಯಕ್ತಿಸುವುದು ಕಂಡುಬರುತ್ತದೆ. ಹೆಚ್ಚಾಗಿ ಶೃಂಗಾರ ಮತ್ತು ಹಾಸ್ಯ ಮಾದರಿಯ ಕೋಲುಪದಗಳಲ್ಲಿ ನೇರವಾಗಿ ಹೇಳಲಾರದ ಸಂಗತಿಗಳನ್ನು ಪರೋಕ್ಷವಾಗಿ ಪದಗಳ ಮುಖೇನ ವ್ಯಕ್ತಪಡಿಸುವುದು ಕಂಡುಬಂದಿದೆ.



ಅಧ್ಯಾಯ : ನಾಲ್ಕು

# ಕನ್ನಡ ತೆಲುಗು ಕೋಲಾಟದ ಪದಗಳು

೪.೧. ಗಡಿನಾಡ ಕನ್ನಡ ಕೋಲುಪದಗಳು

೪.೨. ಗಡಿನಾಡ ಕನ್ನಡ ಕೋಲುಪದಗಳಲ್ಲಿ ಸಾಮ್ಯತೆಗಳು

೪.೩. ಗಡಿನಾಡ ತೆಲುಗು ಕೋಲುಪದಗಳು

೪.೪. ಗಡಿನಾಡ ತೆಲುಗು ಕೋಲುಪದಗಳಲ್ಲಿ ಸಾಮ್ಯತೆಗಳು

## ಅಧ್ಯಾಯ : ನಾಲ್ಕು

# ಕನ್ನಡ - ತೆಲುಗು ಕೋಲಾಟದ ಪದಗಳು

ಗಡಿನಾಡ ಪರಿಸರದಲ್ಲಿ ಒಂದು ರಾಜ್ಯದ ಸಂಸ್ಕೃತಿ ಮತ್ತೊಂದು ರಾಜ್ಯದ ಜನತೆಗೆ ವಿನಿಮಯವಾಗಿರುವುದು ಕಂಡು ಬಂದಿದೆ. ಗಡಿಭಾಗದ ಕನ್ನಡಿಗರು ವ್ಯಾಪಾರ, ಸಂಪರ್ಕ(ವೈವಾಹಿಕ ಸಂಬಂಧ) ಶಿಕ್ಷಣ ಹಾಗೂ ಸಾಂಸ್ಕೃತಿಕ ವಿಚಾರಗಳ ನೆಲೆಗಳಲ್ಲಿ ಗಡಿಯಾಚೆಗಿನ ರಾಜ್ಯದ ಜೊತೆಗೆ ಹೆಚ್ಚು ಸಂಬಂಧ ಬೆಳೆಸಿಕೊಂಡರೆ, ಆ ರಾಜ್ಯದ ಜನರ ಭಾಷೆ ಸಂಸ್ಕೃತಿಯ ಪ್ರಭಾವವು ನಮ್ಮ ಗಡಿಭಾಗದ ಜನರ ಮೇಲೆ ಆಗುವುದು ಸಹಜ. ಅದೇ ರೀತಿಯಾಗಿ ಬೇರೆ ರಾಜ್ಯದ ಜನರು ನಮ್ಮ ರಾಜ್ಯದ ಗಡಿ ಪರಿಸರದ ಸೌಲಭ್ಯಗಳ ಮೇಲೆ ಅವಲಂಬಿತರಾದರೆ ನಮ್ಮ ಭಾಷೆ, ರೂಢಿ-ಸಂಪ್ರದಾಯ ಸಂಸ್ಕೃತಿಗಳ ಪ್ರಭಾವವು ಆ ಜನತೆಯ ಮೇಲಾಗುವುದು ಸಹಜ. ಈ ನಿಟ್ಟಿನಲ್ಲಿ ಗಡಿಭಾಗದ ಪರಿಸರದಲ್ಲಿನ ವಾತಾವರಣವನ್ನು ಒಮ್ಮೆ ಅವಲೋಕಿಸಿದಾಗ, ಆಯಾ ರಾಜ್ಯದ ಗಡಿಯೊಳಗೆ ಇರುವ ಆಚಾರ-ವಿಚಾರ, ಉಡುಗೆ-ತೊಡುಗೆ, ರೂಢಿ-ಸಂಪ್ರದಾಯ, ಭಾಷೆ, ಶಿಕ್ಷಣ, ವ್ಯಾಪಾರ, ಜನಪದರ ಆಚರಣೆಗಳು ಇತ್ಯಾದಿ ಸಾಂಸ್ಕೃತಿಕ ವಿಚಾರಗಳಲ್ಲಿ ಪರಸ್ಪರ ಕೊಡು-ಕೊಳ್ಳುವಿಕೆ ನಡೆದಿರುವುದು ಕರ್ನಾಟಕ - ಆಂಧ್ರ ಗಡಿಪರಿಸರದಲ್ಲಿ ಕಾಣಬಹುದು. ಇವಿಷ್ಟೇ ಅಲ್ಲದೆ ಜನಪದ ಪ್ರದರ್ಶನ ಕಲೆಗಳಾದ ಬುರ್ರಕಥಾ, ಬಯಲಾಟ, ಕೋಲಾಟ, ದಾಸರಾಟ, ದೊಂಬರಾಟ, ಭಜನೆ, ಸೋಬಾನೆ ಮುಂತಾದ ಜನಪದ ಕಲೆಗಳಲ್ಲಿಯೂ ಕೊಡುಪಡೆ ಅವ್ಯಾಹತವಾಗಿ ನಡೆದಿದೆ. ಪ್ರಸ್ತುತದಲ್ಲಿಯೂ ಇದು ಮುಂದುವರೆದಿದೆ ಎನ್ನಬಹುದು. ಕರ್ನಾಟಕ - ಆಂಧ್ರ ಗಡಿ ಪರಿಸರದಲ್ಲಿ ಕೋಲಾಟವು ತುಂಬಾ ವಿಶಿಷ್ಟತೆಯನ್ನು ಉಳಿಸಿಕೊಂಡು ಬಂದಿದೆ.

### ೪.೧. ಗಡಿನಾಡ ಕನ್ನಡ ಕೋಲುಪದಗಳು

ಕರ್ನಾಟಕ - ಆಂಧ್ರ ಎರಡೂ ರಾಜ್ಯಗಳ ಗಡಿಯಂಚಿನಲ್ಲಿ ಕೋಲಾಟವನ್ನು ಹುಯ್ಯುವುದು ಗಡಿಭಾಗದ ಪ್ರತಿ ಹಳ್ಳಿಯಲ್ಲೂ ಸಾಮಾನ್ಯವಾಗಿ ಕಂಡುಬರುತ್ತದೆ. ಆಂಧ್ರ ಮತ್ತು ಕರ್ನಾಟಕದಲ್ಲಿ ಕೋಲಾಟ ಕಲೆ ತುಂಬಾ ಪ್ರಸಿದ್ಧಿ ಪಡೆದಿದೆ. ಕೋಲುಪದಗಳಲ್ಲಿ ಹಲವು ಭಿನ್ನತೆಗಳು, ಸಾಮ್ಯತೆಗಳು ನುಡಿಜಗಿತ, ನುಡಿಬೆರಕೆ ವಿಪುಲವಾಗಿ ಕಾಣಿಸಿಗುತ್ತವೆ. ಗಡಿನಾಡ ಪರಿಸರದಲ್ಲಿ ಮಾತ್ರವಲ್ಲದೆ ಗಡಿಯಾಚೆಗೂ ಕೋಲು ಹುಯ್ಯುವುದು ಕಂಡು ಬಂದಿದೆ. ಎರಡೂ ರಾಜ್ಯಗಳ ಗಡಿ ಪರಿಸರದಲ್ಲಿ

ಒಂದೇ ತೆರನಾದ ಧಾಟಿ, ಲಯ, ಗತಿ ಇವುಗಳನ್ನು ಒಳಗೊಂಡ ಹಲವು ಕೋಲಾಟ ಪದಗಳು ಕಾಣಸಿಗುವುದು ವಿಶೇಷವೆನಿಸುತ್ತದೆ. ಆದರೆ ಗಡಿಯಲ್ಲಿ ಈ ತರಹದ ಕೋಲುಪದಗಳು ಸಿಗುವುದು ತುಂಬಾ ವಿಶೇಷವಾಗಿ ತೋರಿ ಬಂದಿದೆ.

**೪.೨. ಗಡಿನಾಡ ಕನ್ನಡ ಕೋಲುಪದಗಳಲ್ಲಿ ಸಾಮ್ಯತೆಗಳು**

ಕರ್ನಾಟಕ ರಾಜ್ಯದಲ್ಲಿ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿನ ಬಹುಭಾಗ ಆಂಧ್ರ ಪ್ರದೇಶದ ಗಡಿ ಪರಿಸರಕ್ಕೆ ಹೊಂದಿಕೊಂಡಿದೆ. ಇದು ಆಂಧ್ರದ ಅನಂತಪುರಂ ಜಿಲ್ಲೆಯ ರಾಯದುರ್ಗದ ತಾಲೂಕಿನ ಗಡಿಯೊಂದಿಗೆ ಸಾಮರಸ್ಯವಿರಿಸಿಕೊಂಡಿದೆ. ಈ ತಾಲೂಕಿನ ಬಹುಪಾಲು ಶೇ. ೧೦೦ಕ್ಕೆ ೮೦ರಷ್ಟು ಜನರು ತೆಲುಗು ಭಾಷೆಯನ್ನು ಮಾತಾಡುವುದು ಕಂಡುಬಂದಿದೆ.

ಮೊಳಕಾಲ್ಮೂರು ತಾಲೂಕಿನ ವ್ಯಾಪ್ತಿಯಲ್ಲಿ ಬರುವ ಕಂಪಳದೇವರಹಟ್ಟಿಯಲ್ಲಿ (ಚಿಕ್ಕುಂತಿ-ಚಿಕ್ಕಕುಮತಿ) ಕೋಲಾಟ ಮತ್ತು ಕೋಲುಪದಗಳ ಕುರಿತು ಮಾಹಿತಿ ಸಂಗ್ರಹಿಸಲು ಕ್ಷೇತ್ರಕಾರ್ಯ ಮಾಡಿದ ಆ ಸಮಯದಲ್ಲಿ ಸಂಗ್ರಹಿಸಿದ ಒಂದು ಕೋಲುಪದ ಹೀಗಿದೆ.

**ಕೋಲುಪದ**

ಮಲ್ಲಿಗೆ ಸಣ್ಣಮಲ್ಲಿಗೆ |
ಮಾತನಾಡು ಮಲ್ಲಿಗೆ |೨|
ಬೇವಿನ ಹುವ್ವಾ ಸಣ್ಣದು |
ಬೇವಿನಕಾಯಿ ದೊಡ್ಡದು
ಮಾವಿನ ಹೂವ್ವಾ ಸಣ್ಣದು |
ಮಾವಿನಕಾಯಿ ದೊಡ್ಡದು
ಮಲ್ಲಿಗೆ ಸಣ್ಣ ಮಲ್ಲಿಗೆ |
ಮಾತನಾಡುಮಲ್ಲಿಗೆ |೨|
ಜಾಲಿ ಹುವ್ವಾ ಸಣ್ಣದು |
ಜಾಲಿ ಕಾಯಿ ದೊಡ್ಡದು
ಹೀರೆ ಹುವ್ವಾ ಸಣ್ಣದು |
ಹಿರೇಕಾಯಿ ದೊಡ್ಡದು
ಕುಂಬಳು ಹುವ್ವಾ ಸಣ್ಣದು |
ಕುಂಬಳಕಾಯಿ ದೊಡ್ಡದು
ಹುರುಳಿ ಹುವ್ವಾ ಸಣ್ಣದು |
ಹುಳ್ಳಿ ಕಾಯಿ ದೊಡ್ಡದು

(ವಕ್ತೃ: ಗೌಡ್ರಗಟ್ಟಯ್ಯ, ಸೂರಮ್ಮನಹಳ್ಳಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಗಿಡ-ಮರ-ಬಳ್ಳಿಗಳಲ್ಲಿ ಫಲವಂತಿಕೆಯ ಹಿನ್ನೆಲೆಯಲ್ಲಿ ಹೂವು-ಕಾಯಿ-ಹಣ್ಣುಗಳಲ್ಲಿನ ವ್ಯತ್ಯಾಸಗಳನ್ನು, ಭಿನ್ನತೆಗಳನ್ನು ತೋರ್ಪಡಿಸುವ ಕೋಲುಪದವಾಗಿದೆ. ಈ ಗೀತೆಯಲ್ಲಿ ಭಿನ್ನತೆಗಳನ್ನು

ಮಾತ್ರ ವ್ಯಕ್ತಪಡಿಸದೆ ಹೂವು, ಕಾಯಿ ಮತ್ತು ಹಣ್ಣುಗಳಾಗಲು ಅದರ ಹಿಂದಿರುವ ಹೂವಿನ ಸಾರಸತ್ವವನ್ನು ಬಿತ್ತರಿಸುತ್ತದೆ ಹಾಗೂ ಈ ಕೋಲುಪದದಲ್ಲಿ ಜನಪದರು ತಮ್ಮ ದೇವರು-ದಿಂಡರುಗಳಿಗೆ ಪೂಜೆ ಪುರಸ್ಕಾರಗಳಿಗೆ ಸಲ್ಲಿಸುವಂಥ ಮಲ್ಲಿಗೆ ಹೂವಿನಿಂದ ಹಿಡಿದು ಜನರಿಂದ ತಿರಸ್ಕೃತವಾಗಿರುವ, ದಾಸರಂಥ ಪುರಂದರದಾಸರ ಕೀರ್ತನೆಗಳಲ್ಲಿ ವ್ಯಂಗ್ಯ-ವಿಡಂಬನೆಗೆ ಈಡಾಗಿರುವ ಜಾಲಿಯ ಹೂವಿನ ಪ್ರಸ್ತಾಪ ಕೋಲಾಟ ಪದದಲ್ಲಿ ಮಾಡಿರುವುದು ಸ್ತುತ್ಯಾರ್ಹವಾದ ಸಂಗತವೆನಿಸುತ್ತದೆ.

ದಾಸರೆಂದರೆ ಪುರಂದರದಾಸರಯ್ಯ ಎಂದು ತನ್ನ ಗುರುಗಳಾದ ವ್ಯಾಸರಾಯರಿಂದ ಹೊಗಳಿಸಿಕೊಂಡ ಪುರಂದರದಾಸರು ತಮ್ಮ ಕೀರ್ತನೆಗಳಲ್ಲಿ ಸಾಮಾಜಿಕ ವಿಡಂಬನೆ ಮಾಡುವ ಕಾಲಕ್ಕೆ ಸಮಾಜದಲ್ಲಿನ ದುಷ್ಟರನ್ನು, ದುರ್ಜನರನ್ನು ಮುಳ್ಳು-ಕಂಟೆಯ ಮರಗಳಿಗೆ ಹೋಲಿಸುವ ಪ್ರಸಂಗವಿದೆ. ಇಲ್ಲಿ ಜಾಲಿಯ ಮರವನ್ನು ಸಮಾಜದಲ್ಲಿ ದುಷ್ಟ ಜನರಿಗೆ - ಕೆಟ್ಟ ಜನಗಳಿಗೆ ಉದಾಹರಣೆ ನೀಡಿ ದುರ್ಜನರ ದುರ್ಗುಣಗಳನ್ನು ಪುರಂದರರು ಜಾಲಿಯ ಮರಕ್ಕೆ ತಳುಕು ಹಾಕಿರುವುದು ವಿಪರ್ಯಾಸದ ಸಂಗತಿ ಎನಿಸುತ್ತದೆ.

**ಪುರಂದರದಾಸರ ಕೀರ್ತನೆ**

ಜಾಲಿಯ ಮರದಂತೆ ಧರೆಯೊಳು
ದುರ್ಜನರು ಜಾಲಿಯ ಮರದಂತೆ

(ಡಾ. ಎಸ್.ಎಸ್. ಅಂಗಡಿ; ದಾಸಸಾಹಿತ್ಯ ಶಬ್ದ ಶಿಲ್ಪ; ಪುಟ ೩೬)

ಎಂದು ನಿಂದಿಸಿ ನಿರಾಕರಿಸಿರುವುದು ಕಾಣುತ್ತದೆ. ಜನರಿಂದ, ಪುರಂದರದಾಸರಿಂದ ತಿರಸ್ಕೃತವಾದ ಈ ಜಾಲಿಯ ಮರದ ಹೂವು, ಕಾಯಿಗಳನ್ನು ಜನಪದರು ತಮ್ಮ ಕೋಲಾಟ ಪದಗಳಲ್ಲಿ ಒಂದು ಭಾಗವಾಗಿ ಅದನ್ನು ಪ್ರಸ್ತಾಪಿಸಿರುವುದು ಕೋಲಾಟ ಪದಗಳ ವಿಸ್ತಾರವಾದ ವ್ಯಾಪ್ತಿಯನ್ನು ಇದು ಸೂಚಿಸುತ್ತದೆ. ಈ ಹಾಡಿನಲ್ಲಿರುವ ಮತ್ತೊಂದು ಗಹನವಾದ ವಿಚಾರವೆಂದರೆ ಹೂವು ಎಷ್ಟೇ ಸಣ್ಣ ಪ್ರಮಾಣದಲ್ಲಿದ್ದರೂ ಅದರ ಒಳಗೆ ಅಡಗಿರುವ ಫಲವಂತಿಕೆಯ ಪ್ರಮಾಣವಾದ ಕಾಯಿ-ಹಣ್ಣುಗಳು ಹೂವಿಗಿಂತ ದೊಡ್ಡ ಪ್ರಮಾಣದಲ್ಲಿರುತ್ತವೆ. "ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು" ಎಂಬ ಗಾದೆ ಮಾತು ಹೂವಿನ ವಿಚಾರದಲ್ಲಿ ಅತ್ಯಂತ ಸೂಕ್ತವಾದ ಅನ್ವಯವೆನಿಸುತ್ತದೆ. ಅಂದರೆ ಹೂವು, ಚಿಕ್ಕದಾದರೂ ಅದರೊಳಗಡೆಗಿರುವ ಸಾರತೆ ತುಂಬಾ ಗಟ್ಟಿತನದಿಂದ ಕೂಡಿದೆ ಎನ್ನುವಂಥ ಸಾರಾಂಶವನ್ನು ಈ ಕೋಲುಪದದ ಮುಖಾಂತರ ತಿಳಿಸುವ ಪ್ರಯತ್ನವಿರಬಹುದೇ? ಅಥವಾ ಬಿಡುವಿನ ವೇಳೆಯಲ್ಲಿ ಮನೋರಂಜನೆಗಾಗಿ ಹುಟ್ಟಿಕೊಂಡಿರುವ ಹಾಡುಗಳು ಈ ರೀತಿ ಪ್ರಾಕೃತಿಕ ಸಂಬಂಧಗಳನ್ನು ಬೆಸೆದುಕೊಂಡಿರುವ ಸಾಹಿತ್ಯವನ್ನು ಸೃಷ್ಟಿಸಿಕೊಂಡಿರಬಹುದು.

ಈಗಾಗಲೇ ನೋಡಿದ ಕೋಲುಪದದ ಧಾಟಿಯಲ್ಲಿಯೇ. ಅದೇ ರೀತಿಯ ವಸ್ತು ವೈವಿಧ್ಯತೆಯನ್ನು ಒಳಗೊಂಡಿರುವ ಹಾಡನ್ನು ಸಂಗ್ರಹಿಸಿಕೊಂಡಿರುವುದು ಕರ್ನೂಲು ಜಿಲ್ಲೆಯ ಆಲೂರು ತಾಲೂಕಿನ ವ್ಯಾಪ್ತಿಯಲ್ಲಿ ಬರುವ ಸಿದ್ಧಾಪುರಂ ಎಂಬ ಹಳ್ಳಿಯಲ್ಲಿ ಇದು ಮೊಳಕಾಲ್ಮೂರು

ತಾಲೂಕಿನಲ್ಲಿ ದೊರಕಿದ ಕೋಲುಪದದ ಶೈಲಿಯಲ್ಲಿಯೇ ಈ ಹಾಡನ್ನು ಹಾಡಿರುವುದು ಕಂಡು ಬಂದಿದೆ.

ಹೇ ಮಲ್ಲಿಗೆ ಮಾತನಾಡೆ ಸೇವಂತಿಗೆ | ರುವ್ವಾ ನೋಡಿ ದಾನ ಕೊಡೆ |
ಹೇ ಕುಂಬಳ ಕಾಯಿ ದೊಡ್ಡದು | ಕುಂಬಳ ಹುವ್ವಾ ಸಣ್ಣದು
ಕುಂಬಾರು ಪುರಿ ಮೇಲೆ ಏರಿ ಬಾ ಮಲ್ಲಿಗೆ
ಹೇ ಮಲ್ಲಿಗೆ ಮಾತನಾಡೆ ಸೇವಂತಿಗೆ | ರುವ್ವಾ ನೋಡಿ ದಾನ ಕೊಡೆ
ಹೇ ಹಾಗಲಕಾಯಿ ದೊಡ್ಡದು | ಹಾಗಲ ಹುವ್ವಾ ಸಣ್ಣದು
ಹಾರಾರು ಪುರಿ ಮೇಲೆ | ಏರಿ ಬಾ ಮಲ್ಲಿಗೆ
ಹೇ ಮಲ್ಲಿಗೆ ಮಾತನಾಡೆ ಸೇವಂತಿಗೆ | ರುವ್ವಾ ನೋಡಿ ದಾನ ಕೊಡೆ

(ವಕ್ತೃ: ತಿಕ್ಕಯ್ಯ ನಾಯಕ, ಸಿದ್ಧಾಪುರಂ, ಆಲೂರು ತಾಲ್ಲೂಕು, ಕರ್ನೂಲ್ ಜಿಲ್ಲೆ)

ದೇವರ ಮುಡಿಗೇರುವ ಮಲ್ಲಿಗೆ ಹೂವಿನಿಂದ ಹಿಡಿದು, ಹಾಗಲಕಾಯಿ, ಕುಂಬಳದಂಥ ಹೂವುಗಳನ್ನು ಪ್ರಸ್ತಾಪಿಸಿರುವುದು ಈ ಕೋಲುಪದದಲ್ಲಿ ಕಂಡುಬಂದಿದೆ. ಜನಪದರಿಗೆ ಇಂತಹುದೇ ವಸ್ತುವಿಷಯವಾಗಬೇಕೆಂಬ ನಿಯಮವಿಲ್ಲ. ಅವರ ನುಡಿಗಳಲ್ಲಿ ಹಾಗಲ, ಕುಂಬಳದಂಥ ಸಾಮಾನ್ಯ ವಿಷಯವನ್ನು ತಂದು ಅದನ್ನೇ ಹಾಡಾಗಿ ರೂಪಿಸಿ ತಮ್ಮ ಪಾರಂಪರಿಕ ಕಲೆಗಳಲ್ಲಿ ಬಳಸುವುದು ಅವರಿಗೆ ಕರಗತವಾಗಿತ್ತು ಮತ್ತು ಅದು ಅವರಿಗೆ ಸಿದ್ಧಿಸಿರುವ ವರವಾಗಿದೆ. ಈ ರೀತಿಯ ಹೂ, ಕಾಯಿ, ಹಣ್ಣುಗಳನ್ನು ತಮ್ಮ ಕೋಲಾಟ ಪದಗಳಲ್ಲಿ ವಸ್ತುವಿಷಯವಾಗಿಸಿರುವುದು ಜನಪದರ ಜ್ಞಾನಕ್ಕೆ ಹಿಡಿದ ಕನ್ನಡಿಯಾಗಿದೆ.

ಈ ಎರಡೂ ಕೋಲಾಟ ಪದಗಳಲ್ಲಿ ಒಂದೇ ರೀತಿಯ ವಸ್ತುವಿಷಯಗಳನ್ನು ಮತ್ತು ಒಂದೇ ರೀತಿಯ ಶೈಲಿಯಲ್ಲಿ ಹಾಡುವಂತಹುದು ಕಾಣಬಹುದು. ಹಾಗಾಗಿ ಈ ಪದದಿಂದ ಗಡಿನಾಡ ಕೋಲಾಟ ಪದಗಳಲ್ಲಿ ಸಮಾನವಾದ ಅಂಶಗಳು ಒಳಗೊಂಡಿವೆ ಎಂಬುದಕ್ಕೆ ಇಲ್ಲಿನ ಕೋಲುಪದವೇ ಸಾಕ್ಷಿಯಾಗಿದೆ. ಗಡಿಪರಿಸರದ ಈ ಹಾಡುಗಳಲ್ಲಿ ಒಂದೇ ತರಹದ ಹಾಡುಗಳು ಸಿಗುತ್ತವೆ. ಅವುಗಳಲ್ಲಿ ಕೆಲವು ಮಾರ್ಪಾಡುಗಳಾಗುತ್ತವೆ ಅಷ್ಟೆ.

ಇಲ್ಲಿನ ಎರಡೂ ಹಾಡುಗಳ ತಾತ್ಪರ್ಯವನ್ನು ಈ ರೀತಿ ಹೇಳಬಹುದು. ಹೂವಿನ ಆಕಾರ, ಗಾತ್ರ ಚಿಕ್ಕದಾದರೂ ಅದರಿಂದ ಹೊರಹೊಮ್ಮುವಂತಹ ಕಾಯಿ ಅಥವಾ ಹಣ್ಣುಗಳಂಥ ದೊಡ್ಡ ಗಾತ್ರದ ಪ್ರಮಾಣವನ್ನು ಹೂಗಳು ತನ್ನೊಡಲಲ್ಲಿ ಗರ್ಭೀಕರಿಸಿಕೊಂಡಿರುತ್ತದೆ ಹಾಗೂ ಎರಡೂ ಕೋಲುಪದಗಳಲ್ಲಿ ಹೂವಿನ ಪ್ರಾಧಾನ್ಯತೆಯನ್ನು ಮತ್ತು ಅವುಗಳ ಹಿರಿಮೆಯನ್ನು ಸಾರುವಂತಹ ಪದವಾಗಿದೆ.

ಈಗಾಗಲೇ ನೋಡಿದಂತಹ ಕೋಲುಪದವನ್ನು ಆಂಧ್ರದ ಕರ್ನೂಲು(ಜಿ) ಆಲೂರು ತಾಲೂಕಿನ ಸಿದ್ದಾಪುರಂ ಮತ್ತು ಕರ್ನಾಟಕದ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿನ ಕಂಪಳದೇವರಹಟ್ಟಿಯಲ್ಲಿ ಸಂಗ್ರಹಿಸಿಕೊಳ್ಳಲಾಗಿದೆ. ಈ ಗೀತೆಯನ್ನು ಸಂಗ್ರಹಿಸಿದ ಸಿದ್ದಾಪುರಂಗೂ

ಮತ್ತು ಕಂಪಳದೇವಹಟ್ಟಿಗೂ ಸುಮಾರು ೧೨೦-೧೩೦ ಕಿಲೋಮೀಟರ್‌ಗಳ ಅಂತರವಿದೆ. ಆದರೂ ಈ ಕೋಲುಪದವು ನೂರಾರು ಕಿಲೋಮೀಟರ್‌ಗಳವರೆಗೆ ದೂರದಲ್ಲಿರುವ ಅಂತರಾಜ್ಯದ ಗಡಿ ತಾಲೂಕಿಗೆ ಪ್ರಸರಣವಾಗಿರುವುದು ಕುತೂಹಲವನ್ನು ಮೂಡಿಸುತ್ತದೆ. ಸೋಜಿಗದ ಸಂಗತಿ ಎಂದರೆ ಮೊಳಕಾಲ್ಮೂರು ವ್ಯಾಪ್ತಿಗೆ ಸೇರುವ ಕಂಪಳದೇವರಹಟ್ಟಿಯಲ್ಲಿ ಈ ಕೋಲುಪದವನ್ನು ಹಾಡಿದವರು ಬೇಡ ಬುಡಕಟ್ಟಿಗೆ ಸೇರಿದ ಸಣ್ಣಮಲ್ಲಯ್ಯ ಎನ್ನುವಂತಹ ವ್ಯಕ್ತಿ. ಹಾಗೆಯೇ ಕರ್ನಾಟಕದ ಗಡಿಭಾಗಕ್ಕೆ ಸೇರಿಕೊಂಡಿರುವ ಆಲೂರು ತಾಲೂಕಿನ ಸಿದ್ದಾಪುರಂನಲ್ಲಿ ಈ ಗೀತೆಯನ್ನು ಹಾಡಿದವರು ಬೇಡ ಸಮುದಾಯಕ್ಕೆ ಸೇರಿದ ತಿಕ್ಕಪ್ಪ ಎನ್ನುವಂತಹ ವ್ಯಕ್ತಿ. ಒಂದೇ ಗೀತೆಯನ್ನು ಒಂದೇ ಪ್ರಕಾರದ ವಸ್ತುವೈವಿಧ್ಯತೆ ಹೊಂದಿರುವ ಹಾಡನ್ನು, ಒಂದೇ ಬುಡಕಟ್ಟಿಗೆ ಸೇರಿದ ಕೋಲಾಟ ತಂಡದ ನಾಯಕರು ಅಥವಾ ಮೇಳಗಾರರು ಅಥವಾ ಹಾಡುಗಾರರು ಕರ್ನಾಟಕ-ಆಂಧ್ರ ಗಡಿಭಾಗದ ಪರಿಸರದಲ್ಲಿ ಅಲ್ಪ ವ್ಯತ್ಯಾಸಗಳನ್ನು ಮಾಡಿಕೊಂಡು ಹಾಡುತ್ತಾ ಬಂದಿರುವುದಲ್ಲದೇ ಈ ಮೌಖಿಕ ಪರಂಪರೆಯನ್ನು ಕಾಯ್ದುಕೊಂಡು ಬಂದಿರುವುದು ಆ ಸಮುದಾಯದ ಪರಂಪರೆ ಮತ್ತು ಸಂಸ್ಕೃತಿಯನ್ನು ವಿವೇಚಿಸುತ್ತದೆ.

ತೆಲುಗು-ಕನ್ನಡ ಗಡಿಭಾಗದಲ್ಲಿ ದೊರಕಿದ ಈ ಕೋಲುಪದ ಕೋಲಾಟದಲ್ಲಿ ತಾಳಗಡ್ಡಿ ಪ್ರಕಾರಕ್ಕೆ ಸೇರುತ್ತದೆ. ಹಾಡಿನ ಪಲ್ಲವಿ ಈ ರೀತಿಯಾಗಿ ಆರಂಭವಾಗುತ್ತದೆ.

ಮಲ್ಲಿಗೆ ಸಣ್ಣಮಲ್ಲಿಗೆ ಮಾತನಾಡು ಮಲ್ಲಿಗೆ
ಬೇವಿನ ಹುವ್ವಾ ಸಣ್ಣದು ಬೇವಿನಕಾಯಿ ದೊಡ್ಡದು

ಹೀಗೆ ಆರಂಭವಾದ ಈ ಗೀತೆಯಲ್ಲಿ ಕೋಲುಪದ ಹಾಡುಗಾರರ ಕಣ್ಣೋಟಕ್ಕೆ ಸಿಕ್ಕ ಪ್ರತಿಯೊಂದು ಮರ-ಬಳ್ಳಿಯ ಹೂ-ಕಾಯಿಗಳ ಪ್ರಸ್ತಾಪವನ್ನು ಮಾಡುತ್ತದೆ. ಈ ಕೋಲುಪದವನ್ನು ನಿರರ್ಗಳತೆ ಮತ್ತು ನಿರಂತರತೆಯನ್ನು ಕಾಯ್ದುಕೊಂಡು ಹಾಡುವುದು ಅವರ ಹುರುಪು-ಹುಮ್ಮಸ್ಸನ್ನು ತೋರಿಸುತ್ತದೆ. ತೆಲುಗು ನಾಡಿನಲ್ಲಿ, ಕನ್ನಡದ ಗಡಿ ಪರಿಸರದಲ್ಲಿ ದೊರಕಿದ ಕೋಲುಪದ ಹಾಗೂ ಈಗಾಗಲೇ ನೋಡಿದ ಹಾಡುಗಳಲ್ಲಿ ಸಮಾನಾಂಶಗಳನ್ನು ಒಳಗೊಂಡಿವೆ. ಅದೇ ತರಹದ ಹಾಡು ಈ ರೀತಿಯಾಗಿ ಆರಂಭವಾಗುತ್ತದೆ.

ಹೇ ಮಲ್ಲಿಗೆ ಮಾತನಾಡೆ ಸೇವಂತಿಗೆ ರುವ್ವಾ ನೋಡಿ ದಾನ ಕೊಡೆ
ಹೇ ಕುಂಬಳಕಾಯಿ ದೊಡ್ಡದು ಕುಂಬಳ ಹುವ್ವಾ ಸಣ್ಣದು
ಕುಂಬಾರು ಪುರಿ ಮೇಲೆ ಏರಿ ಬಾ ಮಲ್ಲಿಗೆ

ಕನ್ನಡ ನಾಡಿನ ಗಡಿ ಪರಿಸರದ ಕೋಲುಪದಕ್ಕಿಂತ ತೆಲುಗಿನ ನಾಡಿನಲ್ಲಿ ದೊರಕಿದ ಗೀತೆಯಲ್ಲಿ ಅಲ್ಪ ವ್ಯತ್ಯಾಸವನ್ನು ಗಮನಿಸಬಹುದು. ಕನ್ನಡನಾಡಿನಲ್ಲಿ ದೊರಕಿದ ಕೋಲುಪದದಲ್ಲಿ "ಬೇವಿನ ಹುವ್ವಾ ಸಣ್ಣದು ಬೇವಿನಕಾಯಿ ದೊಡ್ಡದು" ಎಂದು ಬೇವಿನ ಹೂವಿನಿಂದ ಹಾಡು ಆರಂಭ ಮಾಡಿದರೆ, ತೆಲುಗು ಗಡಿನಾಡಿನ ಪರಿಸರದಲ್ಲಿ ದೊರಕಿದ ಇದೇ ಮಾದರಿಯ ಗೀತೆ

“ಕುಂಬಳ ಕಾಯಿ ದೊಡ್ಡದು, ಕುಂಬಳ ಹುವ್ವಾ ಸಣ್ಣದು' ಎಂದು ಪ್ರಾರಂಭವಾಗುತ್ತದೆ. ತೆಲುಗು ನಾಡಿನ ಕೋಲುಪದವು ಕುಂಬಳಕಾಯಿಯ ನಂತರ ಹೂವಿನ ಪ್ರಸ್ತಾಪ ಮಾಡಲಾಗಿದೆ.

ಪ್ರಕೃತಿಯಲ್ಲಿ ಯಾವುದೇ ಗಿಡ-ಮರ ಬಳ್ಳಿಗಳಲ್ಲಿ ಹೂವಿನಿಂದ-ಕಾಯಿ-ಹಣ್ಣಾಗುವುದು ಸಹಜವಾದ ಪ್ರಕ್ರಿಯೆ. ಕನ್ನಡ ನಾಡಿನಲ್ಲಿ ದೊರಕಿದ ಕೋಲುಪದದಲ್ಲಿ ಅದು ಕಂಡುಬಂದಿದೆ.

ಬೇವಿನಹೂವಿನ ನಂತರ ಬೇವಿನಕಾಯಿಯ ಪ್ರಸ್ತಾಪವು ಸಹಜವೇ ಆಗಿದೆ. ತೆಲುಗು ನಾಡಿನ ಗಡಿ ಪರಿಸರದಲ್ಲಿ ದೊರಕಿದ ಈ ಕೋಲಾಟದ ಗೀತೆಯಲ್ಲಿ ಕುಂಬಳಕಾಯಿಯ ನಂತರ ಕುಂಬಳ ಹೂವಿನ ಪ್ರಸ್ತಾಪ ಮಾಡಲಾಗಿದೆ. ಪ್ರಾಕೃತಿಕ ಸಹಜ ಪ್ರಕ್ರಿಯೆಯನ್ನು ಹಿಂದೆ-ಮುಂದೆ ಮಾಡಿರುವುದು ಕಂಡುಬಂದಿದೆ.

ಕನ್ನಡ - ತೆಲುಗು ಗಡಿನಾಡ ಪರಿಸರದ ಕೋಲಾಟಪದಗಳಲ್ಲಿ ಈ ರೀತಿಯ ಮಾರ್ಪಾಡುಗಳು ಸಹಜವಾಗಿ ಕಂಡು ಬರುವುದಿದೆ. ಕೋಲಾಟದ ಪದಗಳ ಸಾಹಿತ್ಯದಲ್ಲಿನ ಕೊಂಚಮಟ್ಟಿನ ಮಾರ್ಪಾಡಿನಿಂದ, ಕೋಲಾಟದ ಪ್ರದರ್ಶನಕ್ಕಾಗಲೀ, ಗತಿಗಳಿಗಾಗಲಿ ಯಾವುದೇ ರೀತಿಯ ಅಡಚಣೆ ಉಂಟಾಗದು.

ಈಗಾಗಲೇ ಚರ್ಚೆಗೊಳಗು ಮಾಡಿದ ಕೋಲುಪದವನ್ನು ಪ್ರಥಮವಾಗಿ ಬಳಕೆ ಮಾಡಿದವರು ಯಾರು? ಕನ್ನಡ ನಾಡಿನ ಗಡಿ ಪರಿಸರದ ಜನಪದರೆ? ಅಥವಾ ತೆಲುಗು ನಾಡಿನ ಗಡಿ ಪರಿಸರದಲ್ಲಿ ನೆಲೆಸಿರುವ ಕನ್ನಡಿಗರಾದ ಜನಪದರೇ? ಎಂಬಿತ್ಯಾದಿ ಅನುಮಾನಗಳು ಕಾಡುವುದಂತೂ ನಿಜ. ಮೂಲತಃ ಈ ಕೋಲುಪದವು ಕನ್ನಡ ಭಾಷೆಯದಾಗಿದೆ. ಕನ್ನಡ - ತೆಲುಗು ಎರಡೂ ಗಡಿನಾಡ ಪರಿಸರಗಳಲ್ಲಿ ಒಂದೇ ಮಾದರಿಯ, ಧಾಟಿಯ, ಒಂದೇ ವಸ್ತುವೈವಿಧ್ಯತೆಯ ಹಾಡು ಸಿಕ್ಕಿರುವುದು ಕನ್ನಡ ಭಾಷೆಯಲ್ಲಿನ ಒಂದು ಕೋಲುಪದ ಎಂಬುದು ವಿಶೇಷವೆನಿಸಿದೆ. ಎರಡೂ ಪ್ರಾಂತಗಳಲ್ಲಿ ಈ ಗೀತೆಯನ್ನು ಹಾಡಿದವರು ಕನ್ನಡ-ತೆಲುಗು ಎರಡೂ ಭಾಷೆಗಳನ್ನು ಸಹಜವಾಗಿ ಮಾತನಾಡುವವರಾಗಿದ್ದಾರೆ. ಕನ್ನಡ ನಾಡಿನ ಗಡಿಭಾಗದಲ್ಲಿ ಕನ್ನಡ-ತೆಲುಗು ಎರಡೂ ಭಾಷೆಗಳನ್ನು ಬಲ್ಲವರಿದ್ದಾರೆ. ಹಾಗಾಗಿ ಎರಡೂ ಪ್ರಕಾರದ ಹಾಡುಗಳನ್ನು ಹಾಡುತ್ತಾ ಕೋಲು ಪ್ರದರ್ಶನ ಮಾಡುತ್ತಾರೆ. ಹಾಗೆಯೇ ತೆಲುಗು ಗಡಿ ನಾಡಿನಲ್ಲಿ ತೆಲುಗು ಕೋಲುಪದಗಳನ್ನು ಹಾಡುವುದರ ಜೊತೆಗೆ ಕನ್ನಡ ಕೋಲುಪದಗಳನ್ನು ಹಾಡುತ್ತಾ ಪ್ರದರ್ಶನ ಮಾಡುವುದು ಕಂಡುಬರುತ್ತದೆ. ಹೀಗೆ ಎರಡು ಗಡಿ ಪ್ರಾಂತಗಳಲ್ಲಿ ಎರಡೂ ಪ್ರಕಾರದ ಹಾಡುಗಳು ಸಿಗುತ್ತವೆ. ಸಮಾನಾಂಶಗಳನ್ನು ಹೊಂದಿರುವ ಕೋಲುಪದಗಳು ದೊರಕುತ್ತವೆ. ಹಾಗೆಯೇ ಹೋಲಿಕೆ, ಭಿನ್ನತೆಗಳಿರುವ ಹಾಡುಗಳೂ ಕೂಡ ಸಿಗುತ್ತವೆ.

ಕನ್ನಡ ಮತ್ತು ತೆಲುಗು ಗಡಿನಾಡಿನಲ್ಲಿ ಎರಡು ಒಂದೇ ರೀತಿಯ ಕೋಲುಪದಗಳನ್ನು ಸಂಗ್ರಹಿಸಿಕೊಳ್ಳಲಾಗಿದೆ. ಈ ಎರಡೂ ಹಾಡುಗಳನ್ನು ಹಾಡುವಂಥ ಧಾಟಿ, ತಾಳ, ಲಯ ಇವುಗಳೆಲ್ಲವೂ ಏಕರೀತಿಯಲ್ಲಿದ್ದು ಸಾಹಿತ್ಯಿಕ ಅಂಶಗಳಲ್ಲಿ ಮಾತ್ರ ಅಲ್ಲಲ್ಲಿ ಪ್ರಾದೇಶಿಕ ಭಿನ್ನತೆ ತಲೆದೋರಿದೆ. ಹಾಗೆಯೇ ಎರಡೂ ಹಾಡುಗಳು ಒಂದೇ ರೀತಿಯ ವಸ್ತುವೈವಿಧ್ಯತೆ ಒಳಗೊಂಡಿದ್ದು

ಭಾಷಿಕವಾಗಿ ಎರಡೂ ಕನ್ನಡದ ಹಾಡುಗಳೆನಿಸಿದರೂ ಸಹ ಕನ್ನಡ ನಾಡಿನಲ್ಲಿ ದೊರೆತ ಹಾಡಿನಲ್ಲಿ ತೆಲುಗಿನ ಸೊಲ್ಲುಗಳನ್ನು ಹಾಡುತ್ತಾ ಕನ್ನಡದ ಹಾಡು ಆರಂಭವಾದರೆ, ತೆಲುಗು ನಾಡಿನ ಕನ್ನಡದ ಹಾಡಿನಲ್ಲಿ ಕನ್ನಡವನ್ನು ಮಾತ್ರ ಬಳಸಿರುವುದು ಕಂಡುಬಂದಿದೆ.

ಕನ್ನಡ ನಾಡಿನ ಚಿತ್ರದುರ್ಗದ ಚಳ್ಳಕೆರೆ ತಾಲೂಕಿನ ನನ್ನಿವಾಳದಲ್ಲಿ ಸಂಗ್ರಹಿಸಿದ ಕೋಲುಪದ ಮತ್ತು ತೆಲುಗು ಗಡಿನಾಡಿನ ಜಿಲ್ಲೆಯಾದ ಅನಂತಪುರಂನ ರಾಯದುರ್ಗದ ನಾಗಲಾಪುರಂನಲ್ಲಿ ಸಂಗ್ರಹಿಸಿದ ಕೋಲುಪದಗಳೆರಡು ಒಂದೇ ರೀತಿಯ ವಸ್ತುವೈವಿಧ್ಯತೆಯನ್ನು ಒಳಗೊಂಡಿರುವುದಿದೆ. ಈ ಎರಡು ಹಾಡುಗಳಲ್ಲಿ ಬಳಸಿರುವ ಭಾಷೆ ಕನ್ನಡ. ಈ ಕೋಲುಪದಗಳ ವಿಶಿಷ್ಟತೆ ಎಂದರೆ ಕನ್ನಡ ನಾಡಿನಲ್ಲಿ ಸಂಗ್ರಹಿಸಿದ ಕೋಲುಪದದಲ್ಲಿ ತೆಲುಗು ಭಾಷೆಯ ಸೊಲ್ಲುಗಳಿಂದ ಆರಂಭವಾಗಿ ಅನಂತರ ಕನ್ನಡದಲ್ಲಿ ಹಾಡು ಶುರುವಾಗುತ್ತದೆ. ತೆಲುಗು ನಾಡಿನಲ್ಲಿ ಸಂಗ್ರಹಿಸಿದ ಗೀತೆಯಲ್ಲಿ ಕನ್ನಡವನ್ನು ಮಾತ್ರ ಬಳಸಿರುವುದಿದೆ. ಈ ಕೋಲುಪದಗಳಲ್ಲಿ ಸಾಹಿತ್ಯಿಕವಾಗಿ ಮತ್ತು ಭಾಷಿಕವಾಗಿ ಭಿನ್ನತೆಗಳು ತೋರಿಬಂದರೂ ಸಹ ಹಾಡುವಂಥ ದಾಟಿ, ತಾಳ, ಲಯ ಮತ್ತು ಪ್ರದರ್ಶನ ಮಾಡುವುದು ಒಂದೇ ರೀತಿಯಾಗಿರುತ್ತದೆ.

**ಕನ್ನಡ ಗಡಿ ಪ್ರಾಂತವಾದ ಚಳ್ಳಕೆರೆಯ ನನ್ನಿವಾಳದಲ್ಲಿ ಸಂಗ್ರಹಿಸಿದ ಕೋಲುಪದ.**

ಜತಂಕ ದಿಗಿದಿಗಿ ತದನ್ನ ಜಂತಕ
ಉದ್ದೆಡ್ಲಪ್ಪ ವರಗತ್ರಾಡು ತತ್ತಗ
ಜಂತಗ ದಿಗಿದಿಗಿ ದಿಗಿದಿಗಿ ಭೇ ಭೆ
ಹ್ಯಾಗಿರಿ ಬೀಗಿರಿ ಹ್ಯಾಗಿರಬೇಕು |೨|

ಲೆಕ್ಕಿಲಿ ಪೊದಿಯಾಗೆ ಜೇನಿರಬೇಕು
ಜೇನು ತಿಂದ್ ಹುಡುಗ ಹೆಂಗಿರಬೇಕು
ನಡುಕಟ್ಟು ಪಡುಕಟ್ಟು ಸುತ್ತಿರಬೇಕು
ನಡುಕಟ್ ನಾಗೊಂದು ದುಡ್ಡಿರಬೇಕು
ದುಡ್ಡಿನ ಸೂಳೆ ಬಿದ್ದಿರಬೇಕು |೨|

ಕಾಸಿನ ಸೂಳೆ ಕಡಿದಾಡಬೇಕು
ಲೇಯಪ್ಪ ಲೇ, ಹ್ಯಾಗಿರಿಬೀಗಿರಿ ಹ್ಯಾಗಿರಬೇಕು
ಹ್ಯಾಗಿರಿ ಬೀಗಿರಿ ಹ್ಯಾಗಿರಬೇಕು
ಭೇ ಭೇ ಹ್ಯಾಗಿರಿ ಬೀಗಿರಿ
ಹ್ಯಾಗಿರಿ ಬೀಗಿರಿ ಹ್ಯಾಗಿರಬೇಕು

ಲೆಕ್ಕಿಲಿ ಪೊದಿಯಾಗೆ ಜೇನಿರಬೇಕು
ಜೇನ್ ತಿಂದ್ ಹುಡುಗ ಹೆಂಗಿರಬೇಕು

ನಡುಕಟ್ ಪಡಕಟ್ ಸುತ್ತಿರಬೇಕು
ನಡುಕಟ್ ನಾಗೊಂದು ದುಡ್ಡಿರಬೇಕು

ದುಡ್ಡಿನ ಸೂಳೆ ಬಿದ್ದಿರಬೇಕು
ಕಾಸಿನ ಸೂಳೆ ಕಡಿದಾಡಬೇಕು
ಲೇಯಪ್ಪ ಲೇ ಹೇ ಹ್ಯಾಗಿರಿ ಬೀಗಿರಿ
ಗೋವಿಂದಡಮ್ಮಾ, ಗೋಪಾಲಡಮ್ಮಾ |೨|

ಯಾಡಾದಿಕಿ ಒಕಸಾರಿ ವಾಡೋಸ್ತಡಮ್ಮಾ
ಕಡ್ಲಾಲು ಬೆಲ್ಲಾಲು ಕೊನಿಪೆಟ್ಟಾಡಮ್ಮಾ
ಲೇಯಪ್ಪ ಲೇ ಹೇ
ತೀನ್ ತೀನ್ ಅಂಟಡೆ ತಿಂಟೆ ತಗಿಲಿಕೆಂಟಡೆ

ಹ್ಯಾಗಿರಿ ಬೀಗಿರಿ ಹ್ಯಾಗಿರಬೇಕು
ವೊಂಕನಾನ ಸೂರವ್ವ ವೊಂಗೊಂಗಿ ಸೂಸ್ತದೆ
ಕೋಟ್ನಾನ ಸೂರವ್ವ ಕೂರಿಗುಲು ಕುಕ್ತಾದೆ
ಲೇಯಪ್ಪ ಲೇ ಹೇ ಹ್ಯಾಗಿರಿ ಬೀಗಿರಿ ಹ್ಯಾಗಿರಬೇಕು

ಹ್ಯಾಗಿರಿ ಬೀಗಿರಿ ಹ್ಯಾಗಿರಬೇಕು
ಲೆಕ್ಕಿಲಿ ಪದಿಯಾಗೆ ಜೇನಿರಬೇಕು
ಜೇನ್ ತಿಂದ್ ಹುಡುಗ ಹೆಂಗಿರಬೇಕು
ನಡುಕಟ್ ಪಡಕಟ್ ಸುತ್ತಿರಬೇಕು

ದುಡ್ಡಿನ ಸೂಳೆ ಬಿದ್ದಿರಬೇಕು
ಕಾಸಿನ ಸೂಳೆ ಕಡಿದಾಡಬೇಕು
ಲೇಯಪ್ಪ ಲೇ ಹೇ ಹ್ಯಾಗಿರಿ ಬೀಗಿರಿ

(ವಕ್ತೃ: ಕರಿಯಪ್ಪ, ನನ್ನಿವಾಳ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಈ ಗೀತೆಯನ್ನು ಕನ್ನಡ ಗಡಿ ಭಾಗದಲ್ಲಿ ಸಂಗ್ರಹಿಸಲಾಗಿದೆ. ಕನ್ನಡದ ಪದವಾದರೂ ಸಹ ಹಾಡಿನ ಮಧ್ಯದಲ್ಲಿ ತೆಲುಗಿನ ಮತ್ತೊಂದು ಪದ(ಹಾಡು) ಸೇರ್ಪಡೆಗೊಂಡಿರುವುದು ಕಾಣಸಿಗುತ್ತದೆ. ಹಾಡಿನ ಆರಂಭದಲ್ಲಿ ತೆಲುಗಿನ ಸೊಲ್ಲುಗಳನ್ನು ಹೇಳುವುದರ ಮುಖಾಂತರ ಕನ್ನಡದ ಹಾಡು ಆರಂಭವಾಗುತ್ತದೆ. ಜೊತೆಗೆ ಕೋಲಾಟದ ಒಂದು ಪ್ರಕಾರವಾದ ವರಗತ್ತರಿಯನ್ನು ಪ್ರದರ್ಶಿಸಬೇಕು ಎಂಬ ಸೂಚನೆಯನ್ನು ಸಹ ತೆಲುಗಿನಲ್ಲೇ ನೀಡಿರುವುದಿದೆ. ಈ ಕೋಲುಪದದಲ್ಲಿ ಪ್ರಾಯಕ್ಕೆ ಬಂದಿರುವ ಹುಡುಗ ಹೇಗಿರಬೇಕು ಎಂಬುದನ್ನು ತಿಳಿಸಿಕೊಡುತ್ತದೆ. ಜೊತೆಗೆ ಲೆಕ್ಕಿಲಿ ಗಿಡದಲ್ಲಿ ಅಥವಾ ಪೊದೆಯಲ್ಲಿ ಜೇನಿರಬೇಕು ಆ ಜೇನಿನ ತುಪ್ಪವನ್ನು ಹೀರಿದ ಹುಡುಗ ಕಟ್ಟುಮಸ್ತಾಗಿ, ದೈಹಿಕ ಸದೃಢತೆಯಿಂದ ಇರಬೇಕು ಎಂಬುದನ್ನು ಕೂಡ ಸೂಚಿಸುತ್ತದೆ. ಹಾಗೆಯೇ

ಈ ಹಾಡಿನಲ್ಲಿ 'ದುಡ್ಡಿನ ಸೂಳೆ ಬಿದ್ದಿರಬೇಕು' ಎಂದು ಹಣದ ವಿಚಾರವಾಗಿ ಅಸಹ್ಯವಾದ ರೀತಿಯಲ್ಲಿ ಹೇಳಿಕೆ ನೀಡಿರುವುದನ್ನು ಗಮನಿಸಿದರೆ ಜನಪದರು ದುಡ್ಡು-ಕಾಸುಗಳಿಗೆ ಬೆಲೆ ನೀಡುತ್ತಿರಲಿಲ್ಲ ಎಂಬುದು ಈ ಹಾಡಿನ ಮುಖೇನ ತಿಳಿದುಬರುತ್ತದೆ. ಹಾಗೆಯೇ ಈ ಕೋಲುಪದದ ಮಧ್ಯದಲ್ಲಿ ತೆಲುಗಿನ ಗೀತೆಯೊಂದು ಇಣುಕುತ್ತದೆ. 'ಗೋವಿಂದಡಮ್ಮಾ ಗೋಪಾಲಡಮ್ಮಾ' ಎಂದು ಆರಂಭವಾಗುವ ಈ ಹಾಡಿನಲ್ಲಿ ಕಡ್ಲಾಲು, ಬೆಲ್ಲಾಲು - ಹುರಿಗಡ್ಲೆ ಮತ್ತು ಬೆಲ್ಲವನ್ನು ಖರೀದಿಸಿರುವುದು ಇದೆ. ಹುರಿಗಡ್ಲೆ ಮತ್ತು ಬೆಲ್ಲದ ಪ್ರಸ್ತಾಪ ಮಾಡಿರುವುದನ್ನು ಗಮನಿಸಿದರೆ ಇವೆರಡೂ ಸಾಮಾನ್ಯ ಜನರ ಆಹಾರ ಕ್ರಮವಾಗಿರಬಹುದು. ಹಾಗಾಗಿ ಈ ಹಾಡಿನಲ್ಲಿ ಪ್ರಸ್ತಾಪಿಸಿರುವುದಿದೆ. ಹಾಗೆಯೇ ಒಬ್ಬ ಸಾಮಾನ್ಯ ಮಹಿಳೆಯಾದ ಸೂರವ್ವ ಎನ್ನುವವಳ ದಿನನಿತ್ಯದ ಚಾಕರಿಗಳನ್ನು ಈ ಕೋಲುಪದ ತೆರೆದಿಡುತ್ತದೆ. ಸೂರವ್ವಳ ಕುರಿತಾಗಿ ತೆಲುಗು ಗೀತೆಯಲ್ಲಿ ಹೀಗೆ ಪ್ರಸ್ತಾಪ ಮಾಡಿರುವುದಿದೆ. 'ವೊಂಕನಾನ ಸೂರವ್ವ, ವೊಂಗೊಂಗಿ ಸೂಸ್ತದೆ, ಕೋಟನಾನ ಸೂರವ್ವ, ಕೂರಿಗುಲು ಕುಕ್ತಾದೆ'. ಅಂದರೆ 'ಹಳ್ಳದಾಗೆ ಸೂರವ್ವ ಬಗ್ಗಿ ಬಗ್ಗಿ ನೋಡ್ತಾಳೆ, ಕೋಟೆಯೊಳಗೆ ಸೂರವ್ವ ಕುಕ್ತಾಳೆ' ಎಂಬುದಾಗಿದೆ. ಈ ಸಾಲುಗಳಲ್ಲಿ ಸೂರವ್ವಳ ದಿನನಿತ್ಯದ ಕೆಲಸ ಹಾಗೂ ಅವಳ ನಡವಳಿಕೆಯನ್ನು ಸೂಕ್ಷ್ಮವಾಗಿ ನಿರೂಪಿಸುತ್ತದೆ. ತೆಲುಗು ಹಾಡು ಮುಗಿದ ತಕ್ಷಣವೇ ಕನ್ನಡದ ಹಾಡು ಮತ್ತೆ ಪುನರಾವರ್ತನೆಯಾಗುತ್ತದೆ. ಗಡಿಭಾಗದ ಕನ್ನಡ ಕೋಲುಪದಗಳಲ್ಲಿ ತೆಲುಗು ನುಡಿಗಳು, ಸಾಲುಗಳು ಅಥವಾ ಹಾಡುಗಳು ಸೇರಿ ಹೋಗುವುದು ಸಾಮಾನ್ಯ ಸಂಗತಿ ಎನಿಸುತ್ತದೆ. ಆದರೆ ಆಂಧ್ರದ ಗಡಿ ಭಾಗದಲ್ಲಿ ಇದೇ ರೀತಿಯ ವಸ್ತುವೈವಿಧ್ಯತೆ ಹೊಂದಿರುವ ರಾಯದುರ್ಗದ ನಾಗಲಾಪುರಂನಲ್ಲಿ ಸಂಗ್ರಹಿಸಿದ ಕನ್ನಡ ಕೋಲುಪದದಲ್ಲಿ ತೆಲುಗು ನುಡಿಗಳು ಸೇರ್ಪಡೆಯಾಗದೆ ಕನ್ನಡದ ಗೀತೆಯಾಗಿರುವುದು ಕಂಡುಬಂದಿದೆ.

## ರಾಯದುರ್ಗದ ನಾಗಲಾಪುರಂನಲ್ಲಿ ಸಂಗ್ರಹಿಸಿದ ಕನ್ನಡದ ಕೋಲುಪದ

ಅಂಗಿರಬೇಕು ಹಿಂಗಿರಬೇಕು
ಮಂಗರ ಬಳ್ಯಾಗ್ ಜೇನಿರಬೇಕು
ಜೇನಿನತಾವ ನೀರಿರಬೇಕು
ನೀರಿಂತಾವ ಎತ್ತಿರಬೇಕು
ಎತ್ತಿನ ಮೇಲೊಂದು ಸಬಕಿರಬೇಕು
ಸಬರ್ದಾಗೊಂದು ದುಡ್ಡಿರಬೇಕು
ದುಡ್ಡಿನ ಸೂಳೇರು ದೂರಿರಬೇಕು
ಕಾಸಿನ ಸೂಳೇರು ಕಡಿದಾಡಬೇಕು
ಮಹಾಸ್ವಾಮಿ ದಯವಿರಬೇಕು
ಮೀಸೆ ಮೇಲೆ ಕೈಯ್ಯಿರಬೇಕು
ರಾಯದುರ್ಗದಾಗೆ ನಾನಿರಬೇಕು

ಓಬಳಾಪುರದಾಗೆ ಅವಳಿರಬೇಕು
ದಿನ್ನದಿಗಿತಕ ಜಮತಗದಿಗಿತಕ
ಹೂವಾಗತನಕ ಊದು ಕೊಂಡಿದ್ದೆ
ಕಾಯಾಗವರೆಗೂ ಕಾದು ಕೊಂಡಿದ್ದೆ
ಕಪ್ಪಲನರಿ ಬಂದು ಕೇದು ಕೊಂಡೋಯ್ತು
ಗೌಡ್ನೋರು ನಾಯಿ ಗುರ್‌ಬರ್ ಅಂತು
ಗುದಿಗೆ ತಕ್ಕಂಡ ನಾನೋಡೋದೇ
ದಿನ್ನದಿಗಿತಕ

(ವಕ್ತೃ: ಎರ‍್ರಿಸ್ವಾಮಿ - ನಾಗಲಾಪುರ, ರಾಯದುರ್ಗ ತಾಲ್ಲೂಕು, ಅನಂತಪುರ ಜಿಲ್ಲೆ)

ಚಿತ್ರದುರ್ಗದ ಚಳ್ಳಕೆರೆಯಲ್ಲಿ ಸಂಗ್ರಹಿಸಿದ ಕೋಲುಪದ ತೆಲುಗುವಿನಿಂದ ಆರಂಭವಾದರೆ ಅನಂತಪುರಂನ ರಾಯದುರ್ಗದ ನಾಗಲಾಪುರಂನಲ್ಲಿ ಸಂಗ್ರಹಿಸಿದ ಕನ್ನಡದ ಗೀತೆ, ಕನ್ನಡದಿಂದ ಆರಂಭವಾಗಿ ಕನ್ನಡದಲ್ಲಿಯೇ ಮುಕ್ತಾಯವಾಗುತ್ತದೆ. ಆದರೆ ಕನ್ನಡ ನಾಡಿನಲ್ಲಿ ಸಂಗ್ರಹಿಸಿದ ಕನ್ನಡ ಕೋಲುಪದ ತೆಲುಗಿನ ಸೊಲ್ಲುಗಳಿಂದ ಆರಂಭವಾಗಿ ನಂತರ ಕನ್ನಡದ ಹಾಡು ತದನಂತರ ತೆಲುಗಿನ ಗೀತೆ ಮತ್ತೆ ಪುನಃ ಕನ್ನಡದ ಸಾಲುಗಳೊಂದಿಗೆ ಮುಕ್ತಾಯವಾಗುತ್ತದೆ. ಈ ಎರಡೂ ಕೋಲುಪದಗಳು ಕನ್ನಡದ ಪದಗಳಾದರೂ ಕನ್ನಡದ ಗೀತೆಯಲ್ಲಿ ತೆಲುಗು ಪ್ರವೇಶವಾಗಿರುವುದನ್ನು ಕಾಣಬಹುದು. ಈ ಕೋಲುಪದಗಳಲ್ಲಿ ದುಡ್ಡು ಅಥವಾ ಹಣಕ್ಕೆ ಬೆಲೆ ನೀಡದಿರುವುದು ಕಂಡು ಬಂದಿದೆ. ಇಲ್ಲಿ ಪ್ರಾದೇಶಿಕ ಭಿನ್ನತೆಯಿಂದ ಕೆಲವು ಮಾರ್ಪಾಡುಗಳು ಆಗಿರುವುದು ಕಂಡುಬಂದಿದೆ. ಅದು ಕನ್ನಡ ನಾಡಿನಲ್ಲಿ ಸಂಗ್ರಹಿಸಿದ ಹಾಡಿನಲ್ಲಿ 'ಲೆಕ್ಕಿಲಿ ಪೊದಿಯಾಗೆ ಜೇನಿರಬೇಕು' ಎಂದಿದ್ದರೆ ತೆಲುಗುನಾಡಿನ ಗಡಿ ಪ್ರಾಂತದ ಹಾಡಿನಲ್ಲಿ 'ಮಂಗರಬಳ್ಯಾಗ ಜೇನಿರಬೇಕು' ಎಂದು ಬದಲಾಯಿಸಿಕೊಂಡಿರುವುದಿದೆ. ಹಾಗೆಯೇ ಈ ಎರಡು ಹಾಡುಗಳನ್ನು ಹಾಡುವ ರೀತಿ, ಪ್ರದರ್ಶನ ಮಾಡುವ ಬಗೆ ಒಂದೇ ಆದರೂ ಸಾಹಿತ್ಯಿಕ ಅಂಶಗಳಲ್ಲಿ ಕೆಲವು ವ್ಯತ್ಯಾಸಗಳನ್ನು ಕಾಣಬಹುದಾಗಿದೆ. ಕರ್ನಾಟಕ - ಆಂಧ್ರ ಗಡಿ ಪ್ರಾಂತದಲ್ಲಿ ಈ ರೀತಿಯ ಸಮಾನ ವಸ್ತುವೈವಿಧ್ಯತೆ, ಪದಗಳನ್ನು ಹಾಡುವ ರೀತಿ, ಕೋಲುಪ್ರದರ್ಶನವನ್ನು ಮಾಡುವ ಬಗೆ, ಏಕರೀತಿಯ ಅಂಶಗಳು ಸಹಜವಾಗಿ ಕಾಣಬರುತ್ತವೆ. ಹೀಗೆ ಸಮಾನಾಂಶಗಳನ್ನು ಹೊಂದಿರುವ ಮತ್ತೊಂದು ಕೋಲುಪದ ಗಡಿನಾಡ ಪ್ರಾಂತ ಪರಿಸರದಲ್ಲಿ ಸಂಗ್ರಹಿಸಲಾಗಿದ್ದು, ಪ್ರಾದೇಶಿಕವಾಗಿ ಸ್ಥಳನಾಮಗಳನ್ನು ಬದಲಾವಣೆ ಮಾಡಿಕೊಂಡು, ಆಯಾ ರಾಜ್ಯದ ಹೆಸರುಗಳನ್ನು ಸೇರಿಸಿಕೊಂಡು ಹಾಡುವುದು ಕಾಣಸಿಗುತ್ತದೆ ಹಾಗೂ ತೆಲುಗು ಗಡಿನಾಡಿನಲ್ಲಿ ಸಂಗ್ರಹಿಸಿದ ಕೋಲುಪದದಲ್ಲಿ ತೆಲುಗು ನಾಡಿನ ಸ್ಥಳನಾಮಗಳ ಜೊತೆಗೆ ಕನ್ನಡ ನಾಡಿನ ಸ್ಥಳನಾಮಗಳನ್ನು ಸೇರಿಸಿಕೊಂಡು ಪದಗಳನ್ನು ರಚಿಸಿರುವುದು ಕಂಡುಬಂದಿದೆ.

ತೆಲುಗು ನಾಡಿನ ಗಡಿ ಪ್ರಾಂತವಾದ ಆಲೂರು ತಾಲೂಕಿನ ವ್ಯಾಪ್ತಿಯಲ್ಲಿ ಬರುವ ಹೊಳಗುಂದದಲ್ಲಿ ಸಂಗ್ರಹಿಸಿದ ಕನ್ನಡ ಕೋಲುಪದದಲ್ಲಿ ಕನ್ನಡ ನಾಡಿನ ಸ್ಥಳನಾಮಗಳನ್ನು

ಸೇರಿಸಿಕೊಂಡು ತೆಲುಗು ಗಡಿನಾಡಿನ ಕೆಲವು ಪ್ರಾಂತಗಳನ್ನು ಕನ್ನಡ ಕೋಲುಪದದಲ್ಲಿ ಉಲ್ಲೇಖಿಸಿರುವುದು ಕಾಣಸಿಗುತ್ತದೆ.

**ತೆಲುಗು ನಾಡಿನಲ್ಲಿ ಸಂಗ್ರಹಿಸಿದ ಕನ್ನಡದ ಕೋಲುಪದ**

ಬಸವ ಸುಂದರೀಶ ಬಯಲಿಗೆ ಹೊಂಟಾರೆ
ದೆಸೆಮುಖದ ಒಳ್ಳೆ ಬೂದಾಳು ಅಣ್ಣಾಣ್ಣಾ
ದೆಸೆಮುಖದ ಒಳ್ಳೆ ಬೂದಾಳು
ದೆಸೆಮುಖದ ಒಳ್ಳೆ ಬೂದಾಳು ಬಸವಣ್ಣ
ಉಸಿರಂದರೆ ಇನ್ನಾರಿಗೆ ಅಳವು
ದೆಸೆಮುಖದ ಒಳ್ಳೆ ಬೂದಾಳು ಬಸವಣ್ಣ
ಉಸಿರಂದರೆ ಇನ್ನಾರಿಗೆ ಅಳವು
ಕ್ವಾಟೆ ತೆಕ್ಕಲಕೋಟೆ ಕೊನೆಸೆರಗು ಬಳ್ಳಾರಿ
ಏಕರಾಜ್ಯವೇ ಕುರುಗೋಡು ಅಣ್ಣಣ್ಣಾ
ಏಕರಾಜ್ಯವೆ ಕುರುಗೋಡು
ಏಕರಾಜ್ಯವೇ ಕುರುಗೋಡು ಬಯಲಾಗ
ಭೂಪ ಮಲಗ್ಯಾನ ಬಸವಣ್ಣ ।೨।
ಬಸವಣ್ಣ ಮಲಗುತಲೆ ಹೊಸಮನೆ ಕಟ್ಟುತಲೆ
ಬಳ್ಳಾರಿಗೆ ಬಂತು ಬಡತಾನ ಅಣ್ಣಣ್ಣಾ
ಬಳ್ಳಾರಿಗೆ ಬಂತು ಬಡತಾನ
ಬಳ್ಳಾರಿಗೆ ಬಂತು ಬಡತನ ಹೊಳಗುಂದ
ಹುಡುಗರಿಗೆ ಬಂತು ದೊರೆತನ
ಆ ಕಡೆ ಬಳ್ಳಾರಿ ಈ ಕಡೆ ಆದಾನಿ
ತಗ್ಗಿನಾಗ್ಯೆತೆ ಹೊಳಗುಂದೆ ಅಣ್ಣಣ್ಣಾ
ತಗ್ಗಿನಾಗ್ಯೆತೆ ಹೊಳಗುಂದೆ
ತಗ್ಗಿನಾಗ್ಯೆತೆ ಹೊಳಗುಂದೆ ಹುಡುಗರಿಗೆ
ಹುಬ್ಬಿನಾಗ್ಯೆತೆ ಹುಳಿನಾಮ ।೨।
ಬಂಡಿ ಬಂಡಿ ಮೇಲೆ ಬರುತಾವ ಜೀರಂಗಿ
ತಂಡ ತಂಡತುಲು ಹೂಬಾಣ ಅಣ್ಣಣ್ಣಾ
ತಂಡ ತಂಡತುಲು ಹೂಬಾಣ
ತಂಡ ತಂಡತಲೆ ಹೂಬಾಣ ಜೋಳಿಗೇರಿ
ಕೆಂದೋಳದ ಮೇಲೆ ಕೈ ಜಗಳ
ಬಿದ್ದನಾ ಭೀಮಣ್ಣ ಬಿಳಿಯಂಗಿ ಮೇಲಾಗಿ
ವಜ್ರದ ಡೋಲು ಅಡಿಯಾಗಿ ಅಣ್ಣಣ್ಣಾ

ವಜ್ರದ ಡೋಲು ಅಡಿಯಾಗಿ
ವಜ್ರದ ಡೋಲು ಅಡಿಯಾಗಿ ಭೀಮಾನಾ
ಉಕ್ಕಿನ ಕತೆ ಮೇಲಾಗಿ
ಅಣ್ಣ ಚೆಲಿಕಿ ತಾರ ತಮ್ಮ ಗುದ್ದಲಿ ತಾರ
ರನ್ನದ ಕಾಣಿ ತೆಗಿ ಬಾರೋ ಅಣ್ಣಣ್ಣಾ
ರನ್ನದ ಕುಣಿ ತೆಗಿ ಬಾರೋ
ರನ್ನದ ಕುಣಿ ತೆಗಿ ಬಾರೋ
ರನ್ನದ ಕುಣಿಗೆ ಹೋಗಿ ಬಾರೋ ಭೀಮಣ್ಣ
ಚಿನ್ನದ ಮಣ್ಣು ಕೊಟ್ಟು ಬಾರೋ
ಅಣ್ಣ ಚೆಲಿಕೆ ತಾರ ತಮ್ಮ ಗುದ್ದಲಿ ತಾರ
ರನ್ನದ ಕುಣಿ ತೆಗಿ ಬಾರೋ ಅಣ್ಣಣ್ಣಾ
ರನ್ನದ ಕುಣಿ ತೆಗಿ ಬಾರೋ
ರನ್ನದ ಕುಣಿ ತೆಗಿ ಬಾರೋ ಅಣ್ಣಯ್ಯ
ಚಿನ್ನದಲಿ ಮಣ್ಣು ಕೊಟ್ಟು ಬಾರೋ
ಎರೆಯನ ಹೊಲದಲಿ ಎಳೆಯ ಸೌತೆಕಾಯಿ
ಹರಿ ಅಂದರ‍್ಯಾಗ ಹರಿಯಲಿ ಅಣ್ಣಯ್ಯ
ಹರಿ ಅಂದರ‍್ಯಾಗ ಹರಿಯಲಿ
ಹರಿ ಅಂದರ‍್ಯಾಗ ಹರಿಯಾಲಿ ಅಣ್ಣಯ್ಯ
ಮರಿ ಅಂದರ‍್ಯಾಗ ಮರಿಯಾಲಿ |೨|
ಕರಿಯ ಗಡ್ಡೆಯ ಮೇಲೆ
ಬರಿಯ ನವಣೆಯ ಬಿತ್ತಿ
ಹಾಲು ತುಂಬುತಲೆ ಗಿಳಿಮುಟ್ಟಿ
ಗಿಳಿರಾಯ ಹಾಲು ತುಂಬುತಲೆ ಗಿಳಿಮುಟ್ಟಿ
ಹಾಲು ತುಂಬುತಲೆ ಗಿಳಿಮುಟ್ಟಿ ಗಿಳಿರಾಯ
ಪ್ರಾಯ ತುಂಬುತಲೆ ಶಿವ ಹೋಯ್ದಾ |೨|

(ವಕ್ತೃ: ತಿಕ್ಕಸ್ವಾಮಿ, ಹೊಳಗುಂದ, ಆಲೂರು ತಾಲ್ಲೂಕು, ಕರ್ನೂಲ್ ಜಿಲ್ಲೆ)

ಈ ಕೋಲುಪದವನ್ನು ತೆಲುಗು ಗಡಿ ಭಾಗದ ಆಲೂರು ತಾಲೂಕಿನಲ್ಲಿ ಬರುವಂಥ ಹೊಳಗುಂದದಲ್ಲಿ ಸಂಗ್ರಹಿಸಲಾಗಿದೆ. ತೆಲುಗು ನಾಡಿನಲ್ಲಿ ಸಂಗ್ರಹಿಸಿದ ಗೀತೆಯಾದರೂ ಸಹ ಕನ್ನಡ ಭಾಷೆಯಲ್ಲಿರುವುದು ಈ ಕೋಲುಪದದ ವಿಶಿಷ್ಟತೆಗಳಲ್ಲಿ ಒಂದಾಗಿದೆ. ಹಾಗೆಯೇ ಶಿವನ ವಾಹನವಾದ ನಂದಿಯನ್ನು(ಬಸವಣ್ಣ) ಸ್ತುತಿಸುವುದು ಈ ಹಾಡಿನ ವಸ್ತುವಿಷಯವಾಗಿದೆ. ಜೊತೆಗೆ ಬಸವಣ್ಣ ಐಕ್ಯನಾದ ಎಂಬ ವಿಚಾರವು ಈ ಹಾಡಿನಲ್ಲಿದೆ. ಬಸವಣ್ಣ ಶಿವನ ಪಾದ ಸೇರಿದ್ದರಿಂದ ಬಳ್ಳಾರಿಗೆ ಬಡತನ ಬಂದಿತು. ಹೊಳಗುಂದದ ಜನರಿಗೆ ದೊರೆತನ ಅಂದರೆ

ರಾಜ್ಯವಾಳುವ ಅರಸೊತ್ತಿಗೆ ಹೊಳಗುಂದದ ಜನತೆಗೆ ಬಂದಿತು ಎಂಬುದನ್ನು ಈ ಕೋಲುಪದ ಸೂಚ್ಯವಾಗಿ ನಿರೂಪಿಸುವಂತಿದೆ. ಈ ಕೋಲುಪದದಲ್ಲಿ ಒಂದು ಬಸವಣ್ಣ(ಶಿವನ ವಾಹನ ನಂದಿ) ತೀರಿ ಹೋಗಿದ್ದು, ಅದನ್ನು ಮಾನವರನ್ನು ಹೇಗೆ ಶವಸಂಸ್ಕಾರ ಮಾಡುತ್ತಾರೋ ಅದೇ ರೀತಿಯಾಗಿ ಕುಣಿ ತೆಗೆದು ಅದರೊಳಗೆ ಶವವಿಟ್ಟು ಹೂತು ಮಣ್ಣು ಕೊಟ್ಟು ಬರುತ್ತಿದ್ದರು ಎಂಬುದನ್ನು ಈ ಕೋಲುಪದದಲ್ಲಿ ಹೇಳಿರುವುದಿದೆ. ಜೊತೆಗೆ ಈ ಗೀತೆಯನ್ನು ಕರ್ನಾಟಕ-ಆಂಧ್ರ ಗಡಿ ಪ್ರಾಂತವಾದ ಹೊಳಗುಂದದಲ್ಲಿ ಸಂಗ್ರಹಿಸಿರುವುದರಿಂದ ಎರಡೂ ಗಡಿ ಪ್ರಾಂತಗಳಾದ ಬೂದಾಳು, ತೆಕ್ಕಲಕೋಟೆ, ಕುರುಗೋಡು ಮತ್ತು ಬಳ್ಳಾರಿಗಳ ಹೆಸರುಗಳನ್ನು ಉಲ್ಲೇಖಿಸಿರುವುದಿದೆ. ಹಾಗೆಯೇ ಆಂಧ್ರಪ್ರದೇಶದ ಗಡಿ ಪ್ರಾಂತದ ಊರುಗಳಾದ ಆದವಾನಿ ಮತ್ತು ಹೊಳಗುಂದಗಳ ಪ್ರಸ್ತಾಪವೂ ಸಹ ಬಂದಿದೆ. ಈ ಹಾಡನ್ನು ಹಾಡಿರುವುದು ತೆಲುಗುನಾಡಿನ ಹೊಳಗುಂದದಲ್ಲಿ ಆದರೂ ಸಹ ದೈವಿಕ ಸ್ಥಾನ ನೀಡಿ ಸ್ತುತಿಸಿರುವ ಬಸವಣ್ಣನು ಮಾತ್ರ ಕರ್ನಾಟಕದ ಬಳ್ಳಾರಿಯ ವ್ಯಾಪ್ತಿಯಲ್ಲಿ ಬರುವ ಕುರುಗೋಡು ಬಸವಣ್ಣ ಮತ್ತು ಬೂದಾಳು ಬಸವಣ್ಣ ಎಂಬುದು ಈ ಗೀತೆಯ ಮತ್ತೊಂದು ವಿಶೇಷವಾಗಿದೆ. ಜೊತೆಗೆ ಎರಡೂ ರಾಜ್ಯಗಳ ಗಡಿ ಭಾಗಗಳಲ್ಲಿರುವ ಸ್ಥಳನಾಮಗಳನ್ನು ಉಲ್ಲೇಖಿಸಿರುವುದು ಗಮನಾರ್ಹವಾದ ಸಂಗತಿಯಾಗಿದೆ. ಹಾಗೆಯೇ ಇದೇ ಮಾದರಿಯ ಮತ್ತೊಂದು ಕೋಲುಪದವು ಕರ್ನಾಟಕದ ಬಳ್ಳಾರಿಯ ಹೊಸಪೇಟೆ ತಾಲ್ಲೂಕಿನ ಕಮಲಾಪುರದಲ್ಲಿ ಸಂಗ್ರಹಿಸಲಾಗಿದೆ. ಈ ಹಾಡಿಗೂ ಮತ್ತು ತೆಲುಗು ನಾಡಿನಲ್ಲಿ ಸಂಗ್ರಹಿಸಿದ ಹಾಡಿಗೂ ವ್ಯತ್ಯಾಸಗಳಿಗಿಂತ ಸಾಮ್ಯತೆ ಮತ್ತು ಸಮಾನಾಂಶಗಳೇ ಹೆಚ್ಚು ಎಂಬುದು ಕಂಡು ಬಂದಿದೆ. ಹಾಗೆಯೇ ಕಮಲಾಪುರದಲ್ಲಿ ಸಂಗ್ರಹಿಸಿದ ಕೋಲುಪದವು ತೆಲುಗುನಾಡಿನಲ್ಲಿ ಸಂಗ್ರಹಿಸಿದ ಹಾಡಿನ ಮಾದರಿಯಲ್ಲಿ ಆರಂಭವಾಗದೆ, ಆ ಗೀತೆಯು ತೆಲುಗು ಗಡಿನಾಡಿನಲ್ಲಿ ಸಂಗ್ರಹಿಸಿದ ಗೀತೆಯಲ್ಲಿ ಅರ್ಧ ಭಾಗವನ್ನು ಮಾತ್ರ ಕನ್ನಡ ನಾಡಿನಲ್ಲಿ ಸಂಗ್ರಹಿಸಿರುವ ಹಾಡು ಒಳಗೊಂಡಿದೆ. ಅರ್ಧ ಹಾಡಿನಿಂದ ಕನ್ನಡದ ಹಾಡು ಆರಂಭವಾಗುವುದನ್ನು ಕಾಣಬಹುದು.

### ಹೊಸಪೇಟೆ ತಾಲೂಕಿನ ಕಮಲಾಪುರದಲ್ಲಿ ಸಂಗ್ರಹಿಸಿದ ಕೋಲುಪದ

ಬಿದ್ದನು ಭೀಮಣ್ಣ ಬಿಳಿಯಂಗಿ ಮೇಲಾಗಿ
ವಜ್ರದ ಡೋಲು ಹರಿಯಾಲು ಅಣ್ಣಣ್ಣಾ
ವಜ್ರದ ಡೋಲು ಹರಿಯಲು
ವಜ್ರದ ಡೋಲು ಹರಿಯಲು ಭೀಮಣ್ಣ
ಕುಂದ್ರಿಸಿ ಮುಖವ ಹೊರೆಸಲು
ಹಳ್ಳಿಕೆರೆಯ ಮೇಲೆ ಸಾಲು ನವಣೆ ಬಿತ್ತಿ
ಹಾಲು ತುಮ್ಮುತಲು ಗಿಳಿಮುಟ್ಟಿ ಅಣ್ಣಣ್ಣಾ
ಹಾಲು ತುಮ್ಮುತಲು ಗಿಳಿಮುಟ್ಟಿ
ಹಾಲು ತುಮ್ಮುತಲೆ ಗಿಳಿಮುಟ್ಟಿ ಭೀಮನಾ

ಪ್ರಾಯ ತುಂಬುತ ಶಿವ ಮುರಿದ
ಎರೆಯ ಹೊಲದಾಗಿರುವ ಎಳೆಯ ಸೌತೆಕಾಯಿ
ಹರಿ ಅಂದಾರ್‍ಯಾಗ ಹರಿಯಲಿ ಅಣ್ಣಣ್ಣಾ
ಹರಿ ಅಂದರ್‍ಯಾಗ ಹರಿಯಲಿ
ಹರಿ ಅಂದರ್‍ಯಾಗೊ ಹರಿಯಲು ಭೀಮನ
ಮರೆಯಂದರೆ ಹ್ಯಾಂಗೆ ಮರೆಯಾಲಿ
ಕೋಟೆ ತೆಕ್ಕಲಕೋಟೆ ಕೊನೆಸೆರಗು ಬಳ್ಳಾರಿ
ಏಕರಾಜ್ಯವೆ ಕುರುಗೋಡು ಅಣ್ಣಣ್ಣಾ
ಏಕರಾಜ್ಯವೆ ಕುರುಗೋಡು ಬಯಲೊಳಗೆ
ಭೂಪ ಮಲಗ್ಯಾನೆ ಬಸವಣ್ಣ
ಬಸವಣ್ಣ ಹುಟ್ಟಲಿ ಹೊಸಪೇಟೆ ಕಟ್ಟಲಿ
ಬಳ್ಳಾರಿಗೆ ಬಂತು ಬಡತನಾ
ಬಳ್ಳಾರಿಗೆ ಬಂತು ಬಡತನಾ ಕಮಲಾಪುರದ
ರೈತರಿಗೆ ಬಂತು ದೊರೆತನ.

(ವಕ್ತೃ: ಗುರುವಯ್ಯ, ಕಮಲಾಪುರ, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ)

ತೆಲುಗುನಾಡಿನಲ್ಲಿ ಸಂಗ್ರಹಿಸಿದ ಹಾಡಿನಂತೆ ಈ ಹಾಡು ಸಂಪೂರ್ಣ ಹಾಡನ್ನು ಹೊಂದಿರದೆ, ಅರ್ಧ ಹಾಡು ಮಾತ್ರ ಇರುವುದು ಮೇಲ್ನೋಟಕ್ಕೆ ಕಾಣಸಿಗುತ್ತದೆ. ಈ ಗೀತೆಯು ಸಹ ತೆಲುಗಿನ ಗೀತೆಯಂತೆ ಬಸವಣ್ಣನ ಕುರಿತಾಗಿ(ಶಿವನ ವಾಹನ ನಂದಿ) ಸ್ತುತಿಸುವ ವಸ್ತುವಿಷಯ ಒಳಗೊಂಡಿದೆ. ಹಾಗೆಯೇ ಈ ಎರಡೂ ಹಾಡುಗಳಲ್ಲಿ ಸ್ಥಳನಾಮಗಳ ಕುರಿತಾಗಿ ಪ್ರಸ್ತಾಪಿಸಿರುವುದು ಕಂಡುಬರುತ್ತದೆ. ಕಮಲಾಪುರದಲ್ಲಿ ಸಂಗ್ರಹಿಸಿದ ಕೋಲುಪದದಲ್ಲಿ ಬಳ್ಳಾರಿ, ತೆಕ್ಕಲಕೋಟೆ, ಕುರುಗೋಡು, ಹೊಸಪೇಟೆ, ಕಮಲಾಪುರ ಮತ್ತು ಹಳ್ಳಿಕೆರೆ ಎಂಬ ಊರುಗಳ ಹೆಸರನ್ನು ಮಾತ್ರ ಉಲ್ಲೇಖಿಸಿರುವುದು ಕಂಡು ಬರುತ್ತದೆ. ತೆಲುಗುನಾಡಿನಲ್ಲಿ ಸಂಗ್ರಹಿಸಿದ ಕೋಲುಪದದಲ್ಲಿ ಎರಡೂ ರಾಜ್ಯಗಳ ಗಡಿಪ್ರಾಂತಗಳಲ್ಲಿರುವ ಊರುಗಳ ಹೆಸರುಗಳನ್ನು ಪ್ರಸ್ತಾಪಿಸಲಾಗಿದೆ. ಹಾಗೆಯೇ ತೆಲುಗುನಾಡಿನ ಗೀತೆಯಲ್ಲಿ ಬೂದಾಳು ಮತ್ತು ಕುರುಗೋಡು ಬಸವಣ್ಣನನ್ನು ಸ್ತುತಿಸಿರುವುದಿದೆ, ಆದರೆ ಕನ್ನಡ ನಾಡಿನ ಗೀತೆಯಲ್ಲಿ ಕುರುಗೋಡು ಬಸವಣ್ಣನನ್ನು ಮಾತ್ರ ಸ್ತುತಿಸುತ್ತಾ ಬಸವಣ್ಣ ಹೊಸಪೇಟೆಯನ್ನು ಕಟ್ಟಲಿ ಎಂಬ ಆಶಯದೊಂದಿಗೆ ಬಳ್ಳಾರಿಗೆ ಬಡತನ ಬಂದಿತು. ಹಾಗೆಯೇ ಕಮಲಾಪುರದ ರೈತರಿಗೆ ದೊರೆತನ ಸಿಕ್ಕಿತು ಎಂಬುದು ಈ ಹಾಡಿನಿಂದ ತಿಳಿದುಬರುತ್ತದೆ. ಈ ಹಾಡಿನಲ್ಲಿ 'ರೈತರಿಗೆ ದೊರೆತನ ಸಿಕ್ಕಿತು' ಎಂಬುದು ಜನಪದಗೀತೆ, ಕಥೆಗಳ ರಚನೆಕಾರರು ಅಥವಾ ಜನಪದಕಾರರು ರೈತಾಪಿಗಳೇ ಆಗಿರುವುದರಿಂದ ಅವರು ರಚಿಸಿರುವ ಕೋಲುಪದಗಳಂಥ ಹಾಡುಗಳಲ್ಲಿ ಅವರೇ ರಾಜರು-ನಾಯಕರು ಎಂಬುದು ಈ ಹಾಡಿನ ಮುಖೇನ ಅರಿವಿಗೆ ಬರುತ್ತದೆ.

ಎರಡೂ ಹಾಡುಗಳನ್ನು ಹಾಡಿರುವ ರೀತಿ, ಪ್ರದರ್ಶನ ಮಾಡುವ ರೀತಿ ಒಂದೇಯಾದರೂ ಕೆಲವೊಂದು ಸಾಮ್ಯತೆಗಳು ತಲೆದೋರಿವೆ. ತೆಲುಗು ಗಡಿ ಭಾಗದ ಹಾಡಿನಲ್ಲಿ 'ಕರಿಯಗಡ್ಡೆಯ ಮೇಲೆ ಬರಿಯ ನವಣೆಯ ಬಿತ್ತಿ, ಹಾಲು ತುಂಬುತಲೆ ಗಿಳಿಮುಟ್ಟಿ' ಎಂದಿದೆ. ಇದೇ ಸಾಲುಗಳು ಕನ್ನಡ ನಾಡಿನ ಗಡಿಭಾಗದಲ್ಲಿ ಹೀಗಿವೆ. 'ಹಳ್ಳಿಕೆರೆಯ ಮೇಲೆ ಸಾಲು ನವಣೆ ಬಿತ್ತಿ, ಹಾಲು ತುಮ್ಮುತಲು ಗಿಳಿ ಮುಟ್ಟಿ' ಎಂಬುದಾಗಿದೆ. ಕರಿಯಗಡ್ಡೆಯ ಮೇಲೆ ನವಣೆ ಬಿತ್ತಿರುವುದು ತೆಲುಗುನಾಡಿನ ಹಾಡಿನಲ್ಲಿದೆ. ಆದರೆ ಕನ್ನಡ ನಾಡಿನ ಗೀತೆಯಲ್ಲಿ 'ಹಳ್ಳಿಕೆರೆಯ ಮೇಲೆ ಸಾಲು ನವಣೆ ಬಿತ್ತಿ' ಎಂದಿದೆ. ಹಾಗೆಯೇ ತೆಲುಗು ಗಡಿ ಭಾಗದ ಗೀತೆಯಲ್ಲಿ 'ಹಾಲು ತುಂಬುತಲೆ ಗಿಳಿಮುಟ್ಟಿ' ಎಂದಿದ್ದರೆ ಕನ್ನಡ ಗಡಿ ಭಾಗದ ಹಾಡಿನಲ್ಲಿ 'ಹಾಲು ತುಮ್ಮುತಲೆ ಗಿಳಿಮುಟ್ಟಿ' ಎಂದಾಗಿದೆ. ಅಂದರೆ ತೆಲುಗು ಗಡಿ ಕನ್ನಡದ ಗೀತೆಯಲ್ಲಿ 'ಹಾಲು ತುಂಬುತಲೆ' ಎನ್ನುವ ಸಾಲು ಶಿಷ್ಟ ಕನ್ನಡಕ್ಕೆ ಸಮೀಪದಲ್ಲಿದೆ. ಕನ್ನಡ ನಾಡಿನ ಗೀತೆಯಲ್ಲಿ ಈ ಸಾಲು 'ಹಾಲು ತುಮ್ಮುತಲೆ' ಎಂದಾಗಿದೆ. ತೆಲುಗು ನಾಡಿನ ಹಾಡಿನಲ್ಲಿಯ 'ಬ'ಕಾರಕ್ಕೆ ಬದಲಾಗಿ, ಕನ್ನಡ ನಾಡಿನ ಗೀತೆಯಲ್ಲಿ 'ಮ'ಕಾರವು ಪ್ರವೇಶ ಪಡೆದಿರುವುದು ಕಂಡುಬರುತ್ತದೆ. ಕನ್ನಡ ಗಡಿ ಭಾಗದ ಜನಪದರು ಕನ್ನಡ-ಕನ್ನಡ ಕೋಲುಪದಗಳಲ್ಲಿ ಸಾಹಿತ್ಯಿಕ ಅಂಶಗಳಲ್ಲಿ ವ್ಯತ್ಯಾಸಗಳು ಕಂಡುಬರುತ್ತದೆ. ಹಾಗೆಯೇ ಆಯಾ ಪ್ರದೇಶಗಳ ಹಾಡುಗಳಲ್ಲಿ ಭಾಷಿಕ ಭಿನ್ನತೆಗಳು ಕಂಡುಬರುವುದರ ಜೊತೆಗೆ ಆಯಾ ಪ್ರಾದೇಶಿಕತೆಯ ಸೊಗಡು ಕೋಲುಪದಗಳಲ್ಲಿ ಅನಾವರಣಗೊಳ್ಳುತ್ತದೆ. ಗಡಿಭಾಗದ ಕನ್ನಡ - ಕನ್ನಡ ಕೋಲುಪದಗಳಲ್ಲಿ ಸಾಮ್ಯ-ವೈಷಮ್ಯಗಳು, ಸಮಾನಾಂಶಗಳು, ಭಿನ್ನತೆಗಳು ಕಂಡುಬರುವುದಿದೆ. ಹಾಗೆಯೇ ಈ ಎರಡು ರಾಜ್ಯಗಳ ಗಡಿ ಪರಿಸರದ ಕೋಲುಪದಗಳಲ್ಲಿ ಆಡು ಭಾಷೆಯ ಕನ್ನಡ ಮತ್ತು ಶಿಷ್ಟ ಕನ್ನಡಗಳೆರಡು ಸಮ್ಮಿಳಿತವಾಗಿರುವುದು ಕಂಡುಬಂದಿದೆ. ಈ ಭಾಗದ ಕನ್ನಡ ಕೋಲುಪದಗಳಲ್ಲಿ ತೆಲುಗು ಭಾಷೆಯ ನುಡಿಗಳನ್ನು ಸೇರಿಸಿ ಹಾಡಿರುವುದು ಸಹ ಕಂಡುಬಂದಿದೆ. ಕನ್ನಡ-ತೆಲುಗು ಗಡಿಭಾಗದ ಕನ್ನಡ ತೆಲುಗು ಕೋಲುಪದಗಳಲ್ಲಿ ಎರಡೂ ಭಾಷೆಯ ನುಡಿಗಳು ಸಹಜವಾಗಿ ಏಕವಾಗುವುದು ಕಾಣಸಿಗುತ್ತದೆ. ಹೀಗೆ ಒಂದು ಭಾಷೆಯ ಕೋಲುಪದಗಳಲ್ಲಿ ಮತ್ತೊಂದು ಭಾಷೆಯ ಪದಗಳು ಅಥವಾ ನುಡಿಗಳು ಸೇರಿ ಹೋಗುವುದು ಗಡಿ ಭಾಗದ ಕೋಲುಪದಗಳ ವಿಶಿಷ್ಟತೆ. ಗಡಿ ಭಾಗದಲ್ಲಿ ಹತ್ತು ಹಲವು ರೀತಿಯ ಭಾಷಿಕ ಸಮುದಾಯಗಳು ನೆಲೆಸಿರುವುದರಿಂದ ಈ ರೀತಿಯ ಉದಾಹರಣೆಗಳು ಕೋಲುಪದಗಳು ಸೇರಿದಂತೆ ಸೋಬಾನೆ, ಒಗಟು, ಬಯಲಾಟ, ಭಜನೆಪದಗಳು ಮುಂತಾದ ಜನಪದ ಗೀತ - ಕಥಾಸಾಹಿತ್ಯ ಪ್ರಕಾರಗಳಲ್ಲಿಯೂ ಕೂಡ ಸಹಜವಾಗಿ ಕಂಡುಬರುತ್ತವೆ. ಹೀಗೆ ಗಡಿಭಾಗದ ಕನ್ನಡ - ಕನ್ನಡ ಕೋಲುಪದಗಳು ತನ್ನದೇ ಆದ ಭಾಷಾ ವಿಶಿಷ್ಟತೆ, ಪ್ರಾದೇಶಿಕ ಭಿನ್ನತೆ, ಸಾಮುದಾಯಿಕ ಅನನ್ಯತೆ, ಏಕರೀತಿಯ ವಸ್ತುವೈವಿಧ್ಯತೆಯೊಂದಿಗೆ ದೇಶಿ ಸೊಗಡಿನ ಸಾಂಸ್ಕೃತಿಕ ಅನನ್ಯತೆಯನ್ನು ಗಡಿ ಭಾಗದ ಕೋಲುಪದಗಳು ತೆರೆದಿಡುತ್ತವೆ.

### ೪.೨. ಗಡಿನಾಡ ತೆಲುಗು ಕೋಲುಪದಗಳು

ಕನ್ನಡ - ತೆಲುಗು ಗಡಿಭಾಗದ ಕನ್ನಡ-ಕನ್ನಡ ಕೋಲುಪದಗಳಲ್ಲಿ ಕಂಡು ಬರುವ ಏಕ ರೀತಿಯ ವಸ್ತುವೈವಿಧ್ಯತೆ, ಸಾಮುದಾಯಿಕ ಅನನ್ಯತೆ, ದ್ವಿಭಾಷಿಕತೆ, ಸಾಂಸ್ಕೃತಿಕತೆಯ ಸಮಾನಾಂಶಗಳು

ಕೂಡ, ಗಡಿಭಾಗದ ತೆಲುಗು-ತೆಲುಗು ಕೋಲುಪದಗಳಲ್ಲಿಯೂ ಈ ತರಹದ ಸಾಮ್ಯ-ವೈಷಮ್ಯಗಳು, ಸಮಾನ ರೀತಿಯ ಅಂಶಗಳು ಕಾಣಸಿಗುತ್ತವೆ. ಗಡಿಭಾಗದ ಕನ್ನಡ ಕೋಲುಪದಗಳಲ್ಲಿ ತೆಲುಗು ನುಡಿಗಳು ಬೆರಕೆಯಾಗುವುದು ಕಂಡು ಬರುವಂತೆ, ತೆಲುಗು ಗಡಿಭಾಗದ ತೆಲುಗು ಕೋಲುಪದಗಳಲ್ಲಿ ಕನ್ನಡ ನುಡಿಗಳು ಸೇರಿ ಹೋಗಿರುವುದು ಕಂಡುಬರುತ್ತದೆ. ಕರ್ನಾಟಕ - ಆಂಧ್ರ ಎರಡೂ ರಾಜ್ಯಗಳ ಗಡಿಭಾಗಗಳಲ್ಲಿನ ಕೋಲುಪದಗಳಲ್ಲಿ ಸಹಜವಾಗಿ ಒಂದು ಭಾಷೆಯ ಹಾಡುಗಳಲ್ಲಿ ಮತ್ತೊಂದು ಭಾಷೆಯ ನುಡಿಗಳು ಸೇರಿ ಹೋಗಿರುವುದು ಕಂಡು ಬರುವುದರ ಜೊತೆಗೆ ಪ್ರತ್ಯೇಕವಾಗಿಯೂ ಸಹ ಆಯಾ ಗಡಿಭಾಗಗಳಲ್ಲಿ ಎರಡೂ ಭಾಷೆಯ ಕೋಲುಪದಗಳು ಕಾಣಸಿಗುತ್ತವೆ. ಕನ್ನಡ-ತೆಲುಗು ಗಡಿ ಪ್ರಾಂತಗಳಲ್ಲಿ ಸಂಗ್ರಹಿಸಿದ ತೆಲುಗು-ತೆಲುಗು ಕೋಲುಪದಗಳಲ್ಲಿ ಸಮಾನಾಂಶಗಳು, ಹೋಲಿಕೆ, ವ್ಯತ್ಯಾಸಗಳು, ಸಾಮ್ಯತೆಗಳು ಕಂಡುಬಂದಿವೆ. ಸಂಗ್ರಹಿಸಿಕೊಂಡಿರುವ ಕೋಲುಪದಗಳನ್ನು ವಿಶ್ಲೇಷಣೆ ಮಾಡುವುದರ ಮುಖೇನ ಅಧ್ಯಯನವನ್ನು ನಡೆಸಲಾಗಿದೆ.

ಕರ್ನಾಟಕ ಮತ್ತು ಆಂಧ್ರಪ್ರದೇಶದ ಗಡಿ ಪರಿಸರದ ಪ್ರಾಂತಗಳಲ್ಲಿ ಏಕರೀತಿಯ ವಸ್ತುವೈವಿಧ್ಯತೆಯ ಹಾಡುಗಳು ಕಾಣಸಿಗುತ್ತವೆ. ಎರಡೂ ರಾಜ್ಯಗಳೂ ಭಿನ್ನ ಪ್ರಾಂತಗಳಾದರೂ, ಭಿನ್ನ ರಾಜ್ಯಗಳು, ಭಿನ್ನಭಾಷೆಯೊಂದಿಗೆ ಭಿನ್ನ ಸಂಸ್ಕೃತಿಯನ್ನು ಮತ್ತು ಭಿನ್ನ ಸಮುದಾಯಗಳನ್ನು ಸೇರಿಸಿಕೊಂಡಿದ್ದರೂ ಸಹ, ಈ ಗಡಿ ಪ್ರಾಂತಗಳಲ್ಲಿ ಏಕರೀತಿಯ ವಸ್ತುವೈವಿಧ್ಯತೆ ಮತ್ತು ಏಕರೀತಿಯ ಭಾಷೆಯ ಹಾಡುಗಳು ಸಿಗುತ್ತವೆ. ಒಂದೇ ರೀತಿಯ ಭಾಷೆ ಮತ್ತು ವಸ್ತುವೈವಿಧ್ಯತೆಯನ್ನು ಹೊಂದಿರುವ ಕೋಲುಪದಗಳನ್ನು ಕನ್ನಡ-ತೆಲುಗು ಗಡಿ ಭಾಗದಲ್ಲಿ ಸಂಗ್ರಹಿಸಿದ ಹಿನ್ನೆಲೆಯಲ್ಲಿ ಈ ರೀತಿಯಾಗಿ ಪ್ರಸ್ತಾಪಿಸಬಹುದು.

### ೪.೪. ಗಡಿನಾಡ ತೆಲುಗು ಕೋಲುಪದಗಳಲ್ಲಿ ಸಾಮ್ಯತೆಗಳು

ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ರಾಯದುರ್ಗ ತಾಲೂಕಿನ ಗಲಗಲ್ಲಿನಲ್ಲಿ ಸಂಗ್ರಹಿಸಿದ ತೆಲುಗು ಕೋಲುಪದ ಮತ್ತು ಕರ್ನಾಟಕದ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿನ ಬೇವಿನಮರದಹಟ್ಟಿ ಎನ್ನುವಂಥ ಗಡಿ ಪ್ರಾಂತಗಳಲ್ಲಿ ಸಂಗ್ರಹಿಸಿದ ಕೋಲುಪದಗಳು ಎರಡೂ ತೆಲುಗು ಭಾಷೆಯಲ್ಲಿರುವುದಿದೆ. ಮೊಳಕಾಲ್ಮೂರು ಮತ್ತು ರಾಯದುರ್ಗ ಈ ಎರಡು ಪ್ರಾಂತಗಳು ಗಡಿಬಾಂಧವ್ಯವನ್ನು ತುಂಬಾ ಸಾಮೀಪ್ಯದಿಂದ ಹೊಂದಿರುವುದರಿಂದ ಏಕರೀತಿಯ ಭಾಷೆ, ವಸ್ತುವೈವಿಧ್ಯತೆಯ ಹಾಡುಗಳು ಸಹಜವಾಗಿ ಕಾಣಸಿಗುತ್ತವೆ. ಇಲ್ಲಿ ಪ್ರಸ್ತಾಪಿಸಲಾಗುವ ಕೋಲುಪದಗಳಲ್ಲಿ ಸ್ಥಳನಾಮಗಳು ಅಥವಾ ಊರುಗಳ ಹೆಸರುಗಳನ್ನು ಉಲ್ಲೇಖ ಮಾಡಿರುವುದು ಕಂಡು ಬಂದಿದೆ.

**ರಾಯದುರ್ಗದ ಗಲಗಲ್ಲಿನಲ್ಲಿ ಸಂಗ್ರಹಿಸಲಾದ ತೆಲುಗು ಕೋಲುಪದ**

ಚಿನಪೆಲ್ಲೆ ಪೆದಪೆಲ್ಲೆ ನಡುಮು ನಾಗಲಾಪುರಮು
ಪಕ್ಕನ ಪೊಮುರಾಯಿ ಪೈನ ಹಂಪನೂರು
ಸೋಕು ಸದುನ್ನೈನ ಪಲ್ಲೆ ಸೊಗಸೈನ ಕೊತ್ತಪಲ್ಲೆ
ಚಿನ್ನೊಡ ನೆಲಸಿನ್ನೋಡ ತೈ ತಂದಾನ ತಾನ ತಂದಾನ ||ಚಿನ್ನೋಡಾ||

ಸೊಗಸ್ಯೆನ ಕೊತ್ತಕೂರು ಕೆದುರುಕಲ ವುಂಡಾದಿ
ಕಲಿಕಿದುರ್ಗ ರಾ ಪೊಲ್ಲೂರು ಗೊಲ್ಲಪಟ್ಲ ಪೊತೆ ಚೆರ್ಲೊ ಪೆಲ್ಲೆ
ಮುಚ್ಚಟಕಿ ಮೂಡಿಂಡ್ಲ ಮುಸ್ಲೋಳ ಮುಂದರ
ಅದಿಗೊ ಸಾವಲಕುಂಟ ಚಿಲಕ ಚಿಂತಲಪಲ್ಲೆ
ಮುಗುಪ ರೆಡ್ಡೊರಿಪಲ್ಲೆ ಬಟ್ಟ ಬಯಲುಂಡೇದಿ ಬಾಯೊಲ್ಲ ಪಲ್ಲೆರಾ ||ಚಿನ್ನೋಡಾ||
ಯಿಸುಕ ಯಿಸುಕ ದಿನ್ನುಲು ಯಿಸುಕ ದಿನ್ನುಲಪಲ್ಲೆ
ತಾಟಿ ಮೇಕಲಪಲ್ಲೆ ತಾವು ನಾದೆ ರಾ ||ಚಿನ್ನೋಡಾ||

ತಾಟಿ ಮೆಕಲಪಲ್ಲಿ ಬಡುಗು ಬಾಪನಪಲ್ಲಿ
ತೆಗಿನ ರಾಮನಪಲ್ಲಿ ತುಂಟ್ಲು ಮುಂಡ್ಲುಡೇದಿ ತುಮುಪರ್ಲಿರಾ ಚಿನ್ನೋಡಾ
ತೆಗಿನ ರಾಮನಪಲ್ಲಿ ಅದಿಗೋ ಬೋರಂಪಲ್ಲಿ
ಅದ್ದೋರ ಮುದಗಲ್ಲು ಪೇರ್ಯೆನ ಮನಪಲಿಪೇಟ ನಾದೇರಾ ಚಿನ್ನೋಡಾ
ಅಂದಾಲ ರಾಕೆಟ್ಲ ಅಂಚೇನಾ ಕೊಕುಂಟ್ಲ
ಪೇರ್ಯೆನಾ ವುರವುಕೊಂಡ ಪೇಟ ನಾದೇರಾ ||ಚಿನ್ನೋಡಾ||
ಪಂಡೇದಿ ಪೈಪಲ್ಲೆ ತಡಕ ಬತ್ತಲ ಪಲ್ಲೆ
ತಾವು ವೀಡೇ ಮಾಮಿಡಿ ತೆಲಮು ಸೆಟ್ಟೆ ತೆಲಮು ||ಚಿನ್ನೋಡ||

ಮಲ್ಲೆ ಪೂಲಮ್ಮೆದಿ ಮಾದಿ ದರಮಾರಮು
ರೆನಿಗುಂಟ ದೊರೆಸಾನಿ ರೆನಿಗುಂಟ ದೊರೆಸಾನಿ
ಇಚ್ಚೆನಮ್ಮಾ ದೇವೆಸಲು ದೇವೆಸಲು ತೀಸುಕೋನಿ
ಡಿಗ್ಗುಸೆ ಪೈಕಿ ಲೇಸಿ ಅಂದಿ ಅನಂತಪುರಮು ಅಂದಿ ರಾಮುಡೆಲ್ಲೆನಾಡು ರಾಮ ||ಚಿನ್ನೋಡಾ||

(ವಕ್ತೃ: ಗಾಳೆಪ್ಪ, ಗಲಗಲ್ಲ್, ರಾಯದುರ್ಗ ತಾಲ್ಲೂಕು, ಅನಂತಪುರ ಜಿಲ್ಲೆ)

ರಾಯದುರ್ಗದಲ್ಲಿ ಸಂಗ್ರಹಿಸಿದ ಈ ಕೋಲುಪದದಲ್ಲಿ ಅನಂತಪುರ ಮತ್ತು ರಾಯದುರ್ಗದ ಆಜುಬಾಜಿನಲ್ಲಿ ಬರುವ ಸ್ಥಳನಾಮಗಳು ಅಥವಾ ಊರುಗಳು ಜೊತೆಗೆ ಸಮುದಾಯಗಳ ಹಿನ್ನೆಲೆಯಲ್ಲಿಯೂ ಕೆಲವೊಂದು ಸಮುದಾಯಗಳ ಊರುಗಳನ್ನು ಪ್ರಸ್ತಾಪಿಸಿರುವುದು ಕಂಡು ಬಂದಿದೆ. ಈ ಕೋಲುಪದವು ಹಲವು ಊರುಗಳ ಹೆಸರುಗಳನ್ನು ಪಟ್ಟಿ ಮಾಡಿ ಹಾಡು ರಚಿಸಿರುವುದಿದೆ.

ಅನಂತಪುರ ಮತ್ತು ರಾಯದುರ್ಗದ ಅಕ್ಕಪಕ್ಕದಲ್ಲಿ ಬರುವ ಊರುಗಳ ಹೆಸರುಗಳನ್ನು ಈ ಕೋಲುಪದದಲ್ಲಿ ಕಾಣಬಹುದು. ಈ ಹಾಡಿನಲ್ಲಿ ಸುಮಾರು ಹತ್ತು-ಹದಿನೈದಕ್ಕೂ ಹೆಚ್ಚು ಊರುಗಳ ಪಟ್ಟಿಯು ಕಾಣಸಿಗುತ್ತದೆ. ಅವುಗಳು ಚಿನಪೆಲ್ಲಿ(ಚಿಕ್ಕಹಳ್ಳಿ), ಪೆದಪೆಲ್ಲಿ(ಹಿರೇಹಳ್ಳಿ), ನಾಗಲಾಪುರಂ, ಹಂಪನೂರು, ಹೊಸೂರು, ಪೊಲ್ಲೂರು, ಗೊಲಪೆಲ್ಲಿ(ಗೊಲ್ಲಹಳ್ಳಿ) ರೆಡ್ಡೊರಿಪೆಲ್ಲಿ (ರೆಡ್ಡಿಗರಹಳ್ಳಿ), ಬಯಲಾಗೆ ಇರುವುದೇ ಬಾಯೊಳ್ಳಪೆಲ್ಲಿ(ನಾಯಕ-ಬೇಡರಹಳ್ಳಿ), ಬಾಪನಪಲ್ಲಿ-ಬ್ರಾಹ್ಮಣರು ಇರುವ ಊರು ಬ್ರಾಹ್ಮಣಹಳ್ಳಿ, ರಾಮನಪಲ್ಲಿ(ರಾಮನಹಳ್ಳಿ) ಮುದಗಲ್ಲು, ವುರುವಕೊಂಡ,

ಧರ್ಮಾವರಂ ಹೀಗೆ ಅನಂತಪುರದ ರಾಯದುರ್ಗ, ಕಲ್ಯಾಣದುರ್ಗದ ಸುತ್ತಮುತ್ತಲೂ ಬರುವ ಊರುಗಳ ಹೆಸರುಗಳನ್ನು ಈ ತೆಲುಗು ಕೋಲುಪದದಲ್ಲಿ ಪ್ರಸ್ತಾಪಿಸಿರುವುದು ಕಾಣಸಿಗುತ್ತದೆ. ಈ ಹಾಡಿನಲ್ಲಿ ರೆಡ್ಡಿ, ಬ್ರಾಹ್ಮಣ ಬೇಡ ಅಥವಾ ನಾಯಕ ಸಮುದಾಯಗಳು ನೆಲೆಸಿರುವ ಊರುಗಳನ್ನು ಸಮುದಾಯಗಳ ಹೆಸರಿನಲ್ಲಿ ಪ್ರಸ್ತಾಪ ಮಾಡಿರುವುದಿದೆ. ಹಾಗೆಯೇ ಮಲ್ಲಿಗೆ ಹೂಗಳನ್ನು ಮಾರಾಟ ಮಾಡುವುದಕ್ಕೆ 'ಧರ್ಮಾವರಂ' ಪ್ರಸಿದ್ಧಿ ಪಡೆದಿದೆ ಎಂಬುದು ಈ ಗೀತೆಯಿಂದ ತಿಳಿದುಬರುತ್ತದೆ. ಹೀಗೆ ಈ ಕೋಲುಪದದಲ್ಲಿ ಕೆಲವು ಸಮುದಾಯಗಳ ಸ್ಥಳನಾಮಗಳನ್ನು ಪರಿಚಯ ಮಾಡುವುದರ ಜೊತೆಗೆ ಯಾವ ಯಾವ ಸಮುದಾಯದ ಜನರು ಅನಂತಪುರದಲ್ಲಿ ಹೆಚ್ಚಾಗಿ ನೆಲೆಸಿದ್ದಾರೆ ಎಂಬುದರ ಕುರಿತಾಗಿಯೂ ಈ ಗೀತೆ ಸೂಚ್ಯವಾಗಿ ನಿರೂಪಿಸುವಂತಿದೆ. ಇದೇ ಮಾದರಿಯ ಮತ್ತೊಂದು ಕೋಲುಪದವು ಕರ್ನಾಟಕದ ಗಡಿ ಜಿಲ್ಲೆಯಾದ ಚಿತ್ರದುರ್ಗದ ಮೊಳಕಾಲ್ಮೂರು ತಾಲೂಕಿನ ಬೇವಿನಮರದಹಟ್ಟಿ ಗ್ರಾಮದಲ್ಲಿ ಸಂಗ್ರಹಿಸಲಾಗಿದೆ. ರಾಯದುರ್ಗದ ನಾಗಲಾಪುರದಲ್ಲಿ ಸಂಗ್ರಹಿಸಿದ ಕೋಲುಪದಕ್ಕೂ, ಮೊಳಕಾಲ್ಮೂರುವಿನ ಬೇವಿನಮರದ ಹಟ್ಟಿಯಲ್ಲಿ ಸಂಗ್ರಹಿಸಿದ ಗೀತೆಗೂ ಅಷ್ಟೇನೂ ವ್ಯತ್ಯಾಸಗಳು ಕಾಣಸಿಗದು. ಎರಡು ಹಾಡುಗಳಲ್ಲಿ ಸ್ಥಳನಾಮಗಳು ಅಥವಾ ಊರುಗಳ ಹೆಸರುಗಳನ್ನು ಪ್ರಸ್ತಾಪ ಮಾಡಿರುವುದು ಕಂಡುಬರುತ್ತದೆ.

ಗಡಿ ಪ್ರಾಂತಗಳಲ್ಲಿ ಸಿಕ್ಕಿರುವ ಈ ಎರಡೂ ಕೋಲುಪದಗಳು ಒಂದೇ ರೀತಿಯ ವಸ್ತುವೈವಿಧ್ಯತೆ, ಒಂದೇ ರೀತಿಯ ಭಾಷೆಯನ್ನು ಒಳಗೊಂಡಿರುವುದು ಕಂಡುಬಂದಿದೆ. ಭಿನ್ನ ಪ್ರಾಂತ ಭಿನ್ನ ಸಮುದಾಯಗಳಲ್ಲಿ ಸಿಕ್ಕರೂ ಕೂಡ ಹಾಡುವ ಧಾಟಿ, ರೀತಿ ಏಕವಾಗಿರುವುದಿದೆ. ಜೊತೆಗೆ ಎರಡೂ ಕೋಲುಪದಗಳು ಸ್ಥಳನಾಮ ಅಥವಾ ಊರುಗಳ ಹೆಸರುಗಳನ್ನು ಉಲ್ಲೇಖಿಸಿರುವುದು ಕಂಡುಬಂದಿದೆ.

**ಮೊಳಕಾಲ್ಮೂರುವಿನ ಬೆಳವಿನಮರದಟ್ಟಿಯಲ್ಲಿ ಸಂಗ್ರಹಿಸಿದ ತೆಲುಗು ಕೋಲುಪದ**

ಚಿನ್ನೋಡಾ ನಲ ಚಿನ್ನೋಡಾ ತಯ್ಯಾ
ತಂದನಾನೋ ತಾನಂದನಾನೋ ||ಪ||
ಚಿನ್ನೋಡು ಮಂಚಾಡು ಚಿಲಕೋಡು
ಮಂಚಾಡು ಎಲ್ಲದಡ್ಲಾಡು ನೆಲ್ಲೂರಿ ಸೀಮಾಡು ||ಚಿನ್ನೋಡಾ||

ತಪ್ಪಡಿಕೆ ತಣಚಣಕ ತಿಪ್ಪಗಿರಿನಂದಂ
ಮದ್ದಗಿರಿ ನಂದಂ ಮದಿಕಾಟ ಬಿದನೂರು
ಬಿದನೂರು ದುರ್ಗಂ ಕಲ್ಯಾಣದುರ್ಗಂ ಕಲ್ಲೂರುಮಾದಿ ||ಚಿನ್ನೋಡಾ||

ತಪ್ಪಡಿಕಿ ತಣಚಣಕ ತಿಪ್ಪಗಿರಿನಂದಂ
ಮದ್ದಗಿರಿ ನಂದಂ ಮದಿಕಾಟ ಬಿದನೂರು
ಬಿದನೂರು ದುರ್ಗಂ ಕಲ್ಯಾಣದುರ್ಗಂ ಕಲ್ಲೂರು ಮಾದಿ ||ಚಿನ್ನೋಡಾ||

ಅಜಗಜ ಮಾವೂರು ಅಂದರಿಕಿ ಕೊತ್ತೂರು
ಅರಡಗಡಲಗತನ ದಿನಸುಲಂಗದ ಮಗನ
ತಾಯಪಂಟಾದಿ ದಿನ ಚೂಡಾಲಿ
ಚಿನ್ನೋಡಾ ನಲ ಚಿನ್ನೋಡಾ ತಯ್ಯಾ
ತಂದನಾನೋ ತಾನಂದನಾನೋ
ತಯ್ಯಾ ತದ್ಧಿಮಿತಾ

(ವಕ್ತೃ: ತಿಪ್ಪೇರುದ್ರಯ್ಯ, ಬೇವಿನಮರದಹಟ್ಟಿ, ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಈ ಕೋಲುಪದವು ಕನ್ನಡ ನಾಡಿನಲ್ಲಿ ದೊರೆತರೂ ಸಹ ತೆಲುಗು ನಾಡಿನ ಸ್ಥಳನಾಮಗಳನ್ನು ಕುರಿತು ಉಲ್ಲೇಖಿಸಿರುವುದಿದೆ. ಈ ಹಾಡಿನಲ್ಲಿ ಅನಂತಪುರದ ತಾಲೂಕು ಪ್ರಾಂತಗಳಾದ ರಾಯದುರ್ಗ, ಕಲ್ಯಾಣದುರ್ಗಗಳ ಪ್ರಸ್ತಾಪ ಮಾಡಿರುವುದು ಕಂಡುಬರುತ್ತದೆ. ಈ ಕೋಲುಪದಗಳನ್ನು ಭಿನ್ನ ಸಮುದಾಯಕ್ಕೆ ಸೇರಿದ ಮಾದಿಗ ಮತ್ತು ನಾಯಕ ಸಮುದಾಯಗಳ ಕೋಲುಮೇಳಗಾರರು ಹಾಡಿದ್ದಾರೆ. ಮಾದಿಗ ಮತ್ತು ಬೇಡ ಸಮುದಾಯದವರು ಹಾಡಿರುವುದು ತೆಲುಗು ಭಾಷೆಗೆ ಸೇರಿದ ಕೋಲುಪದ ಎಂಬುದು ವಿಶೇಷವೆನಿಸುತ್ತದೆ. ಗಡಿ ಪ್ರಾಂತಗಳಲ್ಲಿ ಹೆಚ್ಚಾಗಿ ಮಾದಿಗರು ಮತ್ತು ಬೇಡರು ನೆಲೆಸಿರುವುದರಿಂದ ಈ ರೀತಿಯ ಒಂದೇ ಬಗೆಯ ಹಾಡುಗಳು ಹಾಗೂ ಪ್ರದರ್ಶನ ಮಾಡುವ ರೀತಿ ಗಡಿನಾಡ ಪರಿಸರದಲ್ಲಿ ಕಂಡುಬರುತ್ತದೆ. ಕರ್ನಾಟಕದ ಗಡಿಭಾಗದಲ್ಲಿ ದೊರೆತ ತೆಲುಗು ಕೋಲುಪದದಲ್ಲಿ ಕನ್ನಡ ನಾಡಿನ ಊರುಗಳಾದ ಮದ್ದಗಿರಿನಂದಂ(ಮಧುಗಿರಿ) ಬಿದನೂರುಗಳನ್ನು ಪ್ರಸ್ತಾಪ ಮಾಡುವುದರ ಜೊತೆಗೆ ತೆಲುಗುನಾಡಿನ ಪ್ರಾಂತ್ಯವಾದ ಕಲ್ಯಾಣದುರ್ಗದ ಹೆಸರನ್ನು ಉಲ್ಲೇಖ ಮಾಡಿರುವುದು ಕಂಡುಬರುತ್ತದೆ. ತೆಲುಗುನಾಡಿನ ಕೋಲುಪದದಲ್ಲಿ ತೆಲುಗು ನಾಡಿನ ಅನಂತಪುರಂನ ವ್ಯಾಪ್ತಿಯಲ್ಲಿ ಬರುವ ಊರುಗಳ ಹೆಸರುಗಳನ್ನು ಮಾತ್ರ ಉಲ್ಲೇಖ ಮಾಡಿರುವುದಿದೆ. ಆದರೆ ಕನ್ನಡ ನಾಡಿನಲ್ಲಿ ದೊರೆತ ತೆಲುಗು ಕೋಲುಪದದಲ್ಲಿ ಕರ್ನಾಟಕ-ಆಂಧ್ರ ಎರಡು ರಾಜ್ಯಗಳ ಗಡಿ ಭಾಗದ ಪ್ರದೇಶಗಳನ್ನು ಉಲ್ಲೇಖ ಮಾಡಿರುವುದು ಕಂಡು ಬಂದಿದೆ. ಈ ಎರಡೂ ಕೋಲುಪದಗಳಲ್ಲಿ ಸ್ಥಳನಾಮಗಳು ಅಥವಾ ಊರುಗಳ ಹೆಸರುಗಳನ್ನು ಪಟ್ಟಿ ಮಾಡಿಕೊಡುವುದರ ಜೊತೆಗೆ ಎರಡೂ ರಾಜ್ಯಗಳ ಸಂಸ್ಕೃತಿಯು ಕೋಲುಪದಗಳಲ್ಲಿ ಏಕವಾಗಿರುವುದನ್ನು ಕಾಣಬಹುದು. ಕನ್ನಡ ನಾಡಿನಲ್ಲಿ ದೊರೆತ ಕೋಲುಪದದಲ್ಲಿ ಎರಡೂ ರಾಜ್ಯಗಳ ಗಡಿ ಪ್ರಾಂತಗಳ ಭಾಷೆ, ಸಂಸ್ಕೃತಿ ಸಮುದಾಯಗಳ ನಡೆ-ನುಡಿಗಳು ಈ ಕೋಲುಪದದಲ್ಲಿ ಅನಾವರಣಗೊಂಡಿರುವುದು ಗೋಚರಿಸುತ್ತದೆ.

ಕರ್ನಾಟಕದ ಗಡಿ ಪ್ರಾಂತವಾದ ಮೊಳಕಾಲ್ಮೂರುವಿನ ಬೆಳವಿನಮರದಹಟ್ಟಿಯಲ್ಲಿ ಸಂಗ್ರಹಿಸಿದ 'ಚಿನ್ನೋಡಾ ನಲ ಚಿನ್ನೋಡಾ' ಎನ್ನುವಂಥ ಕೋಲುಪದವು ಚಳ್ಳಕೆರೆಯ ಗಡಿ ಪ್ರಾಂತ ಪರಿಸರದಲ್ಲಿಯೂ ಸಹ ಹರಿದಾಡುತ್ತಿದೆ. ಕನ್ನಡ ಮತ್ತು ತೆಲುಗು ನಾಡಿನಲ್ಲಿ ಸಂಗ್ರಹಿಸಿದ ಈ

ಎರಡು ಕೋಲುಪದಗಳ ವಿಶೇಷತೆ ಎಂದರೆ ಕನ್ನಡ ನಾಡಿನಲ್ಲಿ ಸಂಗ್ರಹಿಸಿದ ಗೀತೆಯು 'ಚಿನ್ನೋಡಾ ನಲ ಚಿನ್ನೋಡಾ' ಎನ್ನುವ ಪಲ್ಲವಿಯಿಂದ ಆರಂಭವಾದರೆ, ತೆಲುಗುನಾಡಿನಲ್ಲಿ ಸಂಗ್ರಹಿಸಿದ ಕೋಲುಪದವು 'ಚಿನಪೆಲ್ಲೆ ಪೆದಪೆಲ್ಲೆ' ಎಂಬ ಊರುಗಳ ಹೆಸರುಗಳಿಂದ ಆರಂಭ ಗೊಂಡು ಚರಣಗಳ ಕೊನೆಯಲ್ಲಿ 'ಚಿನ್ನೋಡಾ ನೆಲ ಸಿನ್ನೋಡಾ' ಎಂಬುದಾಗಿ ಬರುತ್ತದೆ. ಹೀಗೆ ಕರ್ನಾಟಕ - ಆಂಧ್ರ ಗಡಿ ಪ್ರಾಂತ ಪರಿಸರದ ತೆಲುಗು-ತೆಲುಗು ಕೋಲುಪದಗಳಲ್ಲಿ ಸಮಾನಾಂಶಗಳು ಕಂಡು ಬಂದರೂ ಸಹ ಈ ರೀತಿಯ ಪ್ರಾದೇಶಿಕತೆಯ ದೃಷ್ಟಿಯಿಂದ ಕೆಲವು ವ್ಯತ್ಯಾಸಗಳು ಕಾಣಸಿಗುತ್ತವೆ.

ಕರ್ನಾಟಕ - ಆಂಧ್ರ ಗಡಿ ಪರಿಸರದಲ್ಲಿ ಹಲವು ಭಾಷೆ, ಸಮುದಾಯಗಳು ನೆಲೆ ನಿಂತಿರುವುದರಿಂದ ಏಕರೀತಿಯ ಸಂಸ್ಕೃತಿಯೊಟ್ಟಿಗೆ ಬಹುತ್ವ ಸಂಸ್ಕೃತಿಯು ಸಹ ತೆರೆದುಕೊಳ್ಳುತ್ತದೆ. ಗಡಿ ಭಾಗದ ಕನ್ನಡ - ತೆಲುಗು ಕೋಲುಪದಗಳಲ್ಲಿಯೂ ಸಹ ಗಡಿ ಭಾಗದಲ್ಲಿ ನೆಲೆಸಿರುವ ಹಲವಾರು ಸಮುದಾಯಗಳ ಭಾಷೆ, ಸಂಸ್ಕೃತಿಯ, ನಡೆ-ನುಡಿಗಳು ಏಕವಾಗಿ ತಾವು ಪ್ರದರ್ಶನ ಮಾಡುವ ಜನಪದ ಗೀತೆಗಳ ಒಂದು ಪ್ರಕಾರವಾದ ಕೋಲುಪದಗಳಲ್ಲಿಯೂ ಇದು ಗೋಚರಿಸುತ್ತದೆ. ಗಡಿ ಭಾಗದ ಕನ್ನಡ - ಕನ್ನಡ ಕೋಲುಪದಗಳಲ್ಲಿಯೂ ಆಯಾ ರಾಜ್ಯದ ಗಡಿಯ ಭೌಗೋಳಿಕತೆ, ಸಮುದಾಯ, ಪ್ರಾದೇಶಿಕತೆಯ ಭಿನ್ನತೆಗಳೊಂದಿಗೆ ಭಾಷೆ ಮತ್ತು ಸಂಸ್ಕೃತಿಗಳು ಏಕವಾಗಿರುವುದು ಕಂಡುಬಂದಿದೆ. ಕನ್ನಡ ಮತ್ತು ತೆಲುಗು ಗಡಿನಾಡಿನ ಕನ್ನಡ ಕೋಲುಪದಗಳಲ್ಲಿ ಒಂದೇ ರೀತಿಯ ಭಾಷೆ ಮತ್ತು ಸಂಸ್ಕೃತಿಗಳು ಗಡಿ ಭಾಗದ ಕನ್ನಡ ಕೋಲುಪದಗಳಲ್ಲಿ ಮೇಳೈಸಿ ಕೊಂಡಿರುವುದು ಕಾಣಸಿಗುತ್ತದೆ. ಗಡಿ ಭಾಗದ ಕನ್ನಡ ಕೋಲುಪದಗಳಲ್ಲಿ ತೋರಿಬರುವ ಸಾಮುದಾಯಿಕ ವ್ಯತ್ಯಾಸಗಳು, ಸಾಹಿತ್ಯಕ ಭಿನ್ನತೆಗಳು, ಪ್ರಾದೇಶಿಕ ಭಿನ್ನತೆಗಳು ಸಹ ತೆಲುಗು ಕೋಲುಪದಗಳಲ್ಲಿಯೂ ಕಂಡುಬರುತ್ತವೆ. ಈ ರೀತಿಯ ಭಿನ್ನತೆಗಳು ಬಂದರೂ ಸಹ ಗಡಿ ಭಾಗದ ತೆಲುಗು ಕೋಲುಪದಗಳಲ್ಲಿ, ಕನ್ನಡ-ತೆಲುಗು ಗಡಿಭಾಗಗಳಲ್ಲಿ ಏಕರೀತಿಯ ಭಾಷೆ ಮತ್ತು ಸಂಸ್ಕೃತಿಗಳು ಎರಡೂ ರಾಜ್ಯಗಳ ಗಡಿ ಭಾಗಗಳ ಕೋಲುಪದಗಳಲ್ಲಿ ಒಂದೇ ರೀತಿಯ ಸಮಾನಾಂಶಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಗಡಿ ಭಾಗದ ಕನ್ನಡ-ತೆಲುಗು ಕೋಲುಪದಗಳು ಆಯಾಯಾ ರಾಜ್ಯಗಳ ಗಡಿ ಭಾಗಗಳಲ್ಲಿ ಎರಡೂ ಭಾಷೆಯ ಕೋಲುಪದಗಳು ಹೇರಳವಾಗಿ ದೊರಕುತ್ತವೆ. ಹಾಗೆಯೇ ಎರಡೂ ಭಾಷೆಯ ನುಡಿಗಳು ಒಂದರೊಳಗೊಂದು ಸಮ್ಮಿಳಿತಗೊಂಡು ದ್ವಿಭಾಷಿಕತೆಯ ಪರಿಸರವನ್ನು ಸೃಷ್ಟಿಸಿಕೊಂಡಿವೆ.

ಕರ್ನಾಟಕ - ಆಂಧ್ರ ಗಡಿನಾಡಿನ ಕೋಲುಪದಗಳಲ್ಲಿ ಸಹಜವಾಗಿ ನುಡಿಬೆರಕೆ, ನುಡಿ ಜಿಗಿತಗಳು ಆಗಿರುವುದು ಸಾಮಾನ್ಯ ಸಂಗತಿ. ಹಾಗೆಯೇ ಕರ್ನಾಟಕ ಗಡಿ ಪ್ರಾಂತಗಳ ಜಾನಪದ ದೈವಗಳಾದ ನುಂಕೆಮಲೆ ಸಿದ್ದೇಶ್ವರ, ನಾಯಕನಹಟ್ಟಿ ತಿಪ್ಪೇಸ್ವಾಮಿ, ಗೌರಸಮುದ್ರ ಮಾರಮ್ಮ, ಕುರುಗೋಡು ಬಸವೇಶ್ವರ ಮುಂತಾದ ಜಾತ್ರಾ ವಿಶೇಷಗಳಿಗೆ ಆಂಧ್ರ ಗಡಿ ಭಾಗದ

ಜನಪದರು ಪಾಲ್ಗೊಳ್ಳುವುದಿದೆ. ಹಾಗೆಯೇ ಆಂಧ್ರದ ಜಾನಪದ ದೈವಗಳಾದ ಕದಿರಿ ನರಸಿಂಹಸ್ವಾಮಿ, ಗುಡ್ಡದ ಮಲ್ಲಯ್ಯ ಮತ್ತು ಹೊಳಗುಂದಿಯ ಸಿದ್ದೇಶ್ವರ ಚೇಳಗುರ್ಕಿ ಎರ್ರಿತಾತ ಮತ್ತಿತ್ತರ ಜಾತ್ರಾ ವಿಶೇಷಗಳಿಗೆ ಕರ್ನಾಟಕದ ಜನಪದರು ಪಾಲ್ಗೊಳ್ಳುವುದು ಕಂಡುಬರುತ್ತದೆ. ಹೀಗೆ ಎರಡೂ ರಾಜ್ಯಗಳ ಜನಪದರು ಗಡಿ ಭಾಗದ ಜಾನಪದ ದೈವಗಳ ಜಾತ್ರೆಗಳಲ್ಲಿ ಪಾಲ್ಗೊಂಡಾಗ ಎರಡೂ ರಾಜ್ಯಗಳ ಭಾಷೆ, ಸಂಸ್ಕೃತಿ, ನಡೆ-ನುಡಿ, ನಂಬಿಕೆ, ಆಚರಣೆಗಳು ಸಹ ಏಕವಾಗಿ ಒಂದರೊಳಗೊಂದು ಸಮ್ಮಿಳಿತವಾಗಿರುವುದು. ಹಾಗಾಗಿ ಕನ್ನಡ-ತೆಲುಗು ಕೋಲುಪದಗಳಲ್ಲಿಯೂ ನುಡಿಬೆರಕೆ, ನುಡಿಜಿಗಿತಗಳು ಸಾಮಾನ್ಯವಾಗಿ ಕಂಡುಬರುವುದಿದೆ.



ಅಧ್ಯಾಯ : ಐದು

# ಕೋಲಾಟ ಪದಗಳ ತೌಲನಿಕ ಅಧ್ಯಯನ

೫.೧. ಗಡಿನಾಡ ಕನ್ನಡ - ತೆಲುಗು ಕೋಲುಪದಗಳು

೫.೨. ಕನ್ನಡ ಗಡಿನಾಡ ಕೋಲುಪದಗಳಲ್ಲಿರುವ ಸಮಾನಾಂಶಗಳು

೫.೩. ಗಡಿನಾಡ ಕೋಲುಪದಗಳ ಸಾಮ್ಯತೆಗಳು

೫.೪. ಕನ್ನಡ ಕೋಲುಪದಗಳಲ್ಲಿ ತೆಲುಗು ನುಡಿಬೆರಕೆ

೫.೫. ಗಡಿನಾಡ ಬೇಡರ ಕೋಲುಪದಗಳು

೫.೬. ಗಡಿನಾಡ ಬೇಡ ಸಮುದಾಯದ ಪಂಗಡಗಳು

೫.೭. ಗಡಿನಾಡ ಮ್ಯಾಸಬೇಡ ಮತ್ತು ಊರುಬೇಡರ ಕೋಲುಪದಗಳು

ಅಧ್ಯಾಯ : ಐದು

# ಕೋಲಾಟ ಪದಗಳ ತೌಲನಿಕ ಅಧ್ಯಯನ

**ಕ**ರ್ನಾಟಕ-ಆಂಧ್ರ ಗಡಿ ಪರಿಸರದಲ್ಲಿ ಕನ್ನಡ-ತೆಲುಗು ಮಾತನಾಡುವುದರ ಜೊತೆಗೆ ಲಂಬಾಣಿ, ಉರ್ದು, ಮತ್ತಿತರ ಭಾಷೆಗಳನ್ನು ಮಾತನಾಡುವುದರಿಂದ ಗಡಿ ಭಾಗದಲ್ಲಿ ನೆಲೆಸಿರುವ ಜನರು ದ್ವಿಭಾಷಿಕರು ಅಥವಾ ಬಹುಭಾಷಿಕರೆನಿಸಿಕೊಳ್ಳುತ್ತಾರೆ. ಗಡಿ ಪ್ರಾಂತಗಳ ಜನಪದ ಕಲೆಗಳಲ್ಲೂ ಕನ್ನಡ-ತೆಲುಗು ಮಿಶ್ರವಿರುವ ಸಾಹಿತ್ಯವೂ ಹಾಗೂ ಪ್ರತ್ಯೇಕ ಭಾಷೆಯ ಸಾಹಿತ್ಯವೂ ವಿಪುಲವಾಗಿ ಹರಿದಾಡುತ್ತಿದೆ. ಕನ್ನಡ ನಾಡಿನ ಗಡಿ ಪರಿಸರದಲ್ಲಿ ಇರುವ ಕನ್ನಡ ಪ್ರಾಂತಗಳ ಜನತೆಯಲ್ಲಿ ಕನ್ನಡವೂ ಸೇರಿದಂತೆ ತೆಲುಗು ಸಾಹಿತ್ಯವೂ ಕನ್ನಡದಷ್ಟೇ ಪ್ರಮಾಣದಲ್ಲಿ ಸಿಗುತ್ತದೆ. ಹಾಗೆಯೇ ತೆಲುಗು-ಕನ್ನಡ ಮಿಶ್ರವಿರುವ ಮೌಖಿಕ ಸಾಹಿತ್ಯವು ಹಲವು ಪ್ರಕಾರಗಳಲ್ಲಿ ಸಿಗುವುದನ್ನು ಕಾಣಬಹುದು. ಕನ್ನಡ ಗಡಿನಾಡ ಪರಿಸರದಲ್ಲಿ ಕನ್ನಡದ ಜೊತೆಗೆ ತೆಲುಗನ್ನು ಮಾತನಾಡುವ ಭಾಷಿಕರು ಹೇರಳವಾಗಿ ಕಂಡುಬರುತ್ತಾರೆ.

ಜನಪದ ಕಲೆಗಳಾದ ಬುರ್ರಕಥಾ, ಬಯಲಾಟ, ಸೋಬಾನೆ, ದಾಸರಾಟ, ಭಜನೆ ಮತ್ತು ಕೋಲಾಟ, ಸಾಮಾಜಿಕ ನಾಟಕ ಮುಂತಾದ ಸಾಂಸ್ಕೃತಿಕ ಆಚರಣೆಗಳಲ್ಲಿ ಕನ್ನಡ-ತೆಲುಗು ಎರಡೂ ಭಾಷೆಗಳನ್ನು ಬಳಸುವುದು ಕಂಡು ಬರುತ್ತದೆ. ಹಾಗೆಯೇ ಆಂಧ್ರಪ್ರದೇಶ(ಸೀಮಾಂಧ್ರ) ಕನ್ನಡದ ಗಡಿ ಪ್ರಾಂತಗಳಿಗೆ ಹೊಂದಿಕೊಂಡಿರುವ ತೆಲುಗು ನಾಡಿನ ಗಡಿ ಪ್ರಾಂತಗಳಲ್ಲಿ ತೆಲುಗು ಮಾತನಾಡುವುದರ ಜೊತೆಗೆ ಕನ್ನಡವನ್ನು ಮಾತನಾಡುತ್ತಾರೆ ಹಾಗೂ ತೆಲುಗು ನಾಡಿನ ಗಡಿ ಪ್ರಾಂತದ ಜನರ ಜನಪದ ಕಲೆಗಳಲ್ಲೂ ತೆಲುಗು-ಕನ್ನಡ ಎರಡೂ ಭಾಷೆಗಳನ್ನು ಬಳಸುವುದು ಕಂಡುಬರುವುದಿದೆ.

ಭಾಷಾ ವಿದ್ವಾಂಸರಾದ ಹಂಪ ನಾಗರಾಜಯ್ಯ ಅವರು ಕನ್ನಡ-ತೆಲುಗು ಭಾಷೆಗಳ ಬಾಂಧವ್ಯ ಕುರಿತು ಪ್ರಸ್ತಾಪಿಸುವ ಸಂದರ್ಭದಲ್ಲಿ ಅವುಗಳ ಬಾಂಧವ್ಯಕ್ಕಿರುವ ಪ್ರಾಚೀನತೆ ಕುರಿತು ಹೀಗೆ ಪ್ರಸ್ತಾಪಿಸಿದ್ದಾರೆ. "ಚಾಲುಕ್ಯರ, ರಾಷ್ಟ್ರಕೂಟರ ಆಳ್ವಿಕೆಯಲ್ಲಿ ಕನ್ನಡ-ತೆಲುಗು ಭಾಷೆಗಳವರು ಸೇರಿ ಹೋಗಿದ್ದರು. ಚಾಲುಕ್ಯರ ಅಧಿಪತ್ಯದಲ್ಲಿ ಈ ಎರಡೂ ಭಾಷೆಗಳವರು ಅನ್ಯೋನ್ಯವಾಗಿ ಅಣ್ಣ-ತಮ್ಮಂದಿರಂತೆ ಒಟ್ಟಿಗೆ ಬಾಳಿದರು"(ಹಂಪ ನಾಗರಾಜಯ್ಯ(ಸಂ); ೧೯೭೩; ಪುಟ ೬)

ಎಂದು ಅಭಿಪ್ರಾಯಿಸಿದ್ದಾರೆ. ಹಂಪನಾ ಅವರ ಈ ಹೇಳಿಕೆಯನ್ನು ಗಮನಿಸಿದರೆ ಕನ್ನಡ-ತೆಲುಗು ಭಾಷಾ-ಸಾಹಿತ್ಯ ಬಾಂಧವ್ಯ ಇಂದು ನೆನ್ನೆಯದಲ್ಲ. ಇದು ಸುಮಾರು ಒಂಬತ್ತು-ಹತ್ತನೆಯ ಶತಮಾನಗಳಿಂದ ಹಿಡಿದು ಇಂದಿನವರೆಗೂ ಎರಡೂ ಭಾಷೆಗಳು ಅವಳಿ-ಜವಳಿ ಮಕ್ಕಳಂತೆ ತೋರಿಬರುತ್ತವೆ ಎಂಬುದನ್ನಿಲ್ಲಿ ಮನಗಾಣಬಹುದು.

ಕನ್ನಡ-ತೆಲುಗು ಭಾಷಾ ಸಾಹಿತ್ಯ ಬಾಂಧವ್ಯವು ಹತ್ತು-ಹನ್ನೆರಡು ಶತಮಾನಗಳಷ್ಟು ಹಳೆಯದು. ಇವೆರಡು ರಾಜ್ಯಗಳ ಗಡಿ ಭಾಗಗಳಲ್ಲಿ ಜನಪದ ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಎರಡು ಭಾಷೆಗಳನ್ನು ಬಳಕೆ ಮಾಡುತ್ತಾರೆ. ಗೀತ ಸಾಹಿತ್ಯ ಪ್ರಕಾರವಾದ ಕೋಲಾಟದ ಪದಗಳಲ್ಲಿ ಎರಡೂ ಭಾಷೆಯ ಹಾಡುಗಳು ವಿಪುಲವಾಗಿ ದೊರಕುತ್ತವೆ. ಈ ಹಾಡುಗಳಲ್ಲಿ ತೆಲುಗು ನಾಡಿನ ತೆಲುಗು ಕೋಲುಪದಗಳಲ್ಲಿ ಕನ್ನಡ ನುಡಿಗಳು ಸೇರಿ ಹೋಗಿರುವುದು ಕಂಡುಬರುತ್ತದೆ. ಹಾಗೆಯೇ ತೆಲುಗು ಗಡಿ ಪರಿಸರದ ಕನ್ನಡ ಕೋಲುಪದಗಳಲ್ಲಿ ತೆಲುಗು ನುಡಿಗಳು ಸೇರಿ ಹೋಗುವುದು ಇದೆ. ಇದು ಆಂಧ್ರಪ್ರದೇಶದ ಗಡಿ ಪ್ರಾಂತಗಳಲ್ಲಿ ಮಾತ್ರವಲ್ಲದೆ ಕರ್ನಾಟಕದ ಗಡಿ ಪ್ರಾಂತಗಳ ಜನಪದ ಕಲೆಗಳಲ್ಲೂ ಹಾಗೂ ಕೋಲುಪದಗಳಲ್ಲೂ ಈ ರೀತಿಯ ಉದಾಹರಣೆಗಳು ಕಾಣಸಿಗುತ್ತವೆ ಹಾಗೂ ತೆಲುಗು ಕೋಲುಪದಗಳು ವಿಪುಲವಾಗಿ ಸಿಗುತ್ತವೆ. ಕನ್ನಡ ಕೋಲಾಟ ಪದಗಳಲ್ಲಿ ಕೋಲು ಹುಯ್ಯುವ ಕಲಾವಿದರಿಗಾಗಲಿ ಅಥವಾ ಕೋಲುಮೇಳಗಾರರಿಗಾಗಲಿ ಇದಾವುದೂ ಗಮನಕ್ಕೆ ಬಾರದೆ ಕನ್ನಡ ಕೋಲುಪದಗಳ ಸಾಹಿತ್ಯದಲ್ಲಿ ತೆಲುಗು, ತೆಲುಗು ಕೋಲುಪದಗಳಲ್ಲಿ ಕನ್ನಡ ನುಡಿಗಳು ಮಿಳಿತವಾಗಿರುವುದು ಕಾಣಸಿಗುತ್ತದೆ.

ಹೀಗೆ ಗಡಿ ಪರಿಸರದ ಕನ್ನಡ-ತೆಲುಗು ಭಾಷೆಗಳು ಪರಸ್ಪರ ಪೂರಕವಾಗಿ ಪ್ರಭಾವಿಸಿ ಕೊಂಡಿರುವುದನ್ನು ಗಮನಿಸಿದರೆ ಅವುಗಳ ಬಾಂಧವ್ಯ ಎಷ್ಟೊಂದು ಗಟ್ಟಿತನದಿಂದ ಕೂಡಿದೆ ಎಂಬುದು ಮನವರಿಕೆಯಾಗುತ್ತದೆ.

**೫.೧. ಗಡಿನಾಡ ಕನ್ನಡ-ತೆಲುಗು ಕೋಲುಪದಗಳು**

ಗಡಿನಾಡ ಕನ್ನಡ-ತೆಲುಗು ಕೋಲುಪದಗಳಲ್ಲಿ ಸಾಮ್ಯ-ವೈಷಮ್ಯಗಳು, ವೈರುಧ್ಯಗಳು, ಹೋಲಿಕೆ-ಭಿನ್ನತೆಗಳು ಹಾಗೂ ಸಮಾನಾಂಶಗಳು ಸಹಜವಾಗಿ ಕಂಡುಬರುತ್ತವೆ. ಆಂಧ್ರ ಪ್ರದೇಶದ (ಸೀಮಾಂಧ್ರ) ಅನಂತಪುರಂ ಜಿಲ್ಲೆಯ ರಾಯದುರ್ಗದಲ್ಲಿ ಸಂಗ್ರಹಿಸಿದ ಕೋಲುಪದ ಮತ್ತು ಕರ್ನಾಟಕದ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿನ ಕಂಪಳದೇವರಹಟ್ಟಿಯಲ್ಲಿ ಸಂಗ್ರಹಿಸಿದ ಕೋಲುಪದಗಳು. ಈ ಎರಡೂ ಕೋಲುಪದಗಳನ್ನು ಗಡಿ ಪರಿಸರದಲ್ಲಿಯೇ ಸಂಗ್ರಹಿಸಿದ್ದು ಒಂದೇ ರೀತಿಯ ವಸ್ತುವೈವಿಧ್ಯತೆಯನ್ನು ಒಳಗೊಂಡಿರುವುದನ್ನು ಗಮನಿಸಬಹುದು. ಈ ಕೋಲುಪದಗಳು ಕೋಲಾಟದ ಪ್ರದರ್ಶನದಲ್ಲಿ ತಾಳಗಡ್ಡಿಯ ಪ್ರಕಾರಕ್ಕೆ ಬರುತ್ತವೆ. ಹಾಗೆಯೇ ಈ ಹಾಡುಗಳಲ್ಲಿ ಹೆಂಡತಿಯಾದವಳು ತನ್ನ ಗಂಡನಿಗೆ ಯಾವ ರೀತಿ ಉಪಚರಿಸುತ್ತಾಳೆ. ಮಕ್ಕಳ ಹತ್ತಿರ ಹೇಗೆ ನಡೆದುಕೊಳ್ಳುತ್ತಾಳೆ. ಜೊತೆಗೆ ಪರಪುರುಷನಿಗೆ ಹೇಗೆ ಉಪಚರಿಸುತ್ತಾ ತನ್ನತನವನ್ನು ತೋರ್ಪಡಿಸುತ್ತಾಳೆಂಬುದು ಈ ಕೋಲುಪದಗಳಲ್ಲಿ ಕಾಣಸಿಗುತ್ತದೆ.

## ತೆಲುಗು ಕೋಲುಪದ

ಎಂಥಾ ವೊಗಲ ಮಾರೀರಾ ಈ ಚಿನ್ನದೀ
ಏಮೀ ನ್ಯಾಯಾಲ ನೆರ್ಚಿರಾ ।ಪ।
ಇಂಟಿ ಮೊಗನಿಕಿ ಜೊನ್ನರೊಟ್ಟಿ
ಪರಾಯಿ ಮೊಗನಿಕಿ ಗೋಧಿಮಿ ರೊಟ್ಟಿ
ನಡುಮ ತಿರಿಗೆ ಓಬಳಮ್ಮಕಿ
ಚಿನ್ನ ಬೀಮು ಕೋಡಿ ಪೆಟ್ಟಾ
ಎಂಥಾ ವೊಗಲಮಾರೀರಾ ಈ ಚಿನ್ನದೀ
ಏಮೀ ನ್ಯಾಯಾಲ ನೆರ್ಚಿರಾ ।ಪ।
(ವಕ್ತೃ: ವಿರೂಪಾಕ್ಷಪ್ಪ - ಕೋಗಿಲತೋಟ, ಆಲೂರು ತಾಲ್ಲೂಕು, ಕರ್ನೂಲ್ ಜಿಲ್ಲೆ)

ಈ ಕೋಲುಪದ ಹೆಂಡತಿ ತನ್ನ ಗಂಡನನ್ನು ನಡೆಸಿಕೊಂಡ ರೀತಿ ಹಾಗೂ ಪರಪುರುಷನನ್ನು ನಡೆಸಿಕೊಳ್ಳುವ ರೀತಿಯನ್ನು ಚಿತ್ರಿಸುತ್ತದೆ. ಹಾಗೆಯೇ ಗಂಡ-ಹೆಂಡತಿಯ ನಡುವಿನ ವಿರಸ ಸನ್ನಿವೇಶ ಚಿತ್ರಣವನ್ನು ನೀಡುತ್ತದೆ. ಇಲ್ಲಿ ಹೆಂಡತಿಯಾದವಳು ಗಂಡನಿಗೆ ಒಣಗಿದ ಜೋಳದ ರೊಟ್ಟಿಯ ಊಟವನ್ನು ಉಣಬಡಿಸಿ ಪರಪುರುಷನಿಗೆ ಅಂದರೆ ಇಟ್ಟುಕೊಂಡಿರುವವನಿಗೆ ಜೋಳದ ರೊಟ್ಟಿಗಿಂತ ಉತ್ತಮವಾದ ಗೋಧಿ ರೊಟ್ಟಿಯನ್ನು ಉಣಬಡಿಸಿದ ಓಬಳಮ್ಮ, ತಾನು ಮಾತ್ರ ಸೋನಮಸೂರಿ ಅನ್ನ ಮತ್ತು ಕೋಳಿಮಾಂಸದ ಬಾಡೂಟವನ್ನು ಸವಿದಿರುವ ಚಿತ್ರಣವಿದೆ. ಇಲ್ಲಿ ತನ್ನ ಗಂಡನಿಗಿಂತ ತಾನಿಟ್ಟುಕೊಂಡಿರುವವನ ಬಗ್ಗೆಯೇ ವಿಶೇಷ ಕಾಳಜಿ ವಕಾಲತ್ತು ವಹಿಸಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಹಾಗೆಯೇ ಕರ್ನಾಟಕದ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನ ಕಂಪಳದೇವರಹಟ್ಟಿಯಲ್ಲಿ ಸಂಗ್ರಹಿಸಿದ ಕೋಲುಪದವೊಂದರಲ್ಲಿ ಇದೇ ಮಾದರಿಯ ಸಮಾನ ಅಂಶಗಳು ಮತ್ತು ಏಕರೀತಿಯ ವಸ್ತುವಿಷಯವಿರುವುದು ಕಂಡುಬಂದಿದೆ.

## ಕನ್ನಡ ಕೋಲುಪದ

ಎಂಥೆಂಥಾ ಮಾತಂಬುತಾನಾ ತಂದೆ
ತಾಯರು ಬಂಧುಬಳಗದ ಮುಂದೆ ।ಪ।
ಎಂಥೆಂಥಾ ಮಾತಂಬುತಾನ
ಮಕ್ಕಳಿಗೆ ನೀಡ್ಯಾಳವ್ವಾ ತಂಗಾಳು ಮುದ್ದೆ
ಗಂಡಗೆ ನೀಡ್ಯಾಳವ್ವಾ ಒಣಗಿದ ರೊಟ್ಟಿ
ಮಿಂಡಗೆ ನೀಡ್ಯಾಳವ್ವಾ ಸಣ್ಣಕ್ಕಿ ಅನ್ನ
ತಾನು ಉಂಡಾಳವ್ವಾ ಕರಿಕಡುಬಿನೂಟ
ಎಂಥೆಂಥಾ ಮಾತಂಬುತಾನ ತಂದೆ
ತಾಯರು ಬಂಧು ಬಳಗದ ಮುಂದೆ ।ಪ।
(ವಕ್ತೃ: ಹನುಮಂತಪ್ಪ, ರಾಯಪುರ, ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಈಗಾಗಲೇ ಪ್ರಸ್ತಾಪಿಸಿದ ತೆಲುಗು ಕೋಲುಪದ ಹಾಗೂ ಕನ್ನಡದ ಈ ಕೋಲುಪದದಲ್ಲಿ ಒಂದೇ ರೀತಿಯ ಚಿತ್ರಣವನ್ನು ಕಟ್ಟಿಕೊಡಲಾಗಿದೆ. ಒಂದೆಡೆ ಗಂಡ ಮತ್ತು ಮಕ್ಕಳ ಮೇಲಿರುವ ಅಸಡ್ಡೆ, ಮತ್ತೊಂದೆಡೆ ಪರಪುರುಷನ ಮೇಲಿರುವ ಪ್ರೀತಿ ವ್ಯಾಮೋಹಗಳನ್ನು ಚಿತ್ರಿಸುತ್ತದೆ. ಕನ್ನಡ ಕೋಲುಪದದಲ್ಲಿ ಗಂಡನನ್ನು ಹೆಂಡತಿಯು ಬಯ್ಯುವ ಹಾಗೆಯೇ ಆರಂಭವಾಗುತ್ತದೆ. ನಂತರ ಅವಳ ಕುರಿತಾಗಿಯೇ ಇಡೀ ಹಾಡಿನಲ್ಲಿ ಗಂಡನಿಂದಲೇ ದೋಷಾರೋಪ ಎದುರಿಸುವ ಹಾಗೆ ಹಾಡು ಮುಂದುವರಿಯುವುದು ಕಂಡು ಬಂದಿದೆ. 'ಎಂಥೆಂಥಾ ಮಾತಾಂಬುತಾನಾ' ಎಂದು ಹೆಂಡತಿ ಗಂಡನನ್ನು ದೂಷಣೆ ಮಾಡುವ ಹಾಗೆ ಕಂಡು ಬಂದರೂ ನಂತರ ಗಂಡನಿಂದ ಹೆಂಡತಿಯನ್ನು ದೂಷಿಸುತ್ತಿರುವುದಿದೆ. ಈ ಹಾಡಿನಲ್ಲಿ ರಾತ್ರಿ ಮಾಡಿ ಉಳಿದ ತಂಗಳು ಮುದ್ದೆಯನ್ನು ಮಾರನೆಯ ದಿನ ತನ್ನ ಮಕ್ಕಳಿಗೆ ನೀಡುವ ತಾಯಿ, ತಾಳಿ ಕಟ್ಟಿದ ಗಂಡನಿಗೆ ಎಷ್ಟೋ ದಿವಸಗಳ ಕಾಲದಿಂದ ಉಳಿದ ಒಣಗಿದ ಜೋಳದ ರೊಟ್ಟಿಯನ್ನು ಬಡಿಸಿರುವುದು ಕಂಡುಬರುತ್ತದೆ. ಹಾಗೆಯೇ ಗಂಡನಿಗೆ ಕಣ್ತಪ್ಪಿಸಿ ಅವನಿಗೆ ಕಾಣದ ಹಾಗೆ ಪರಪುರುಷನಿಗೆ ಸಣ್ಣಕ್ಕಿ ಅನ್ನ(ಸೋನಮಸೂರಿ ಅಕ್ಕಿ)ವನ್ನು ಬಡಿಸಿರುವುದು ಕಂಡುಬರುತ್ತದೆ. ಆದರೆ ತಾನು ಮಾತ್ರ ಕರಿಕಡುಬಿನ ಸವಿಯಾದ ಭೋಜನವನ್ನು ಸವಿದಿರುವುದು ಕಾಣಸಿಗುತ್ತದೆ. ಹೀಗೆ ಗಂಡನಿಗಿಂತ ಪರಪುರುಷನಿಗೆ ಹೆಚ್ಚು ಪ್ರಾಶಸ್ತ್ಯ ನೀಡಿರುವ ಹೆಣ್ಣಿನ ಮತ್ತೊಂದು ಮುಖವೊಂದನ್ನು ಕನ್ನಡ-ತೆಲುಗು ಕೋಲುಪದಗಳೆರಡು ಅನಾವರಣಗೊಳಿಸುತ್ತಿರುವ ಚಿತ್ರಣವಿದೆ. ಇಷ್ಟೇ ಅಲ್ಲದೇ ಗಂಡನನ್ನು ಮತ್ತಷ್ಟು ಹೀನಮಾನವಾಗಿ ನಡೆಸಿಕೊಂಡಿರುವುದು ಈ ಗೀತೆಯಲ್ಲಿ ಕಾಣಬಹುದಾಗಿದೆ.

**ತೆಲುಗು ಕೋಲುಪದ**

ಇಂಟಿ ಮೊಗುನಿಕಿ ನುಲುಕ ಮಂಚಂ
ಪರಾಯಿ ಮೊಗುನಿಕಿ ಪಟ್ಟಿ ಮಂಚಂ
ನಡುಮ ತಿರಿಗೆ ಕುಂಟಗಿತ್ತಿಕಿ
ತೀಪದಿಂಡು ತುದಿಪರಪು ||ಎಂಥಾ||
(ವಕ್ತೃ: ವಿರೂಪಾಕ್ಷಪ್ಪ, ಕೋಗಿಲತೋಟ, ಆಲೂರು ತಾಲ್ಲೂಕು, ಕರ್ನೂಲ್ ಜಿಲ್ಲೆ)

ಇಲ್ಲಿ ಪ್ರಸ್ತಾಪಿಸಿರುವಂತೆ ಗಂಡನಿಗೆ ಹಗ್ಗದಿಂದ ಸುತ್ತಿ ಮಾಡಿದ ಮಂಚವನ್ನು ಮಲಗಲು ವ್ಯವಸ್ಥೆ ಮಾಡಿದರೆ, ಪರಪುರುಷನಿಗೆ ಹಲಗೆಯಿಂದ ಸಿದ್ಧಪಡಿಸಿದ ಮಂಚವನ್ನು ವ್ಯವಸ್ಥೆ ಮಾಡಿರುವುದಿದೆ. ಆದರೆ ತಾನು ಮಾತ್ರ ಮೆತ್ತನೆಯ-ಮೃದುವಾದ ಹತ್ತಿಯಿಂದ ಮಾಡಿದ ತಡಿಯ ಹಾಸಿಗೆಯ ಮೇಲೆ ಮೈ ನೋಯಲಾಗದ ಹಾಗೆ ಮಲಗುವಂತೆ ಸಿದ್ಧಪಡಿಸಿಕೊಂಡಿರುವುದು ಕಾಣಸಿಗುತ್ತದೆ. ಇಲ್ಲಿಯೂ ಹೆಣ್ಣಿನ ಮತ್ತು ಹೆಂಡತಿಯ ಕರಾಳಮುಖ ಹಾಗೆಯೇ ಗಂಡನಿಗೆ ಮಾಡಿದ ಮೋಸದ ಚಿತ್ರಣವನ್ನು ಗಮನಿಸಬಹುದು. ಹಾಗೆಯೇ ಅದೇ ರೀತಿಯಾಗಿ ಕನ್ನಡ ಕೋಲುಪದವು ಹೆಣ್ಣಿನ ಮುಖವಾಡವನ್ನು ಈ ರೀತಿಯಾಗಿ ತೆರೆದಿಡುತ್ತದೆ.

## ಕನ್ನಡ ಕೋಲುಪದ

ಮಕ್ಕಳಿಗೆ ಕಡಿಯಾಲವ್ವಾ ಅಡವಿಯಾಗಳ ಚೇಳು
ಗಂಡಗೆ ಕಡಿಯಾಲವ್ವಾ ಹುತ್ತದಾಗಳ ಸರ್ಪ
ಮಿಂಡಗೆ ಕಡಿಯಾಲವ್ವಾ ಸಗಣ್ಯಾಗಳ ಹುಳ
ನನಗೆ ಕಡಿಯಾಲವ್ವಾ ತಲಿಯಾಗಳ ಹೇನು
ಎಂಥೆಂಥಾ ಮಾತಾಂಬುತಾನ ತಂದೆ
ತಾಯರು ಬಂಧುಬಳಗದ ಮುಂದೆ ||೨||

(ವಕ್ತೃ: ಹನುಮಂತಪ್ಪ, ರಾಯಪುರ, ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಈ ಕೋಲುಪದದಲ್ಲಿ ಪರಪುರುಷ ಸಂಗ ಬಯಸಿರುವ ಹೆಣ್ಣು ತನ್ನ ಗಂಡ ಮತ್ತು ಮಕ್ಕಳಿಗೆ ಹಿಡಿಶಾಪ ಹಾಕಿರುವುದು ಕಂಡುಬಂದಿದೆ. ಪರಪುರುಷನ ಸೇರುವಿಕೆಗೆ ಅಡ್ಡಿಯಾದವರು ಗಂಡ ಮತ್ತು ಮಕ್ಕಳು. ಹಾಗಾಗಿ ಅವರು ಇಲ್ಲವಾದರೆ ತನ್ನ ಕೆಲಸ ಸುಗಮವಾಗುತ್ತದೆ ಎಂಬುದು ಹೆಂಡತಿಯ ಮನೋಭಾವನೆ. ಹಾಗಾಗಿ ತನ್ನ ಮಕ್ಕಳಿಗೆ ಅಡವಿಯಲ್ಲಿರುವ ಅಥವಾ ಕಾಡಿನಲ್ಲಿರುವ ಚೇಳು ಕಡಿದು ಸಾಯಲಿ. ಹಾಗೆಯೇ ತನ್ನ ಗಂಡನಿಗೆ ಹುತ್ತಗಳ ವಿಷಸರ್ಪ ನಾಗರಹಾವು ಕಡಿದು ಸಾಯಲಿ ಎಂದು ಹಿಡಿಶಾಪ ಹಾಕುತ್ತಿರುವುದು ಈ ಕೋಲುಪದದಲ್ಲಿ ಕಾಣಸಿಗುತ್ತದೆ. ಗಂಡ, ಮಕ್ಕಳ ನಾಶವನ್ನು ಬಯಸುತ್ತಿರುವ ಈ ಹೆಣ್ಣು ಪರಪುರುಷನಿಗೆ ಅಥವಾ ತಾನು ಇಟ್ಟುಕೊಂಡಿರುವ ಪರಪುರುಷನಿಗೆ ಮಾತ್ರ ಎಂಥಾ ಅಪಾಯವೂ ಬಾರದಂಥ, ಸಗಣಿಯಲ್ಲಿರುವ ಹುಳು ಕಡಿಯಲೆಂದು, ಹಾಗೆಯೇ ತನಗೆ ತಲೆಯಲ್ಲಿರುವ ಹೇನು ಕಡಿಯಲೆಂದು ಆಶಿಸುವುದು ಗೋಚರಿಸುತ್ತದೆ. ಈ ಕೋಲುಪದದಲ್ಲಿ ಗಂಡ, ಮಕ್ಕಳು ಮಡಿದರೂ ಅಡ್ಡಿಯಿಲ್ಲ. ತನ್ನ ಗೆಳೆಯನಿಗೂ, ತನಗೂ ಯಾವುದೇ ರೀತಿಯ ತೊಂದರೆಯಾಗಬಾರದು ಎನ್ನುವಂಥ ವಿಕಾರ ಮನಸ್ಸಿನ ಹೆಣ್ಣಿನ ಚಿತ್ರಣವನ್ನು ಈ ಗೀತೆಯು ತೆರೆದಿಡುತ್ತದೆ. ಈ ಹೆಣ್ಣಿನ ಮನೋವಿಕಾರಗಳು ಇಷ್ಟಕ್ಕೆ ನಿಲ್ಲದೆ ಅದು ತುಂಬಾ ಅತಿರೇಕಕ್ಕೆ ಹೋಗಿರುವುದು ಇದೆ. ಅದು ತೆಲುಗು ಕೋಲುಪದದಲ್ಲಿ ಮುಂದುವರಿದು ಗಂಡನು ತನ್ನ ಹೆಂಡತಿ ಮಕ್ಕಳಿಗೋಸ್ಕರ ಜೀವನ ನಿರ್ವಹಣೆ ಮಾಡಲೋಸುಗ ಕೂಲಿ-ನಾಲಿ ಮಾಡಲು ಬೇರೆ, ಬೇರೆ ಪರವೂರುಗಳಿಗೆ ವಲಸೆ ಹೋಗುವ ಸಿದ್ಧತೆಯಲ್ಲಿದ್ದಾಗ ಅದಕ್ಕೆ ಯಾವುದೇ ರೀತಿಯ ಪ್ರತಿಕ್ರಿಯೆ ನೀಡದ ಹೆಂಡತಿ, ಪರಪುರುಷನು ಮನೆಯಿಂದ ಹೊರಗಡೆ ಬಂದರೆ ಸಾಕು ಎಂದು ಅವನಿಗೋಸ್ಕರ ಕಾಯುತ್ತಾ ಕುಳಿತು ಅವನ ಸಂಗವನ್ನು ಸೇರಲು ಊರ ಹೊರಗಡೆ ಬುಡ್ಡೆಕಲ್ಲು ಅಥವಾ ಅಗಸಿ ಕಲ್ಲನ್ನು ದಾಟಿಕೊಂಡು ಬಂದು ತನ್ನ ಗೆಳೆಯನನ್ನು ಸೇರುವ ಪ್ರಸಂಗವು ಈ ಕೋಲುಪದದಲ್ಲಿ ಗೋಚರಿಸುತ್ತದೆ.

## ತೆಲುಗು ಕೋಲುಪದ

ಇಂಟಿ ಮೊಗುಡು ದುಂಡುಕಿ ಪೋತೆ
ಇಂಟ್ಲೋನಿಂಟಿ ಬೈಟಿಕಿ ರಾಲೇದು

ಪರಾಯಿ ಮೊಗುಡು ದುಂಡುಕಿ ಪೋತೆ
ಪುಲಿಮೇರು ಅವುತುಲು ವಿಡಿಚಿ ವೊಚ್ಚೆ
(ವಕ್ತೃ: ವಿರೂಪಾಕ್ಷಪ್ಪ, ಕೋಗಿಲತೋಟ, ಆಲೂರು ತಾಲ್ಲೂಕು, ಕರ್ನೂಲ್ ಜಿಲ್ಲೆ)

ಈ ಹಾಡಿನಲ್ಲಿ ಕಾಣಬರುವಂಥ ಸಂಗತಿ ಎಂದರೆ ಮನೆಗಂಡನು ಅಂದರೆ ತನ್ನ ಪತಿ ದುಡಿದು ತರಲು ಬೇರೆ ಊರುಗಳಿಗೆ ಗುಳೆ ಹೊರಟರೆ ಹೆಂಡತಿಯಾದವಳು ನೇಮಕ್ಕಾದರೂ ಗಂಡನನ್ನು ಹೊರಗಡೆ ಬಂದು ಮಾತನಾಡಿಸದೆ ಹೋದಳು. ಆದರೆ ಪರಪುರುಷನು ಕೆಲಸಕ್ಕೆ ಹೊರಟಾಗ ಊರಬಾಗಿಲಲ್ಲಿ ಹಾಕಿರುವ ಬುಡ್ಡೆಕಲ್ಲನ್ನು ಬಿಟ್ಟು ಬಂದು ಅವನ ಕುಶಲೋಪರಿ ವಿಚಾರಿಸಿ ಹೋದಳು ಎಂಬುದನ್ನು ಈ ಗೀತೆ ಸೂಚಿಸುತ್ತದೆ. ಅಂದರೆ ಅವಳಿಗೆ ಗಂಡನಿಗಿಂತ ಗೆಳೆಯನೆ ಮುಖ್ಯ ಅಥವಾ ಪರಪುರುಷನೇ ಮಿಗಿಲು ಎಂಬುದನ್ನು ಸೂಚ್ಯವಾಗಿ ಹೇಳುತ್ತಿದೆ. ಹಾಗೆಯೇ ಕನ್ನಡ ಕೋಲುಪದದಲ್ಲಿ ಹೆಂಡತಿಯು ಗಂಡನನ್ನು ಹೇಗೆ ನಡೆಸಿಕೊಳ್ಳುತ್ತಾಳೆ ಎಂಬುದನ್ನು ತಿಳಿಸುತ್ತದೆ.

### ಕನ್ನಡ ಕೋಲುಪದ

ಮಕ್ಕಳಿಗೆ ಹಾಕ್ಯಾಳವ್ವಾ ಹರಕು ಗೋಣಿಯ
ಗಂಡಗೆ ಹಾಕ್ಯಾಳವ್ವಾ ಈಚಲ ಚಾಪೆ
ಮಿಂಡಗೆ ಹಾಕ್ಯಾಳವ್ವಾ ನಾಕು ಕಾಲಿನ ಮಂಚ
ತಾನು ಮನಿಗ್ಯಾಳವ್ವಾ ತಡಿಯಾದ ಮೇಲೆ
ಎಂಥೆಂಥಾ ಮಾತಂಬುತಾನಾ ತಂದೆ
ತಾಯರು ಬಂಧು ಬಳಗದ ಮುಂದೆ |೨|
(ವಕ್ತೃ: ಹನುಮಂತಪ್ಪ, ರಾಯಪುರ, ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಈಗಾಗಲೇ ಇದೇ ರೀತಿಯ ವಸ್ತುವೈವಿಧ್ಯತೆಯನ್ನು ಹೊಂದಿರುವ ಮಂಚ-ತಡಿಗಳ ಪ್ರಸ್ತಾಪವು ತೆಲುಗು ಕೋಲುಪದದಲ್ಲಿ ಬಂದಿರುವುದು ಕಾಣಸಿಗುತ್ತದೆ. ತೆಲುಗು ಗೀತೆಯಲ್ಲೂ ಗಂಡನಿಗೆ ದಾರ ಅಥವಾ ಹಗ್ಗದಿಂದ ಸಿದ್ಧಪಡಿಸಿದ ಮಂಚವನ್ನು ಗಂಡನಿಗೆ ಮಲಗಲು ನೀಡಿ ಪರಪುರುಷನಿಗೆ ಹಲಗೆಯ ಮಂಚವನ್ನು ಹಾಕಿರುವುದಿದೆ. ಇದೇ ಮಾದರಿಯು ಕನ್ನಡ ಕೋಲುಪದದಲ್ಲಿ ಬಂದಿರುವುದನ್ನು ಕಾಣಬಹುದಾಗಿದೆ. ಇಲ್ಲಿ ಮಕ್ಕಳಿಗೆ ಹರಿದ ಗೋಣಿಯ ಚೀಲದ ಮೇಲೆ ಮಲಗಿಸಿರುವುದು ಮತ್ತು ಗಂಡನಿಗೆ ಈಚಲ ಚಾಪೆಯ ನೀಡಿ ಮಲಗಿಸುವುದು ಇದೆ. ಆದರೆ ಪರಪುರುಷನಿಗೆ ಮಾತ್ರ ನಾಲ್ಕು ಕಾಲಿನ ಹಲಗೆಯ ಮಂಚವನ್ನು ಸಿದ್ಧಪಡಿಸಿರುವುದು ಇದೆ. ಹಾಗೆಯೇ ತಾನು ಮಾತ್ರ ಮೆತ್ತನೆಯ ಹತ್ತಿಯ ತಡಿಯ ಮೇಲೆ ಕೈಕಾಲು ಮೈನೋವಾಗದಂತೆ ಮಲಗುವುದು. ತಡಿ ಮತ್ತು ಮಂಚದ ಪ್ರಸ್ತಾಪವು ಕನ್ನಡ-ತೆಲುಗು ಎರಡೂ ಹಾಡುಗಳಲ್ಲಿ ಬಂದಿರುವುದನ್ನು ಗಮನಿಸಿದರೆ ಗಡಿ ಪರಿಸರದ ಕೋಲುಪದಗಳು ಒಂದೇ ರೀತಿಯ ಸಮಾನಾಂಶಗಳನ್ನು ಹೊಂದಿರುತ್ತವೆ ಎಂಬುದನ್ನು ಸೂಚಿಸುತ್ತದೆ.

## ತೆಲುಗು ಕೋಲುಪದ

ಇಂಟಿ ಮೊಗುನಿಕಿ ಚೆಪ್ಪು ದೆಬ್ಬಾ
ಪರಾಯಿ ಮೊಗುನಿಕಿ ಪಪುಸಿ ದೆಬ್ಬಾ
ನಡುಮು ತಿರುಗೆ ಓಬಳಮ್ಮಕಿ
ನೂನೇ ಹಚ್ಚೀನ ಸಿಲ್ಕಲ ದೆಬ್ಬಾ
(ವಕ್ತೃ: ವಿರೂಪಾಕ್ಷಪ್ಪ, ಕೋಗಿಲತೋಟ, ಆಲೂರು ತಾಲ್ಲೂಕು, ಕರ್ನೂಲ್ ಜಿಲ್ಲೆ)

ತೆಲುಗಿನ ಈ ಕೋಲುಪದದಲ್ಲಿ ಹೆಂಡತಿಯು ತನ್ನ ಗಂಡನನ್ನು ಹೀನಮಾನವಾಗಿ ನಡೆಸಿಕೊಂಡಿರುವುದನ್ನು ಕಾಣಬಹುದು. ಗಂಡನನ್ನು ಚಪ್ಪಲಿಯ ಏಟಿನಿಂದ ಹೊಡೆದು ಘಾಸಿಗೊಳಿಸಿರುವುದಿದೆ. ಹಾಗೆಯೇ ತಾನಿಟ್ಟುಕೊಂಡಿರುವವನಿಗೆ ಮಾತ್ರ ಮುತ್ತು ಕೊಡುವುದರ ಮೂಲಕ ಅವನೊಟ್ಟಿಗೆ ಶೃಂಗಾರ ಪರಿಣಯವನ್ನು ನಡೆಸಿರುವುದು ಗೋಚರವಾಗುತ್ತದೆ. ಹೀಗೆ ಗಡಿಪ್ರಾಂತ ಪರಿಸರದ ಕೋಲುಪದಗಳಲ್ಲಿ ಒಂದೇ ರೀತಿಯ ವಸ್ತುವೈವಿಧ್ಯತೆ ಹಾಗೂ ಸಮಾನಾಂಶಗಳನ್ನು ಹೊಂದಿರುವ ಗೀತೆಗಳು ಸಿಗುತ್ತವೆ. ಕೋಲು ಹುಯ್ಯುವ ಪ್ರಕಾರಗಳಲ್ಲಿ ಸಮಾನ ವೈವಿಧ್ಯತೆಗಳು ಕಂಡುಬರುತ್ತದೆ. ಇಲ್ಲಿ ಪ್ರಸ್ತಾಪಿಸಲಾದ ಕನ್ನಡ-ತೆಲುಗು ಎರಡು ಕೋಲುಪದಗಳು ಭಿನ್ನ ಭಾಷೆಯ ಪದಗಳಾದರೂ ಗಂಡ-ಹೆಂಡತಿಯ ವಿರಸ ಹಾಗೂ ಹೆಂಡತಿಯು ಗಂಡ ಮತ್ತು ಮಕ್ಕಳನ್ನು ನಡೆಸಿಕೊಳ್ಳುವ ರೀತಿಯಲ್ಲಿ ಅಭಿನ್ನತೆ ತೋರಿಬರುತ್ತದೆ. ಇಲ್ಲಿ ಕಂಡುಬರುವ ಹೋಲಿಕೆ ವ್ಯತ್ಯಾಸಗಳೆಂದರೆ ಕನ್ನಡದ ಹಾಡನ್ನು ಹಾಡುವ ಧಾಟಿ ಬೇರೆ ಮತ್ತು ತೆಲುಗಿನ ಹಾಡನ್ನು ಹಾಡುವ ಧಾಟಿ ಬೇರೆ. ಆದರೆ ಇವೆರಡೂ ಹಾಡುಗಳಲ್ಲಿ ಒಂದು ಹೆಣ್ಣು, ತಾನು ಕಟ್ಟಿಕೊಂಡ ಗಂಡನಿಗೆ ಹೇಗೆಲ್ಲಾ ದೈಹಿಕ ಮತ್ತು ಮಾನಸಿಕವಾಗಿ ಹಿಂಸಿಸುತ್ತಾಳೆಂಬುದನ್ನು ಈ ಎರಡೂ ಹಾಡುಗಳಲ್ಲಿ ಒಂದೇ ರೀತಿಯಾಗಿ ವ್ಯಕ್ತವಾಗಿರುವುದು ಕಾಣಬಹುದಾಗಿದೆ. ಈ ಎರಡೂ ಹಾಡುಗಳ ಭಾಷೆ ಬೇರೆ ಆದರೆ ಭಾವನೆಗಳು ಮತ್ತು ವಸ್ತುವಿಷಯವು ಏಕವಾಗಿರುವುದನ್ನು ಕಾಣಬಹುದಾಗಿದೆ.

ಈ ಎರಡೂ ಹಾಡುಗಳಲ್ಲಿ ಕಂಡುಬಂದಿರುವ ಪ್ರತಿಯೊಂದು ಅಂಶಗಳು ಕೂಡ ಒಂದೇ ರೀತಿಯಾಗಿವೆ. ತೆಲುಗು ಕೋಲುಪದದಲ್ಲಿ ಗಂಡನಿದ್ದರೂ ಪರಪುರುಷನ ಸಖ್ಯ ಬಯಸುವ ಹೆಣ್ಣಿನ ಚಿತ್ರಣವಿದೆ. ಕನ್ನಡ ಕೋಲುಪದದಲ್ಲಿಯೂ ಸಹ ಹೆಂಡತಿಯು ಗಂಡ ಮತ್ತು ಮಕ್ಕಳನ್ನು ಹೀನಮಾನವಾಗಿ ನಡೆಸಿಕೊಳ್ಳುವುದಲ್ಲದೆ, ಗಂಡನಿದ್ದರೂ ಪರಪುರುಷನ ಸಖ್ಯವೇ ತನಗೆ ಚೆಂದ ಎಂಬ ಹೆಣ್ಣಿನ ಹಠಮಾರಿತನ ಈ ಎರಡೂ ಹಾಡುಗಳಲ್ಲಿ ಒಂದೇ ರೀತಿಯ ಸಮಾನಾಂಶಗಳು ಗೋಚರಿಸುತ್ತವೆ. ಹೀಗೆ ಗಡಿ ಪರಸರದ ಕೋಲುಪದಗಳು ಎರಡು ಪ್ರತ್ಯೇಕ ಭಾಷೆಗಳಿಂದ ಕೂಡಿದ್ದರೂ ವಸ್ತುವೈವಿಧ್ಯತೆಯಲ್ಲಿ ಸಮಾನಾಂಶವನ್ನು ನಿರೂಪಿಸುತ್ತವೆ.

ಕರ್ನಾಟಕ - ಆಂಧ್ರ ಗಡಿ ಪರಿಸರದ ಭಾಷೆ, ಧರ್ಮ ಮತ್ತು ಜನಪದರ ಕುರಿತಾಗಿ ಕೆ. ಹನುಮಂತರಾಯಪ್ಪ ಅವರು ಪ್ರಸ್ತಾಪ ಮಾಡುತ್ತಾ ಹೀಗೆ ನಿರೂಪಿಸಿದ್ದಾರೆ.

"ಗಡಿನಾಡುಗಳು ಭಾಷಿಕವಾಗಿ ಎಂದೂ ದ್ವೇಷಾ ಅಸೂಯೆ ಬೆಳೆಸಿಕೊಂಡವಲ್ಲ "ಮನುಷ್ಯ ಜಾತಿ ತಾನೊಂದೆವಲಂ" ಎಂಬ ಆದಿಕವಿ ಪಂಪನ ಉಕ್ತಿಯನ್ನು ಜನಪದರು ಓದಿಕೊಂಡಿರದಿದ್ದರೂ ಅದಕ್ಕಿಂತ ನೂರು ಭಾಗ ಧರ್ಮಾತೀತರಾಗಿ, ಜಾತ್ಯಾತೀತರಾಗಿ ಭಾಷೆ, ಗಡಿಗಳ ಯಾವುದೊಂದು ಬಂಧನಕ್ಕೂ ಒಳಗಾಗದೆ ಸುಖೀ ಬದುಕನ್ನು ರೂಪಿಸಿಕೊಂಡು ಕಲಾತ್ಮಕ, ರಸಮಯ, ಬಾಳ್ವೆ ಮಾಡಿದವರು"(ಕೆ. ಹನುಮಂತರಾಯಪ್ಪ.ಕೆ.(ಸಂ); ೨೦೦೯; ಪುಟ ೩೧೨) ಎಂದು ಅಭಿಪ್ರಾಯಿಸಿದ್ದಾರೆ. ಹನುಮಂತರಾಯಪ್ಪ ಅವರ ಹೇಳಿಕೆಯಂತೆ ಕರ್ನಾಟಕ - ಆಂಧ್ರ ಗಡಿ ಪರಿಸರದ ಪ್ರಾಂತಗಳಲ್ಲಾಗಲಿ, ಕರ್ನಾಟಕ - ಮಹಾರಾಷ್ಟ್ರ ಗಡಿ ಪರಿಸರದ ಪ್ರದೇಶಗಳಲ್ಲಾಗಲೀ ಯಾವುದೇ ಭಾಷೆ, ಧರ್ಮ, ಮತ, ಜಾತಿ, ಕುಲ ಸಂಸ್ಕೃತಿಗಳಿರಲಿ ಯಾವುದೇ ಅಡ್ಡಿ-ಆಂತಕಗಳಿಲ್ಲದೆ ಪರಸ್ಪರ ಪೂರಕವಾದ ಅಂಶಗಳನ್ನು ಸಾಂಸ್ಕೃತಿಕವಾಗಿಯೂ, ಧಾರ್ಮಿಕವಾಗಿಯೂ, ಶೈಕ್ಷಣಿಕವಾಗಿಯೂ ಹಾಗೂ ಭಾಷಿಕವಾಗಿಯೂ ಕೊಡು-ಪಡೆ ನಡೆದಿರುವುದು ಕಂಡುಬರುತ್ತದೆ. ಕೋಲಾಟ ಪದಗಳ ಸಾಹಿತ್ಯದಲ್ಲಂತೂ ಕನ್ನಡ-ತೆಲುಗು ಗಡಿನಾಡ ಪರಿಸರದಲ್ಲಿ ಎರಡೂ ಭಾಷೆಗಳ ಮತ್ತು ಎರಡೂ ರಾಜ್ಯಗಳ ಗಡಿ ಪ್ರಾಂತ ಜನರ ಸಂಸ್ಕೃತಿಯೂ ಸಮ್ಮಿಳಿತವಾಗಿರುವುದಿದೆ. ಗಡಿಭಾಗದ ಕೋಲುಪದಗಳಲ್ಲಿ ಎರಡೂ ರಾಜ್ಯಗಳ ಸಂಸ್ಕೃತಿ, ಭಾಷೆ, ಆಚರಣೆ, ಆಹಾರಕ್ರಮ, ಉಡುಗೆ-ತೊಡುಗೆ ಹೀಗೆ ಇತ್ಯಾದಿ ಅಂಶಗಳನ್ನು ಗಡಿ ಪ್ರಾಂತ್ಯಗಳ ಕೋಲುಪದಗಳಲ್ಲಿ ಕಾಣಬಹುದಾಗಿದೆ.

'ಎಂಥೆಂಥಾ ಮಾತಂಬುತಾನ' ಎನ್ನುವಂಥ ಕನ್ನಡ ಕೋಲುಪದದಲ್ಲಿ ಗಡಿ ಪರಿಸರದಲ್ಲಿ ನೆಲೆಸಿರುವ ಜನರ ಆಹಾರಕ್ರಮವನ್ನು ಈ ಕೋಲುಪದದಲ್ಲಿ ಹೀಗೆ ಸೂಚ್ಯವಾಗಿ ನಿರೂಪಿಸಿರುವುದಿದೆ.

**ಕನ್ನಡ ಕೋಲುಪದ**

ಮಕ್ಕಳಿಗೆ ನೀಡ್ಯಾಳವ್ವಾ ತಂಗಳು ಮುದ್ದೆ
ಗಂಡಗೆ ನೀಡ್ಯಾಳವ್ವಾ ಒಣಗಿದ ರೊಟ್ಟಿ
ಮಿಂಡಗೆ ನೀಡ್ಯಾಳವ್ವಾ ಸಣ್ಣಕ್ಕಿ ಅನ್ನ
ತಾನು ಉಂಡಾಳವ್ವಾ ಕರಿಕಡುಬಿನೂಟ
ಎಂಥೆಂಥಾ ಮಾತಂಬುತಾನಾ
(ವಕ್ತೃ: ಹನುಮಂತಪ್ಪ, ರಾಯಪುರ, ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಕರ್ನಾಟಕ - ಆಂಧ್ರ ಗಡಿ ಪ್ರಾಂತ ಪರಿಸರಕ್ಕೆ ಹೊಂದಿಕೊಂಡಿರುವ ಕನ್ನಡ ನಾಡಿನ ಜನರ ಆಹಾರ ಪದ್ಧತಿಯ ಕ್ರಮವನ್ನು ಈ ಕೋಲುಪದವು ತಿಳಿಸಿಕೊಡುತ್ತದೆ. ಈ ಗೀತೆಯು ಕರ್ನಾಟಕದ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ, ಮೊಳಕಾಲ್ಮೂರು ಮತ್ತು ಬಳ್ಳಾರಿಯ ಆಸುಪಾಸಿನ ಪ್ರಾಂತಗಳ ಆಹಾರ ಕ್ರಮವನ್ನು ಕುರಿತಾಗಿದೆ. ಇಲ್ಲಿ ರಾಗಿಮುದ್ದೆ ಅಥವಾ ಜೋಳದ ಮುದ್ದೆ, ರೊಟ್ಟಿ, ಅನ್ನ ಹಾಗೂ ಕರಿಕಡುಬು ಈ ರೀತಿಯ ಆಹಾರ ಕ್ರಮದ ಕುರಿತು ಹಾಡಿನಲ್ಲಿ ಪ್ರಸ್ತಾಪಿಸಿರುವುದಿದೆ. ಚಿತ್ರದುರ್ಗ ಪ್ರಾಂತವು ಮಧ್ಯಕರ್ನಾಟಕದಲ್ಲಿ ಸೇರ್ಪಡೆಯಾದರೂ ಉತ್ತರ ಕರ್ನಾಟಕ ಮತ್ತು ಮಧ್ಯಕರ್ನಾಟಕದ ಎರಡೂ ರೀತಿಯ ಆಹಾರ ಕ್ರಮವನ್ನು ಚಿತ್ರದುರ್ಗದ

ಗಡಿನಾಡಿನ ಜನರು ಉಪಯೋಗಿಸುವುದು ಕಂಡುಬರುತ್ತದೆ. ಉತ್ತರ ಕರ್ನಾಟಕದ ರೊಟ್ಟಿ ಮತ್ತು ದಕ್ಷಿಣ ಕರ್ನಾಟಕದ ರಾಗಿಮುದ್ದೆ ಅಥವಾ ಜೋಳದ ಮುದ್ದೆಯನ್ನು ಬಳಸುತ್ತಾರೆ. ಅಂದರೆ ಎರಡೂ ರೀತಿಯ ವಾತಾವರಣಕ್ಕೆ ಹೊಂದಿಕೊಂಡು ಜೊತೆಗೆ ಗಡಿ ಪರಿಸರಕ್ಕೆ ಸೇರಿಕೊಂಡು ಎರಡೂ ಬಗೆಯ ಆಹಾರದ ರುಚಿಯನ್ನು ಕಂಡುಂಡವರು ಗಡಿನಾಡಿನ ಪ್ರದೇಶದ ಜನರು ಎಂಬುದನ್ನು ಈ ಕೋಲುಪದವು ತಿಳಿಸುತ್ತದೆ.

ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆಯ ರಾಯದುರ್ಗವು ಕರ್ನಾಟಕದ ಮೊಳಕಾಲ್ಮೂರಿಗೆ ಹೊಂದಿಕೊಂಡಿದೆ. ರಾಯದುರ್ಗದಲ್ಲಿ ಸಂಗ್ರಹಿಸಿದ ಒಂದು ಕೋಲುಪದದಲ್ಲಿ ರಾಯದುರ್ಗ ಮತ್ತು ಮೊಳಕಾಲ್ಮೂರು ಗಡಿಪರಿಸರದ ಜನತೆಯ ಆಹಾರ ಕ್ರಮದ ಕುರಿತಾಗಿ ಪ್ರಸ್ತಾಪ ಮಾಡಿರುವುದು ಕಂಡುಬರುತ್ತದೆ.

### ತೆಲುಗು ಕೋಲುಪದ

ಇಂಟಿ ಮೊಗನಿಕಿ ಜೊನ್ನರೊಟ್ಟಿ
ಪರಾಯಿ ಮೊಗನಿಕಿ ಗೋಧಿಮಿ ರೊಟ್ಟಿ
ನಡುಮ ತಿರಿಗೆ ಓಬಳಮ್ಮಕಿ
ಚಿನ್ನ ಭೀಮು ಕೋಡಿಪೆಟ್ಟಾ
ಎಂಥಾ ವೊಗಲ ಮಾರೀರಾ ಈ ಚಿನ್ನದಿ
ಏಮೀ ನ್ಯಾಯಲಾ ನೆರ್ಚೆರಾ |೨|
(ವಕ್ತೃ: ವಿರೂಪಾಕ್ಷಪ್ಪ, ಕೋಗಿಲತೋಟ, ಆಲೂರು ತಾಲ್ಲೂಕು, ಕರ್ನೂಲ್ ಜಿಲ್ಲೆ)

ಈ ಗೀತೆಯಲ್ಲಿ ರಾಯದುರ್ಗ ಮತ್ತು ಮೊಳಕಾಲ್ಮೂರು ಗಡಿ ಪ್ರಾಂತ ಪರಿಸರದ ಆಹಾರ ಕ್ರಮವನ್ನು ನಿರೂಪಿಸುತ್ತದೆ. ಈ ಪ್ರದೇಶಗಳಲ್ಲಿ ನೆಲೆಸಿರುವ ಜನರು ಜೋಳದರೊಟ್ಟಿ(ಜೊನ್ನರಟ್ಟಿ), ಗೋಧಿರೊಟ್ಟಿ ಅಥವಾ ಚಪಾತಿ(ಗೋಧಿಮಿರೊಟ್ಟಿ), ಸೋನಮಸೂರಿ ಅಕ್ಕಿಯ ಅನ್ನ(ಚಿನ್ನಭೀಮು) ಹಾಗೂ ಕೋಳಿಯ ಬಾಡೂಟ(ಕೋಡಿಪೆಟ್ಟಾ)ವನ್ನು ಆಹಾರಕ್ಕಾಗಿ ಬಳಸುತ್ತಿದ್ದರು ಎಂಬುದನ್ನು ತಿಳಿಸುತ್ತದೆ. ಈ ಎರಡೂ ಕೋಲುಪದಗಳಲ್ಲಿ ಆಹಾರ ಕ್ರಮದ ವಿಚಾರವಾಗಿ ಕೆಲವಾರು ಭಿನ್ನತೆಗಳು ತೋರಿಬಂದರೂ ಸಹ ರೊಟ್ಟಿ ಹಾಗೂ ಸಣ್ಣಕ್ಕಿ(ಸೋನ ಮಸೂರಿಯ) ಆಹಾರದ ಕುರಿತಾಗಿ ಸಮಾನವಾದ ಅಂಶಗಳು ಕಂಡುಬಂದಿರುವುದು ಕಾಣಸಿಗುತ್ತದೆ. ಗಡಿ ಪರಿಸರದಲ್ಲಿ ನೆಲೆಸಿರುವ ಜನರಲ್ಲಿ ಸಾಮಾನ್ಯವಾಗಿ ಸಮಾನವಾದ ಜೀವನ ನಿರ್ವಹಣೆಯ ಕ್ರಮವು ಕಂಡುಬರುತ್ತದೆ.

ಕನ್ನಡ ನಾಡಿನ ಚಿತ್ರದುರ್ಗದ ಚಳ್ಳಕೆರೆಯು ಆಂಧ್ರಪ್ರದೇಶದ ಗಡಿಭಾಗಕ್ಕೆ ಹೊಂದಿಕೊಂಡಿದೆ. ವಿದ್ವಾಂಸರಾದ ಎಸ್.ಎಂ. ಮುತ್ತಯ್ಯ ಅವರು ಈ ಭಾಗದಲ್ಲಿ ಸಂಪಾದಿಸಿರುವ ಒಂದು ತೆಲುಗು ಕೋಲುಪದ ಹಾಗೂ ಅನಂತಪುರ ಜಿಲ್ಲೆಯ ಕಲ್ಯಾಣದುರ್ಗದಲ್ಲಿ ಕ್ಷೇತ್ರಕಾರ್ಯದ ಮುಖೇನ ಸಂಗ್ರಹಿಸಿದ ಕೋಲುಪದ ಈ ಎರಡೂ ತೆಲುಗು ಕೋಲುಪದಗಳು ಒಂದೇ

ಮಾದರಿಯಲ್ಲಿರುವುದು ಕಂಡುಬಂದಿದೆ. ಹಾಗೆಯೇ ಈ ಎರಡೂ ಹಾಡುಗಳನ್ನು ಹಾಡುವ ಧಾಟಿ, ಲಯ ಮತ್ತು ವಸ್ತುವೈವಿಧ್ಯತೆಯ ವಿಚಾರದಲ್ಲಿಯೂ ಕೂಡ ಸಮಾನವಾದ ಅಂಶಗಳನ್ನು ಒಳಗೊಂಡಿರುವುದು ಕಂಡುಬಂದಿದೆ. ಈ ಹಾಡುಗಳೆರಡೂ ಭಿನ್ನ ಪ್ರಾಂತಗಳಲ್ಲಿ ದೊರಕಿರುವುದರಿಂದ ಸಾಹಿತ್ಯಿಕ ವಿಚಾರದಲ್ಲಿ ಪ್ರಾದೇಶಿಕ ಭಿನ್ನತೆಯೊಂದು ಬಿಟ್ಟರೆ ಉಳಿದಂತೆ ಎರಡೂ ಹಾಡುಗಳು ಒಂದೇ ರೀತಿಯ ಸಮಾನಾಂಶಗಳನ್ನು ಒಳಗೊಂಡಿವೆ.

**ಅನಂತಪುರ ಜಿಲ್ಲೆಯ ಕಲ್ಯಾಣದುರ್ಗದಲ್ಲಿ ಸಂಗ್ರಹಿಸಿದ ತೆಲುಗು ಕೋಲುಪದ**

ನಲ್ಲಬಂಡ ಶೆರುವುಲೋನ ನಕ್ಕ
ಉನ್ನದೆ ಗುರುಡ ನಕ್ಕ ಉನ್ನದೆ
ನಕ್ಕ ನೆತ್ತಿ ಮೀದ ಬಗಲ ಸುಕ್ಕಾ ಎನ್ನದೆ |೨|

ಆಕು ಲೇಕ ಮಾನು ಮೀದ
ಕಾಕಿ ಉನ್ನದೆ ಗುರುಡ ಕಾಕಿ ಉನ್ನದೆ
ಕಾಕಿ ಕಡುಪುಲೋನ ಮಂಚಿ ಲೋಕಂ ಉನ್ನದೆ |೨|

ಎಕ್ಕಲೇಕ ಗುಂಡು ಮೀದ ಕೋತಿ
ಉನ್ನದೆ ಗುರುಡ ಕೋತಿ ಉನ್ನದೆ
ಕೋತಿ ಕಡುಪುಲೋನ ಮಂಚಿ ವಿದ್ಯೆ ಉನ್ನದೆ |೨|

ದಾಳಿದೂಡೆ ಮಱುಮುಲೋನ
ಹದ್ದು ಉನ್ನವೆ ಗುರುಡ ಹದ್ದುಲುನ್ನವೆ
ಹದ್ದು ಕಡುಪುಲೋನ ಪೆದ್ದ ಬುದ್ಧಿಲುನ್ನವೆ |೨|

(ವಕ್ತೃ: ರೇವಣ್ಣ, ಕಲ್ಯಾಣದುರ್ಗ ತಾಲ್ಲೂಕು, ಅನಂತಪುರ ಜಿಲ್ಲೆ)

ಈ ಕೋಲುಪದವು ಕೋಲಾಟ ಪ್ರದರ್ಶನ ಮಾಡುವ ಕಾಲಕ್ಕೆ ಹಾಡುತ್ತಾರೆ. ಹಾಗೆಯೇ ಕೋಲಾಟದ ಬಹುಮುಖ್ಯ ಪ್ರಕಾರವಾದ 'ತಿಪರಿ' ಎನ್ನುವಂತಹ ಪ್ರಕಾರಕ್ಕೆ ಹಾಡುತ್ತಾ ಕೋಲಾಟ ಪ್ರದರ್ಶನ ಮಾಡುವುದು ಕಂಡುಬರುತ್ತದೆ. ಈ ಗೀತೆಯನ್ನು ಕೋಲಾಟದ ಪ್ರಕಾರಗಳಾದ ಒಂಟಿಗಡ್ಡಿ, ಜೋಡುಗಡ್ಡಿ ಹಾಗೂ ತಾಳಗಡ್ಡಿ ಇವುಗಳ ನಂತರ ಆಡುವ ಪ್ರಕಾರವೇ ತಿಪರಿ. ತಿಪರಿ ಪ್ರಕಾರಕ್ಕೆ ಸೇರಿದ ಕೋಲುಪದಗಳನ್ನು ಪುನಃ ಪುನಃ ಹಾಡುವುದು ಮತ್ತು ಆ ಕ್ಷಣಕ್ಕೆ ಪದಗಳನ್ನು ಹೊಸೆದು ಅಥವಾ ಕಟ್ಟಿ ಹಾಡುವುದು ತಿಪರಿ ಪ್ರಕಾರದಲ್ಲಿ ಕಾಣಸಿಗುತ್ತದೆ. ತಿಪರಿಗೂ ಮುನ್ನ ಕೋಲಾಟದ ಪ್ರದರ್ಶನ ಮಾಡುವ ಕಾಲಕ್ಕೆ ಕೋಲು ಕಲಾವಿದರ ಹೆಜ್ಜೆ, ಗತಿಗಳು ನಿಧಾನಗತಿಯಲ್ಲಿ ಸಾಗುತ್ತಿರುತ್ತವೆ. ಕೋಲಾಟವು ನಿಧಾನಗತಿಯಲ್ಲಿ ಸಾಗುವ ಕಾಲಕ್ಕೆ ಕೋಲಾಟದ ಪ್ರಕಾರದಲ್ಲಿ ತಾಳಗಡ್ಡಿಗೆ ಸಂಬಂಧಿಸಿ ಪ್ರದರ್ಶನವು ಸಾಗುತ್ತಿರುತ್ತದೆ.

### ತಾಳಗಡ್ಡಿಗೆ ಸಂಬಂಧಿಸಿದ ಕನ್ನಡ ಕೋಲುಪದ

ಎರೆಯನ ಹೊಲದಲಿ ಎಳೆಯ ಸೌತೆಕಾಯಿ
ಹರಿ ಅಂದರ್‍ಯಾಗ ಹರಿಯಲಿ ಅಣ್ಣಯ್ಯ
ಹರಿ ಅಂದರ್‍ಯಾಗ ಹರಿಯಲಿ

(ವಕ್ತೃ: ರೇವಣ್ಣ, ಕಲ್ಯಾಣದುರ್ಗ ತಾಲ್ಲೂಕು, ಅನಂತಪುರ ಜಿಲ್ಲೆ)

ಕೋಲಾಟ ಪ್ರದರ್ಶನ ಮಾಡುವ ಕಾಲಕ್ಕೆ ಗಣಪತಿಯನ್ನು ಪ್ರಾರ್ಥಿಸುವುದರ ಮೂಲಕ ಕೋಲಾಟವನ್ನು ಶುರು ಮಾಡುತ್ತಾರೆ. ಪ್ರಾರ್ಥನಾ ಗೀತೆಯು ಮುಗಿದ ನಂತರ ಕೋಲು ಹುಯ್ಯುವ ಕಲಾವಿದರು ತಾಳಗಡ್ಡಿ ಪ್ರಕಾರಕ್ಕೆ ಸೇರಿದ ಗೀತೆಗೆ ಪ್ರದರ್ಶನ ಮಾಡುತ್ತಾ, ತಮ್ಮ ತಮ್ಮ ಪ್ರತಿಸ್ಪರ್ಧಿಯ ಕೋಲುಗೂಟಗಳಿಗೆ ಅಥವಾ ಕೋಲುಕಡ್ಡಿಗಳಿಗೆ ಒಂದು ಸಾರಿ ಸವರುತ್ತಾ, ನಿಧಾನಗತಿಯಲ್ಲಿ ಹೆಜ್ಜೆ ಹಾಕುತ್ತಾ, ಮಂಡಲಾಕಾರವಾಗಿ ಎರಡು ಇಲ್ಲವೆ ಮೂರು ಸುತ್ತನ್ನು ಸುತ್ತುತ್ತಾರೆ. ಹೀಗೆ ನಿಧಾನಗತಿಯಲ್ಲಿ ಸಾಗುವ ತಾಳಗಡ್ಡಿ ಅಥವಾ ಒಂಟಿಕಡ್ಡಿಯ ಕೋಲುಪದ ಮುಗಿದ ತಕ್ಷಣ ತಿಪರಿ ಪ್ರಕಾರಕ್ಕೆ ಸೇರಿದ ಬೇರೊಂದು ಹಾಡನ್ನು ಸೇರಿಸಿಕೊಂಡು ಹಾಡುತ್ತಾರೆ. ಈ ಹಾಡಿಗೆ ಕೋಲು ಕಲಾವಿದರ ಗತಿ ಮತ್ತು ಹೆಜ್ಜೆ ಹಾಕುವುದರಲ್ಲಿ ರಭಸ ಅಥವಾ ತೀವ್ರಗತಿಯನ್ನು ಪಡೆದುಕೊಳ್ಳುತ್ತದೆ. ಈ ತಿಪರಿ ಪ್ರಕಾರದ ಕೋಲಾಟ ಪ್ರದರ್ಶನ ಮಾಡುವಾಗ ಕೋಲು ಕಲಾವಿದರು ತಮ್ಮ ಕೈಗಳಿಗೆ ಪ್ರತಿಸ್ಪರ್ಧಿಗಳ ಕೋಲುಕಡ್ಡಿಗಳಿಂದ ಪೆಟ್ಟು ತಿಂದರೂ ಅದರ ಪರಿವೇ ಇಲ್ಲದೆ ಕೋಲು ಹುಯ್ಯುವುದರಲ್ಲಿ ತಲ್ಲೀನರಾಗಿರುತ್ತಾರೆ.

ಕೋಲಾಟದಲ್ಲಿ ತಿಪರಿ ಪ್ರಕಾರವು ತೀವ್ರಗತಿಯಿಂದ ಆಡುವ ಪ್ರಕಾರವಾಗಿದೆ. ಹೀಗೆ ತಾಳಗಡ್ಡಿ ಅಥವಾ ಒಂಟಿಕಡ್ಡಿ ಪ್ರಕಾರಗಳಿಗೆ ಹಾಡುವ ಗೀತೆಗಳ ನಂತರ ಹಾಡುವ ತೀವ್ರಗತಿಯ ಅಥವಾ ವೇಗದ ಹಾಡುಗಳು ತಿಪರಿ ಪ್ರಕಾರಕ್ಕೆ ಸೇರಿದ ಹಾಡುಗಳಾಗಿರುತ್ತವೆ. ‘ನಲ್ಲ ಬಂಡ ಶೆರುವುಲೋನ ನಕ್ಕ ಉನ್ನದೆ’ ಎನ್ನುವಂಥ ತೆಲುಗು ಕೋಲುಪದವು ಈ ತಿಪರಿ ಪ್ರಕಾರಕ್ಕೆ ಸೇರಿದಂಥ ಹಾಡಾಗಿದೆ.

### ತೆಲುಗು ಕೋಲುಪದ

ನಲ್ಲ ಬಂಡ ಶೆರುವುಲೋನ ನಕ್ಕ
ಉನ್ನದೆ ಗುರುಡ ನಕ್ಕ ಉನ್ನದೆ
ನಕ್ಕ ನೆತ್ತಿ ಮೀದ ಬಗಲ ಸುಕ್ಕ ಉನ್ನದೆ |೨|

### ತೆಲುಗು ಕೋಲುಪದದ ಕನ್ನಡಾನುವಾದ

ಅರ್ಥ: ಕಪ್ಪು ಕಲ್ಲ ಕೆರೆಯ ಒಳಗೆ ನರಿ
ಇದೆಯೋ ಗುರುವೆ ನರಿ ಇದೆಯೋ
ನರಿಯ ನೆತ್ತಿ ಮೇಲೆ ಅಗಲ ಚುಕ್ಕೆ ಇದೆಯೋ

(ವಕ್ತೃ: ರೇವಣ್ಣ, ಕಲ್ಯಾಣದುರ್ಗ ತಾಲ್ಲೂಕು, ಅನಂತಪುರ ಜಿಲ್ಲೆ)

ಈ ಗೀತೆಯು ಕೋಲಾಟದಲ್ಲಿ ತಿಪರಿ ಪ್ರಕಾರಕ್ಕೆ ಹಾಡುವ ಗೀತೆಯಾಗಿದೆ. ಈ ಗೀತೆಯಲ್ಲಿ ನರಿ ಎನ್ನುವಂಥ ಪ್ರಾಣಿಯ ಪ್ರಸ್ತಾಪವಿದೆ. ನರಿಯು ಶುಭ ಸಂಕೇತವೂ ಹೌದು. ಅಪಾಯಕರ ಪ್ರಾಣಿಯೂ ಹೌದು. ಹಾಡಿನಲ್ಲಿ ಕಪ್ಪುಕಲ್ಲ ಕೆರೆಯ ಒಳಗೆ ನರಿ ಇದೆಯೋ ಗುರುವೆ ನರಿ ಇದೆಯೋ ಎಂದು ಹೇಳಿರುವುದರಿಂದ ಕೆರೆಯು ಮಳೆ ಬಾರದೆ ನೀರಿಲ್ಲದೆ ಬತ್ತಿ ಹೋಗಿ ಬರಿದಾಗಿದೆ ಎಂಬ ಸೂಚನೆಯನ್ನು ನೀಡುತ್ತಿದೆ. ಹಾಗೆಯೇ ನರಿಗಳಿಗೆ ನೀರಿನ ದಾಹವಾಗಿ ಕೆರೆಯ ಬಳಿ ಸುಳಿದಾಡಿರಬಹುದು ಹಾಗೂ ನರಿಯ ನೆತ್ತಿಯ ಮೇಲೆ ಅಗಲವಾದ ಒಂದು ನಕ್ಷತ್ರಾಕಾರದ ಚುಕ್ಕೆ ಇರುವುದರಿಂದ ತಿಲಕವಿಟ್ಟಂತೆ ಅಲಂಕಾರ ಭೂಷಣವಾಗಿದೆ ಎಂಬುದನ್ನು ಈ ಗೀತೆ ಸೂಚಿಸುತ್ತದೆ. ಇಲ್ಲಿ ಕೆರೆ ಬತ್ತಿದೆ. ನೀರಿಲ್ಲದೆ ವಾತಾವರಣ ಹದಗೆಟ್ಟಿದೆ. ನರಿಗಳು ಕೆರೆಯ ಬಳಿ ಸುಳಿದಾಡುತ್ತಿವೆ. ಇವೆಲ್ಲ ಕ್ಷಾಮ-ಬರಗಾಲಗಳ ಸೂಚನೆಯ ಚಿತ್ರಣವನ್ನು ಈ ಕೋಲುಪದ ತೆರೆದಿಡುತ್ತದೆ.

ಆಕು ಲೇಕ ಮಾನು ಮೀದ ಕಾಕಿ
ಉನ್ನದೆ ಗುರುಡ ಕಾಕಿ ಉನ್ನದೆ
ಕಾಕಿ ಕಡುಪುಲೋನ ಮಂಚಿ ಲೋಕಮುನ್ನದೆ

**ಕನ್ನಡಾನುವಾದ**

ಎಲೆಯೆ ಇರದ ಮರದ ಮೇಲೆ ಕಾಗೆ
ಇದೆಯೋ ಗುರುವೆ ಕಾಗೆ ಇದೆಯೋ
ಕಾಗೆ ಹೊಟ್ಟೆಯೊಳಗೆ ಒಳ್ಳೆ ಲೋಕವಿದೆಯೋ

ಈ ಕೋಲುಪದದ ಸಾಲುಗಳಲ್ಲಿ ಎಲೆಯೆ ಇರದ ಬೋಳು ಮರದ ಮೇಲೆ ಕಾಗೆ ಕುಳಿತಿರುವ ಚಿತ್ರಣವಿದೆ. ಅಂದರೆ ಮಳೆ ಇಲ್ಲದೆ ಇಡೀ ಪ್ರಕೃತಿಯು ಅಥವಾ ಇಡೀ ಕಾಡಿನಲ್ಲಿರುವ ಗಿಡ-ಮರಗಳೆಲ್ಲವೂ ಮಳೆ ಇಲ್ಲದೆ, ನೀರಿಲ್ಲದೆ ಸೂರ್ಯನ ಬಿಸಿಲ ತಾಪಕ್ಕೆ ಮರಗಳಲ್ಲಿ ಹಸಿರಿಲ್ಲದಂತೆ ಎಲೆಗಳೆಲ್ಲವೂ ಉದುರಿ ಒಣಗಿ ಹೋಗಿರುವುದು ಕಂಡುಬರುತ್ತದೆ. ಹೀಗೆ ಮಳೆಬಾರದೆ, ನೀರಿಲ್ಲದೆ ಬೆಳೆದು ನಿಂತ ಫಸಲು ಕೂಡ ಒಣಗಿ ಹೋಗಿರುವುದಲ್ಲದೆ ತಮ್ಮ ಹಳ್ಳಿಗಳಿಗೆ ಕ್ಷಾಮ-ಬರಗಾಲಗಳು ತಲೆದೋರಿದ್ದವು ಎಂಬುದನ್ನು ಜನಪದರು ಈ ರೀತಿ ಕೋಲುಪದಗಳಲ್ಲಿ ಸೂಕ್ಷ್ಮವಾಗಿ ಕಟ್ಟಿಕೊಟ್ಟಿದ್ದಾರೆಂದು ಹೇಳಬಹುದು. ಹಾಗೆಯೇ ಈ ಕೋಲುಪದದಲ್ಲಿ ಕಪ್ಪುಕಲ್ಲು, ನರಿ, ಬೋಳುಮರ ಮತ್ತು ಕಾಗೆ ಇವೆಲ್ಲವೂ ಅಶುಭ ಸಂಕೇತಗಳೂ ಹೌದು. ಅಪಾಯಕರ ಸೂಚನೆಗಳು ಹೌದು. ಆದಾಗ್ಯೂ ಕಾಗೆ ಹೊಟ್ಟೆಯೊಳಗೆ ಒಳ್ಳೆ ಲೋಕವಿದೆಯೋ ಎನ್ನುವಂಥ ಸಾಲನ್ನು ಅವಲೋಕಿಸಿದಾಗ ಜನಪದರು ಯಾವುದೇ ರೀತಿಯ ಅಥವಾ ಎಂತಹುದೇ ಕಷ್ಟಕಾರ್ಪಣ್ಯಗಳು ಎದುರಾದರೂ ಅಧೈರ್ಯರಾಗದೆ 'ಆಗೋದೆಲ್ಲ ಒಳ್ಳೆದಕ್ಕೆ' ಎನ್ನುವ ನುಡಿಗಟ್ಟಿನಂತೆ ಯಾವಾಗಲೂ ಆಶಾಭಾವನೆಯ ಮನಸ್ಥಿತಿಯನ್ನು ಹೊಂದಿದ್ದರು

ಎಂಬುದನ್ನು ಈ ಕೋಲುಪದದಲ್ಲಿ ಸೂಚ್ಯವಾಗಿ ಅಥವಾ ಮಾರ್ಮಿಕವಾಗಿ ಹೇಳುವಂತೆ ತೋರಿಬರುತ್ತದೆ.

### ತೆಲುಗು

ಎಕ್ಕಲೇಕ ಗುಂಡು ಮೀದ ಕೋತಿ
ಉನ್ನದೆ ಗುರುಡ ಕೋತಿ ಉನ್ನದೆ
ಕೋತಿ ಕಡುಪುಲೋನ ಮಂಚಿ ವಿದ್ಯೆ ಉನ್ನದೆ

### ಕನ್ನಡಾನುವಾದ

ಏರಲಾರದ ಬಂಡೆ ಮೇಲೆ ಕೋತಿ
ಇದೆಯೋ ಗುರುವೆ ಕೋತಿ ಇದೆಯೋ
ಕೋತಿ ಹೊಟ್ಟೆಯೊಳಗೆ ಒಳ್ಳೆ ವಿದ್ಯೆ ಇದೆಯೋ

ಪ್ರಕೃತಿಯಲ್ಲಿ ಅಸಾಧ್ಯ ಎನ್ನುವಂಥದು ಏನೂ ಇಲ್ಲ. 'ಮನಸಿದ್ದಲ್ಲಿ ಮಾರ್ಗ' ಎಂಬ ನುಡಿಗಟ್ಟನ್ನು ಈ ಕೋಲುಪದದ ಸಾಲುಗಳು ನೆನಪಿಸುತ್ತವೆ. ಈ ಗೀತೆಯಲ್ಲಿ ಕೋತಿಯೊಂದು ಏರಲಾರದ ಅಥವಾ ಹತ್ತಲಾಗದ ಬಂಡೆಯನ್ನು ಏರಿ ಬಂಡೆಯ ತುದಿಯಲ್ಲಿ ಕುಳಿತಿದೆ ಎನ್ನುವಂಥ ಚಿತ್ರಣವನ್ನು ನೀಡುತ್ತದೆ. ಏರಲಾರದ ಬಂಡೆಯೊಂದನ್ನು ಏರಿದೆ; ಅಂದರೆ ಅದು ತನ್ನ ತಾಯಿ ಕೋತಿಯಿಂದ ನುರಿತ ತರಬೇತಿ ಪಡೆದಿದೆ ಹಾಗೂ ಪ್ರಾಕೃತಿಕವಾಗಿ ಇದು ಸಹಜವಾದ ಪ್ರಕ್ರಿಯೆಯಾಗಿದೆ. ಏರಲಾರದ ಬಂಡೆಯನ್ನು ಕೋತಿ ಏರಿದೆ; ಅಂದರೆ ಕಲಿಕೆಯಿಂದ ಎಲ್ಲವೂ ಸಾಧ್ಯ ಎಂಬುದನ್ನು ಸೂಚಿಸುತ್ತದೆ. ಹಾಗೆಯೆ ಬಂಡೆ ಏರುವಂತಹ ಕಠಿಣವಾದ ವಿದ್ಯೆಯನ್ನು ಕೋತಿ ಅತಿ ಸುಲಭವಾಗಿ ತನ್ನ ವಶಮಾಡಿಕೊಂಡಿದೆ ಎಂಬುದನ್ನು ಈ ಕೋಲುಪದದಲ್ಲಿ ಕಾಣಬಹುದು. ಹಾಗೆಯೇ ಈ ಕೋಲುಪದದ ಕೊನೆಯ ಸಾಲುಗಳು ಅಥವಾ ಚರಣವು ಕೆಲವು ಶತಮಾನಗಳ ಹಿಂದಿನ ಮಠಾಧಿಪತಿಗಳಿಗೂ ಹಾಗೂ ಪ್ರಸ್ತುತದಲ್ಲಿರುವ ಮಠಾಧಿಪತಿಗಳೂ ಅಥವಾ ಸ್ವಾಮೀಜಿಗಳಿಗೂ ಯಾವುದೇ ರೀತಿಯ ಭಿನ್ನತೆಗಳಿಲ್ಲವೆಂಬಂತೆ ಸುಮಾರು ಶತಮಾನಗಳ ಹಿಂದೆಯೇ ಜನಪದರು ಕೋಲುಪದಗಳಲ್ಲಿ ಅಥವಾ ಇತರ ಜನಪದ ಪ್ರಕಾರದ ಗೀತೆಗಳಲ್ಲಿ ಸೂಚಿಸಿರುವುದನ್ನು ಕಾಣಬಹುದಾಗಿದೆ. ಮಠಾಧಿಪತಿಗಳ ಕುರಿತಾಗಿ ವಿಡಂಬನಾತ್ಮಕವಾಗಿ ವಿಮರ್ಶಿಸಿರುವ ಕೋಲುಪದ.

ದಾಳಿದೂಡೆ ಮಠುಮುಲೋನ ಹದ್ದುಲು
ಉನ್ನವೆ ಗುರುಡ ಹದ್ದುಲು ಉನ್ನವೆ
ಹದ್ದು ಕಡುಪುಲೋನ ಪೆದ್ದ ಬುದ್ಧಿಲುನ್ನವೆ

ಈ ಕೋಲುಪದದಲ್ಲಿ ಮಠಾಧಿಪತಿಗಳನ್ನು ಅಥವಾ ಸ್ವಾಮೀಜಿಗಳನ್ನು ಹದ್ದುಗಳಿಗೆ ಹೋಲಿಕೆ ಮಾಡಿರುವುದನ್ನು ಗಮನಿಸಿದರೆ ಸ್ವಾಮೀಜಿಗಳ ನ್ಯಾಯ, ನಿಷ್ಠೆಗಳು ಎಂತಹವು ಎಂಬುದು

ವೇದ್ಯವಾಗುತ್ತದೆ. ಈ ಹಾಡಿನಲ್ಲಿ ಸ್ವಾಮೀಜಿಗಳನ್ನು ಅಥವಾ ಮಠಾಧೀಶರನ್ನು ಹದ್ದುಗಳಿಗೆ ಹೋಲಿಸಿ ಪ್ರಸ್ತುತ ಸಮಾಜದಲ್ಲೂ ಸ್ವಾಮೀಜಿಗಳ ವರ್ತನೆ ರಾಜಕೀಯವಾಗಿ ತೆರೆಮರೆಯಲ್ಲಿ ಕೆಲಸ ಮಾಡುವುದು ಇತ್ಯಾದಿ ವಿಚಾರಗಳನ್ನು ವಿಡಂಬನಾತ್ಮಕವಾಗಿ ವಿಮರ್ಶಿಸುತ್ತಾ ಚಿತ್ರಿಸಿರುವುದನ್ನು ಕಾಣಬಹುದಾಗಿದೆ. ಈ ಗೀತೆಯಲ್ಲಿ ಜನಜೀವನದಲ್ಲಿ ಆದ ಏರುಪೇರುಗಳು, ಪ್ರಾಕೃತಿಕ ವಿಕೋಪಗಳು, ಜನರನ್ನು ಹೇಗೆ ಸಂಕಷ್ಟಕ್ಕೆ ಸಿಲುಕಿಸುತ್ತವೆ, ಹಾಗೆಯೆ ಕೆಲವು ಪ್ರಾಣಿಗಳ ಮುಖೇನ ಜನಜೀವನದ ಸ್ಥಿತಿಗತಿಗಳನ್ನು ಅರಿಯುವ ಪ್ರಯತ್ನವನ್ನು ವಿಚಾರ ಮಾಡಲಾಗಿದೆ ಹಾಗೂ ಇದೇ ಮಾದರಿಯ ವಸ್ತುವಿಷಯ ಮತ್ತು ಸಮಾನ ಅಂಶಗಳನ್ನು ಹೊಂದಿರುವ ಕೋಲುಪದವೊಂದನ್ನು ಕರ್ನಾಟಕ ಮತ್ತು ಆಂಧ್ರ ಪ್ರದೇಶದ ಗಡಿ ಪ್ರಾಂತ್ಯಕ್ಕೆ ಹೊಂದಿಕೊಂಡಿರುವ, ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನ ನೆಲಗೇತನಹಟ್ಟಿ ಎಂಬ ಹಟ್ಟಿ ಪರಿಸರದಲ್ಲಿ ಎಸ್.ಎಂ. ಮುತ್ತಯ್ಯ ಅವರು ಸಂಗ್ರಹಿಸಿ ಪ್ರಕಟಿಸಿರುವ 'ಬಡಗಿ ಕಟ್ಟಿದ ಬೆಡಗಿನ ಮಾಳಿಗೆ' ಎನ್ನುವಂಥ ಕೃತಿಯಲ್ಲಿ ಕಾಣಬಹುದಾಗಿದೆ. ಈ ಕೃತಿಯು ಕರ್ನಾಟಕಾಂಧ್ರ ಗಡಿ ಪರಿಸರಕ್ಕೆ ಹೊಂದಿಕೊಂಡಿರುವ ಪ್ರಾಂತವಾದ ಚಳ್ಳಕೆರೆ ಭಾಗದಲ್ಲಿ ಸಂಗ್ರಹಿಸಲಾಗಿದೆ. ಹಾಗಾಗಿ ಈ ಕೃತಿಯಲ್ಲಿ ಕನ್ನಡ - ತೆಲುಗು ಕೋಲಾಟ ಪದಗಳನ್ನು ಸಂಗ್ರಹಿಸಿಕೊಡಲಾಗಿದೆ.

ಈಗಾಗಲೇ ಪ್ರಸ್ತಾಪಿಸಿರುವಂತೆ ಕ್ಷೇತ್ರಕಾರ್ಯದ ಮುಖೇನ ಕಲ್ಯಾಣದುರ್ಗದಲ್ಲಿ ಸಂಗ್ರಹಿಸಿದ-

ನಲ್ಲ ಬಂಡ ಸೆರುವುಲೋನ ನಕ್ಕ
ಉನ್ನದೆ ಗುರುಡ ನಕ್ಕ ಉನ್ನದೆ
ನಕ್ಕ ನೆತ್ತಿಮೀದ ಬಗಲ ಸುಕ್ಕ ಉನ್ನದೆ

ಈ ಹಾಡಿಗೂ ಹಾಗೂ ಮುತ್ತಯ್ಯ ಅವರು ಸಂಪಾದಿಸಿರುವ ಹಾಡಿಗೂ ತುಂಬಾ ಸಾಮ್ಯ ವೈಷಮ್ಯಗಳಿದ್ದರೂ, ಈ ಎರಡು ಕೋಲುಪದಗಳು ಹಲವು ರೀತಿಯ ಅಭಿನ್ನತೆಗಳನ್ನು ತನ್ನೊಳಗೆ ಸೇರಿಸಿಕೊಂಡಿವೆ. ಮುತ್ತಯ್ಯ ಅವರು ಸಂಪಾದಿಸಿ ಪ್ರಕಟಿಸಿರುವ ತೆಲುಗು ಕೋಲುಪದ

ಸಿಂತಮಾನ ಕೇಸಿಂಡಡೆ ಸಂದಮಾಮ ರಂಗ
ಸಂದಮಾಮ ಗಂಟಿ ಪಲುವು ಎಲ್ಲರೆ ಸಂದಮಾಮ
ವದ್ದಿ ಮಾನು ಸೆರುವುಲೋನ ಗೆದ್ದ, ವುಂಡಾದಿ ಗರುಡ ಗೆದ್ದ ವುಂಡಾದಿ
ಗೆದ್ದ ಎದಲಾನ ಬಾಳಮು ಬುದ್ದಿ. ವುಂಡಾದೆ |ಪ|

ಕ್ಕಮಾನು ಸೆರುವುಲಾನ ನಕ್ಕ ವುಂಡಾದೆ ಗರುಡ ನಕ್ಕ ವುಂಡಾದೆ
ನಕ್ಕ ಪನಲಾನ ಪಗಲು ಸುಕ್ಕ ವುಂಡಾದೆ |ಪ|

ಸಿಂತಮಾನ ಕೊಮ್ಮಲಾನ ಸಿಲುಕ ವುಂಡಾದೆ ಗರುಡ ಸಿಲುಕ ವುಂಡಾದೆ
ಸಿಲುಕ ಮೆಡಲಾನ ಎಚಿಡಿ ನುಲುಕ ವುಂಡಾದೆ |ಪ|

(ಮುತ್ತಯ್ಯ ಎಸ್.ಎಂ., ೨೦೧೨, ಪುಟ ೬೫)

ಕಲ್ಯಾಣದುರ್ಗದಲ್ಲಿ ಸಂಗ್ರಹಿಸಿರುವ ಕೋಲುಪದಕ್ಕೂ ಹಾಗೂ ಈ ಹಾಡಿಗೂ ತುಂಬಾ ಸಾಮ್ಯತೆಗಳು ಜೊತೆಗೆ ಸಮಾನಾಂಶಗಳು ಕಂಡುಬರುತ್ತವೆ. ಈ ಕೋಲುಪದದ ಆರಂಭದ ಸಾಲುಗಳು ನಾವೀನ್ಯತೆಯಿಂದ ಕೂಡಿದ್ದು, ಆಂಧ್ರ ಗಡಿ ಪರಿಸರದ ತೆಲುಗು ಹಾಡಿಗಿಂತ ಈ ಹಾಡಿನ ಆರಂಭದ ಸಾಲುಗಳು ವಿಶೇಷತೆಯಿಂದ ಕೂಡಿವೆ.

ಸಿಂತಮಾನ ಕೇಸಿಂಡಡೆ ಸಂದಮಾಮ ರಂಗ ಸಂದಮಾಮ
ಗಂಟಿ ಪಲುವು ಎಲ್ಲರೆ ಸಂದಮಾಮ

ತೆಲುಗು ನಾಡಿನ ಹಾಡಿಗೂ ಈ ಹಾಡಿಗೂ ಭಿನ್ನತೆ ತೋರಿಬರುವ ಆರಂಭದ ಸಾಲುಗಳಿವು. ಇವು ಕನ್ನಡ ನಾಡಿನ ಹಾಡಿನಲ್ಲಿ ಹೊಸದಾಗಿ ಸೇರಿಕೊಂಡು ಪ್ರಾದೇಶಿಕ ಭಿನ್ನತೆಯನ್ನು ಸೂಚಿಸುತ್ತವೆ. ಹಾಗೆಯೆ ತೆಲುಗು ಹಾಡಿನಲ್ಲಿ ಪ್ರಸ್ತಾಪಿಸಲಾದ ಪ್ರಾಣಿ-ಪಕ್ಷಿಗಳ ಚಿತ್ರಣವು ಈ ಗೀತೆಯಲ್ಲೂ ಕಾಣಸಿಗುತ್ತದೆ. ನಕ್ಕ(ನರಿ) ಗೆದ್ದ(ಹದ್ದು) ಇವುಗಳ ಜೊತೆಗೆ ತೆಲುಗು ಹಾಡಿನ ಕೋತಿಗೆ ಬದಲಾಗಿ ಕನ್ನಡ ನಾಡಿನ ತೆಲುಗು ಗೀತೆಯಲ್ಲಿ ಸಿಲುಕ(ಗಿಳಿ)ವನ್ನು ಹೊಸದಾಗಿ ಸೇರಿಸಿಕೊಂಡಿರುವುದನ್ನು ಕಾಣಬಹುದಾಗಿದೆ. ಪ್ರಾದೇಶಿಕ ದೃಷ್ಟಿಯಿಂದ ಈ ತೆರನಾದ ಭಿನ್ನತೆಗಳು ಕಂಡುಬರುತ್ತವೆ.

ಕನ್ನಡ ನಾಡಿನಲ್ಲಿ ಸಂಪಾದಿಸಿರುವ ತೆಲುಗು ಕೋಲುಪದ
ವದ್ದಿಮಾನು ಸೆರುವುಲಾನ ಗೆದ್ದ ವುಂಡಾದಿ ಗರುಡ ಗೆದ್ದ ವುಂಡಾದಿ
ಗೆದ್ದ ಎದಲಾನ 'ಬಾಳಮು' ಬುದ್ಧಿ ವುಂಡಾದೆ

ತೆಲುಗು ನಾಡಿನಲ್ಲಿ ಸಂಗ್ರಹಿಸಿದ ಇದೇ ಮಾದರಿಯ ಕೋಲುಪದದಲ್ಲಿ 'ಆಕು ಲೇಕ ಮಾನು ಮೀದ ಕಾಕಿ ಉನ್ನದೆ ಗುರುಡ ಕಾಕಿ ಉನ್ನದೆ' ಎಂದಿದೆ. ಆದರೆ ಚಳ್ಳಕೆರೆಯ ಗಡಿ ಪ್ರಾಂತ ಪರಿಸರದಲ್ಲಿ ಸಂಪಾದಿಸಿರುವ ಕೋಲುಪದವು 'ವದ್ದಿ' ಮಾನು ಸೆರುವುಲೋನ ಗೆದ್ದ ವುಂಡಾದೆ ಗುರುಡ ಗೆದ್ದ ವುಂಡಾದಿ ಎಂದಿದೆ. ಈ ಎರಡೂ ಹಾಡುಗಳಲ್ಲಿ ಕಿರು ವ್ಯತ್ಯಾಸಗಳಾಗಿರುವುದು ಕಂಡುಬರುತ್ತದೆ. ಈ ಎರಡೂ ಕೋಲುಪದಗಳು ಭಿನ್ನಪ್ರಾಂತಗಳಲ್ಲಿ ಭಿನ್ನ ಜನರಲ್ಲಿ ಹಾಗೂ ಭಿನ್ನ ಸಂಸ್ಕೃತಿಗಳಲ್ಲಿ ಸಂಗ್ರಹಿಸಿರುವುದರಿಂದ ಕೆಲವೊಂದು ಮಾರ್ಪಾಡುಗಳು, ಭಿನ್ನತೆಗಳು, ವ್ಯತ್ಯಾಸಗಳಾಗುವುದು ಸಹಜವಾದ ಪ್ರಕ್ರಿಯೆಯಾಗಿದೆ. ಈ ಎರಡು ಹಾಡುಗಳ ಭಿನ್ನತೆಗಳೆಂದರೆ, ತೆಲುಗು ನಾಡಿನ ಕೋಲುಪದದಲ್ಲಿ ಕಾಗೆಯ ಮುಖೇನ ದೃಷ್ಟಾಂತಿಕರಿಸಿದ್ದಾರೆ. ಹಾಗೆಯೇ ಗುರುಡ(ಗುರುವೆ) ಎಂದು ಪ್ರತಿ ಪದ್ಯ ಮುಗಿದಾಗ ಹೇಳುವಂತಹ ನುಡಿಯಾಗಿದೆ. ಆದರೆ ಕನ್ನಡ ನಾಡಿನಲ್ಲಿ ಸಂಪಾದಿಸಿರುವ ಕೋಲುಪದದಲ್ಲಿ ಕಾಗೆಯ ಬದಲಾಗಿ ಹದ್ದು(ಗೆದ್ದ) ಎಂಬ ಪಕ್ಷಿಯನ್ನು ಬಳಸಿಕೊಂಡಿರುವುದಿದೆ. ಹಾಗೆಯೇ ತೆಲುಗುವಿನ(ಗುರುಡ) ಗುರುವೆ ಬದಲಾಗಿ ಗರುಡ ಎಂದು ಪರಿವರ್ತನೆ ಮಾಡಿಕೊಂಡಿರುವುದು ಕಂಡುಬರುತ್ತದೆ. ಗರುಡ ಕೂಡ ಹದ್ದಿನ ಜಾತಿಗೆ ಸೇರಿದ ಪಕ್ಷಿ ಹಾಗೂ ಕನ್ನಡ ನಾಡಿನ ಈ ಕೋಲುಪದದಲ್ಲಿ ನುಡಿಬೆರಕೆ ಆಗಿರುವುದು ಕಂಡುಬಂದಿದೆ.

ಉದಾಹರಣೆಗೆ 'ಗೆದ್ದ ಎದಲಾನ ಬಾಳಮು ಬುದ್ದಿ ವುಂಡಾದೆ' ಎಂದು ಪ್ರಸ್ತಾಪ ಮಾಡಿರುವ ಈ ಸಾಲಿನಲ್ಲಿ 'ಬಾಳಮು' ಎನ್ನುವಂಥ ಪದ ಕನ್ನಡ-ತೆಲುಗು ಮಿಶ್ರಿತ ಪದವಾಗಿದೆ. ಕನ್ನಡದ 'ಬಹಳ' ಎನ್ನುವ ಪದ ದೀರ್ಘೀಕರಣಗೊಂಡು 'ಬಾಳ' ಎಂದಾಗಿದೆ. ಹಾಗೆಯೇ ಇದರ ಜೊತೆಗೆ ತೆಲುಗಿನ 'ಮ' ಕಾರವು ಸೇರಿ 'ಬಾಳಮು' ಎಂಬುದಾಗಿ ಸಮ್ಮಿಶ್ರಗೊಂಡಿರುವುದು ಕಾಣಸಿಗುತ್ತದೆ. ಗಡಿಪ್ರಾಂತ ಪರಿಸರದ ಕೋಲುಪದಗಳಾಗಿರುವುದರಿಂದ ಈ ರೀತಿಯ ನುಡಿಬೆರಕೆ ಆಗುವುದು ಸಹಜವಾದ ಪ್ರಕ್ರಿಯೆಯಾಗಿದೆ.

ಕನ್ನಡ ನಾಡಿನಲ್ಲಿ ಸಂಪಾದಿಸಿದ ಇದೇ ಕೋಲುಪದದಲ್ಲಿ ಮತ್ತೊಂದು ಪದ್ಯವನ್ನು ಅವಲೋಕಿಸಿದಾಗ ಎರಡೂ ಪ್ರಾಂತಗಳ ಹಾಡುಗಳಲ್ಲಿ ಸಮಾನವಾದ ಅಂಶಗಳನ್ನು ಒಳಗೊಂಡಿರುವುದು ಕಾಣಸಿಗುತ್ತದೆ.

ಕ್ಕಮಾನು ಸೆರುವುಲಾನ ನಕ್ಕ ವುಂಡಾದೆ ನಕ್ಕ ವುಂಡಾದೆ
ನಕ್ಕ ಪನಲಾನ ಪಗಲು ಸುಕ್ಕ ವುಂಡಾದೆ.

ಈ ಪದ್ಯದ ಸಾಹಿತ್ಯದಲ್ಲಿ ಪ್ರಾದೇಶಿಕ ಭಿನ್ನತೆ ತಲೆದೋರಿರುವುದು ಕಂಡುಬಂದಿದೆ. ತೆಲುಗು ನಾಡಿನಲ್ಲಿ ಸಂಗ್ರಹಿಸಿದ ಗೀತೆಯಲ್ಲಿ 'ನಕ್ಕ ನೆತ್ತಿಮೀದ ಬಗಲ ಸುಕ್ಕ ವುನ್ನದೆ' ಎಂದಿದೆ. ಆದರೆ ಕನ್ನಡ ನಾಡಿನ ಹಾಡಿನಲ್ಲಿ 'ನಕ್ಕ ಪನಲಾನ ಪಗಲು ಸುಕ್ಕ ವುಂಡಾದೆ' ಎಂದಾಗಿದೆ. ಈ ಗೀತೆಯಲ್ಲಿ ತೆಲುಗು ಗೀತೆಯ 'ನೆತ್ತಿಮೀದ' ಎನ್ನುವ ಪದಕ್ಕೆ ಬದಲಾಗಿ 'ಪನಲಾನ' ಎಂದಾಗಿದೆ. ಹೀಗೆ ಈ ಕೋಲುಪದದಲ್ಲಿ ಸೌಲಭ್ಯಕಾಂಕ್ಷೆಯ ದೃಷ್ಟಿಯಿಂದ ಪ್ರಾದೇಶಿಕ ಭಿನ್ನತೆಗಳಾಗಿವೆ. ಇದರ ಹೊರತಾಗಿ ಎರಡೂ ಹಾಡುಗಳಲ್ಲಿ ವಸ್ತುವಿಷಯ, ಹಾಡುವ ಧಾಟಿ, ಲಯ ಇವುಗಳಲ್ಲಿ ಏಕರೀತಿಯ ಅಂಶಗಳಿರುವುದನ್ನು ಕಾಣಬಹುದಾಗಿದೆ.

**೫.೨. ಕನ್ನಡ ಗಡಿನಾಡ ಕೋಲುಪದಗಳಲ್ಲಿರುವ ಸಮಾನಾಂಶಗಳು**

ಆಂಧ್ರ ಗಡಿ ಪರಿಸರಕ್ಕೆ ಹೊಂದಿಕೊಂಡಿರುವ ಕರ್ನಾಟಕದ ಗಡಿ ಪ್ರದೇಶಗಳಲ್ಲಿ ಮತ್ತು ಕರ್ನಾಟಕದ ಒಳಪ್ರದೇಶಗಳಲ್ಲಿ ಕೂಡ ಒಂದೇ ರೀತಿಯ ವಸ್ತುವೈವಿಧ್ಯತೆ ಮತ್ತು ಸಮಾನಾಂಶಗಳನ್ನು ಹೊಂದಿರುವ ಕೋಲುಪದಗಳು ಕಾಣಿಸಿಗುತ್ತವೆ. ಆಂಧ್ರ ಗಡಿ ಭಾಗಕ್ಕೆ ಹೊಂದಿಕೊಂಡಿರುವ ಕರ್ನಾಟಕದ ಪ್ರದೇಶಗಳಲ್ಲಿ ಮತ್ತು ಗಡಿಯೇತರ ಪ್ರದೇಶಗಳಲ್ಲಿಯೂ ತೆಲುಗು ಕೋಲುಪದಗಳು ಕಂಡುಬರುವುದು ವಿಶೇಷವೆನಿಸುತ್ತದೆ. ಕನ್ನಡದ ನಾಡೊಳಗೆ ತೆಲುಗು ಕೋಲುಪದಗಳು ಪ್ರಾದೇಶಿಕವಾಗಿ ಕೆಲವು ನಾಮಪದಗಳನ್ನು ಅಥವಾ ನಾಮವಿಶೇಷಣಗಳನ್ನು ಬದಲಾವಣೆ ಮಾಡಿಕೊಂಡು ಅಥವಾ ಸೌಲಭ್ಯಕಾಂಕ್ಷೆಯ ದೃಷ್ಟಿಯಿಂದ ಪರಿವರ್ತನೆ ಮಾಡಿಕೊಂಡು ಬರುವುದನ್ನು ಕಾಣಬಹುದಾಗಿದೆ. ಕರ್ನಾಟಕದ ಗಡಿ ಪ್ರಾಂತ ಪರಿಸರದಲ್ಲಿ ಕನ್ನಡ ನಾಡಿನ ಪ್ರಾಂತಗಳಲ್ಲಿ ತೆಲುಗು ಪದಗಳು ಸಿಗುತ್ತವೆ. ಆದರೆ ಪ್ರಾದೇಶಿಕ ಭಿನ್ನತೆಯಿಂದ ಕೂಡಿರುವುದು ಕಾಣಸಿಗುತ್ತದೆ.

ಕರ್ನಾಟಕದ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ಕಮಲಾಪುರದಲ್ಲಿ ತೆಲುಗು ಕೋಲುಪದವನ್ನು ಕ್ಷೇತ್ರಕಾರ್ಯದ ಮುಖೇನ ಸಂಗ್ರಹ ಮಾಡಿಕೊಳ್ಳಲಾಗಿದೆ ಹಾಗೂ ಕಮಲಾಪುರದಲ್ಲಿ

ಸಂಗ್ರಹಿಸಿದ ಕೋಲುಪದದ ಮಾದರಿಯಲ್ಲಿಯೇ ತುಮಕೂರು ಜಿಲ್ಲೆಯ ಮಧುಗಿರಿ ತಾಲೂಕಿನ ಹಳೇಹಟ್ಟಿ ಎಂಬ ಗ್ರಾಮದಲ್ಲಿ ಸಂಗ್ರಹಿಸಲಾಗಿದೆ. ಈ ಎರಡೂ ಕೋಲುಪದಗಳು ಒಂದೇ ರೀತಿಯ ಸಮಾನಾಂಶಗಳನ್ನು ಹೊಂದಿರುವುದಲ್ಲದೆ ಒಂದೇ ರೀತಿಯ ವಸ್ತು ವೈವಿಧ್ಯತೆಯನ್ನು ಪ್ರಾದೇಶಿಕ ಭಿನ್ನತೆಯೊಂದಿಗೆ ಹರಡಿಕೊಂಡಿರುವುದು ಕಾಣಸಿಗುತ್ತದೆ. ಹಾಗೆಯೇ ಈ ಎರಡೂ ಹಾಡುಗಳನ್ನು ಹಾಡುವ ಧಾಟಿ, ತಾಳ, ಲಯ ಇವುಗಳಲ್ಲೂ ಏಕರೂಪತೆಯನ್ನು ಒಳಗೊಂಡಿರುವುದು ಕಂಡುಬರುತ್ತದೆ.

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಕಮಲಾಪುರದಲ್ಲಿ ಸಂಗ್ರಹಿಸಿದ ತೆಲುಗು ಕೋಲುಪದ. ಈ ಕೋಲುಪದ ಹೊಸಪೇಟೆಯ ಸುತ್ತಮುತ್ತಲ ಪ್ರದೇಶಗಳಲ್ಲಿ ಇಂದಿಗೂ ಪ್ರಚಲಿತವಿರುವುದು ಕಾಣಸಿಗುತ್ತದೆ.

**ಕನ್ನಡ ನಾಡಿನಲ್ಲಿ ದೊರೆತ ತೆಲುಗು ಕೋಲುಪದ**

ಆದಿ ಹೊನ್ನೆ ಬೂದಿ ಬೆಳವಡು |೨|
ಗೂಡು ಸೂಸೆ ಗುಡ್ಡು ಪೆಟ್ಟಿ
ಸೆಳ್ಳಕೇರಿ ಲಂಜಿಕೊಡುಕ
ನೀಲ ಸೂಸೆ ಪೆಟ್ಟು ಪೆಟ್ಟೆ
ಕೋಲು ಕೋಲೆ ಕೋಲು ಕೋಲನ್ನ
ದುರುಗಾನು ಪಾಪ ದೂರಿ
ದೂರೋ ದೂರು ತಂದನ್ನ
ಸಿಲ್ಲಿವಾನ ಕೊನುವ ಕಿಂದ
ಗೊಲ್ಲವಾಡು ದೊಡ್ಡಿಪಟ್ಟೆ
ಕಲ್ಲಕೆದಿರಿ ಕ್ಯಾಕೆಲೇಸಿ ಓಡಿಪೋಯೆ
ಕೋಲು ಕೋಲೆ ಕೋಲು ಕೋಲನ್ನ
ದುರುಗಾನು ಪಾಪ ದೂರಿ
ದೂರೋ ದೂರು ತಂದನ್ನ

(ವಕ್ತೃ: ಮಾರಕ್ಕ, ಕಮಲಾಪುರ, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ)

ಹೊಸಪೇಟೆ, ಹಂಪಿ ಮತ್ತು ಕಮಲಾಪುರ ಪರಿಸರದಲ್ಲಿ ಹೆಚ್ಚಾಗಿ ಕನ್ನಡ-ಕೋಲಾಟ ಪದಗಳು ತುಂಬಾ ವಿಪುಲವಾಗಿ ಕಾಣಿಸಿಗುತ್ತವೆ. ಈ ಪ್ರದೇಶಗಳಲ್ಲಿ ಹೆಚ್ಚಾಗಿ ಬೇಡರು, ಮಾದಿಗರು ನೆಲೆಸಿರುವುದರಿಂದ ಕನ್ನಡ-ತೆಲುಗು ಎರಡೂ ಭಾಷೆಗಳನ್ನು ಸಮ ಪ್ರಮಾಣವಾಗಿ ಮಾತನಾಡುವುದು ಕಂಡುಬರುತ್ತದೆ. ಹಾಗೆಯೆ ಬೇಡರ ಮನೆಮಾತು ತೆಲುಗು. ಆದರೂ ಅವರು ಆಡುವ ಜನಪದ ಕಲೆಗಳಲ್ಲಿ ಮತ್ತು ಹಾಡುಗಳಲ್ಲಿ ತೆಲುಗನ್ನು ಬಳಸುವುದಿಲ್ಲ. ಕನ್ನಡ ಕೋಲುಪದಗಳನ್ನು ಮಾತ್ರ ಹಾಡುತ್ತಾರೆ. ಇಲ್ಲಿ ಬಳಸಿಕೊಂಡಿರುವ ತೆಲುಗು ಕೋಲುಪದ ಮಾತ್ರ ಸುಮಾರು ದಶಕಗಳ ಹಿಂದೆ ಉದ್ಯೋಗ ಅರಸಿ ವಲಸೆ ಬಂದ ಚಿತ್ರದುರ್ಗದ ಚಳ್ಳಕೆರೆ ಮತ್ತು ಮೊಳಕಾಲ್ಮೂರು ಜನಪದರನ್ನು ಅನುಸರಿಸಿ ಈ ತೆಲುಗು ಕೋಲುಪದವನ್ನು ಕಲಿತಿರುವುದಾಗಿ

ಈ ಹಾಡನ್ನು ಹಾಡಿದ ಕಲಾವಿದರಾದ ಗುರುವಯ್ಯ, ಕಾಳಮ್ಮ, ಯಂಕಮ್ಮ, ಮಾರಮ್ಮ ಅವರು ಹೇಳಿರುವುದಿದೆ. ಕಮಲಾಪುರದಲ್ಲಿ ನೆಲೆಸಿರುವ ಮಾದಿಗರು ಮತ್ತು ಬೇಡರು ತೆಲುಗು ಮಾತನಾಡುತ್ತಾರೆ. ಆದರೆ ತೆಲುಗು ಕೋಲುಪದಗಳನ್ನು ರಚಿಸಿ ಆ ಪದಗಳಿಗೆ ಕೋಲಾಟವಾಡುವುದು ಕಂಡುಬರುವುದಿಲ್ಲ. ಈ ಪರಿಸರದ ಜನರ ಭಾಷೆಯಲ್ಲಿ ಕನ್ನಡ ಮಾತನಾಡುವಾಗ ತೆಲುಗು ನುಡಿಗಳನ್ನು, ತೆಲುಗು ಮಾತನಾಡುವಾಗ ಕನ್ನಡ ನುಡಿಗಳನ್ನು ಸೇರಿಸಿ ಮಾತನಾಡುವುದು ಕಂಡುಬರುತ್ತದೆ. ಆದರೆ ಇವರು ಹಾಡುವ ಕೋಲುಪದಗಳಲ್ಲಿ ಕನ್ನಡ ಕೋಲುಪದಗಳನ್ನು ಮಾತ್ರ ಹಾಡುವುದು ಮತ್ತು ಆ ಹಾಡುಗಳಿಗೆ ಪ್ರದರ್ಶನ ಮಾಡುವುದು ಕಂಡುಬಂದಿದೆ.

ಈ ಪ್ರಾಂತಗಳ ಜನರು ಮಾತನಾಡುವಾಗ ಕನ್ನಡದಲ್ಲಿ ತೆಲುಗು ನುಡಿಗಳು ತೆಲುಗಿನಲ್ಲಿ ಕನ್ನಡದ ಪದಗಳು ನುಸುಳುವುದನ್ನು ಕಾಣಬಹುದು. ತೆಲುಗು ಮಾತನಾಡುವಾಗ ಕನ್ನಡ ಪದಗಳು ಮಿಶ್ರಣವಾಗುವುದಕ್ಕೆ ಉದಾಹರಣೆ.

**ಗಡಿ ಪರಿಸರದ ತೆಲುಗು:-** ಹೇ ತಮ್ಮಾ ಊಟಂ ಆಯ್ನೇರಾ?

**ಶಿಷ್ಟ ತೆಲುಗು:-** ಹೇ ತಮ್ಮುಡು ಭೋಜನಂ ಆಯ್ನೇರಾ?

ಹಂಪಿ ಪರಿಸರದಲ್ಲಿ ತೆಲುಗು ಮಾತನಾಡುವಾಗ ಕನ್ನಡದ ನುಡಿಗಳು ಬೆರಕೆಯಾಗಿರುವುದಕ್ಕೆ ಉದಾಹರಣೆಯಾಗಿದ್ದು, ಮೇಲಿನ ವಾಕ್ಯವು ತೆಲುಗಿನಿಂದ ಕೂಡಿದೆ ಎಂದೆನಿಸಿದರೂ ಕನ್ನಡದ ಪದಗಳಾದ 'ತಮ್ಮಾ' ಮತ್ತು 'ಊಟ' ಎನ್ನುವ ನುಡಿಗಳು ತೆಲುಗು ಸಂವಹನ ಮಾಡುವ ಕಾಲಕ್ಕೆ ನುಡಿಬೆರಕೆಯಾಗಿರುವುದು ಕಂಡುಬರುತ್ತದೆ. ಹಾಗೆಯೇ ಕನ್ನಡದ 'ಊಟ' ಎನ್ನುವ ಪದಕ್ಕೆ ತೆಲುಗಿನ 'ಮ್' ಎನ್ನುವ ವ್ಯಂಜನಾಂತ್ಯಾಕ್ಷರವು ಸೇರಿ ಹೋಗಿ ತೆಲುಗಿನ ಪದ ಎಂಬುದು ತೋರಿಬರುತ್ತದೆ.

ಕನ್ನಡ ಮಾತನಾಡುವಾಗ ತೆಲುಗು ನುಡಿಗಳು ಕನ್ನಡದೊಳಗೆ ಸೇರಿ ನುಡಿನುಸುಳುವಿಕೆ ಯಾಗಿರುವುದಕ್ಕೆ ಉದಾಹರಣೆ.

**ತೆಲುಗು ಮಿಶ್ರಿತ ಕನ್ನಡ:-** ಏಮಿ ಓಬಕ್ಕ ಇವತ್ತು ಏಮಿ ಅಡಿಗೆ ಮಾಡಿದಿರ

**ಶಿಷ್ಟ ಕನ್ನಡ :-** ಏನು ಒಬಕ್ಕ ಇವತ್ತು ಏನು ಅಡಿಗೆ ಮಾಡಿದ್ದೀರ

ಈ ಭಾಗದ ಜನರು ಕನ್ನಡ ಮಾತನಾಡುವಾಗ ಕನ್ನಡದ ನುಡಿಗಳ ಜೊತೆಗೆ ತೆಲುಗಿನ ನುಡಿಗಳು ಸೇರಿ ಹೋಗಿರುವುದು ಕಾಣಸಿಗುತ್ತದೆ. ಇಲ್ಲಿನ ಕನ್ನಡದಲ್ಲಿ 'ಏಮಿ'(ಏನು) ಎನ್ನುವಂಥ ತೆಲುಗು ಪದ ನುಡಿಬೆರಕೆಯಾಗಿರುವುದು ಕಂಡುಬರುತ್ತದೆ. ಹೀಗೆ ಈ ಪ್ರದೇಶಗಳ ಜನರ ಆಡುನುಡಿಗಳಲ್ಲಿ ಕನ್ನಡದ ಜೊತೆ ತೆಲುಗು ಮತ್ತು ತೆಲುಗಿನ ಜೊತೆ ಕನ್ನಡವನ್ನು ಸೇರಿಸಿ ಮಾತನಾಡುವುದಿದೆ. ಆದರೆ ಕನ್ನಡದ ಕೋಲುಪದಗಳಲ್ಲಿ ತೆಲುಗು ನುಡಿಗಳನ್ನು, ತೆಲುಗು ಕೋಲುಪದಗಳಲ್ಲಿ ಕನ್ನಡದ ನುಡಿಗಳನ್ನು ಅಥವಾ ಎರಡೂ ಭಾಷೆಯ ಹಾಡುಗಳನ್ನು ಬೆರಕೆ ಮಾಡಿ ಹಾಡುವುದು ಈ ಭಾಗದ ಕೋಲುಪದಗಳಲ್ಲಿ ಕಾಣಸಿಗುವುದಿಲ್ಲ. ಹಾಗೆಯೇ ಹಾಡುಗಳನ್ನು ಹಾಡುವಂಥ ಸಂದರ್ಭದಲ್ಲಿ ಮಿಶ್ರಮಾಡಿ ಹಾಡುವುದಂತೂ ಕಂಡು ಬರುವುದಿಲ್ಲ.

ಕಮಲಾಪುರದ ಮಹಿಳಾ ಕೋಲು ಕಲಾವಿದರು ಹಾಡಿದ ಈ ಕೋಲುಪದದಲ್ಲಿ ಚಿತ್ರದುರ್ಗದ ಜನರನ್ನು ಅಥವಾ ಚಳ್ಳಕೆರೆ ಭಾಗದ ಗೊಲ್ಲರನ್ನು ಅಥವಾ ಬೇರೆ ಸಮುದಾಯಗಳಿಗೆ ಸೇರಿದವರನ್ನೋ ಹೀನಾಮಾನವಾಗಿ ಕೆಟ್ಟ ನುಡಿಗಳಿಂದ ಬೈದಿರುವುದು ಈ ಕೋಲುಪದದಲ್ಲಿ ಕಾಣಸಿಗುತ್ತದೆ.

'ಕೋಲು ಕೋಲೆ ಕೋಲು ಕೋಲನ್ನ
ದುರುಗಾನು ಪಾಪ ದೂರೊ
ದೂರಿ ತಾನಿ ತಂದನ್ನ'

ಎಂದು ಆರಂಭವಾಗುವ ಈ ಗೀತೆಯಲ್ಲಿ ದುರ್ಗದ ಜನತೆಯನ್ನು ಅಥವಾ ಚಿತ್ರದುರ್ಗದ ಚಳ್ಳಕೆರೆಯ ಜನರನ್ನು ವಿಡಂಬನಾತ್ಮಕವಾಗಿ ಬೈದಿರುವುದನ್ನು ಕಾಣಬಹುದು. ಈ ಕೋಲುಪದ ಕಮಲಾಪುರ ಅಥವಾ ಹಂಪಿ ಪರಿಸರಕ್ಕೆ ವಲಸೆ ಬಂದಿದ್ದರು ಎನ್ನಲಾದ ಚಳ್ಳಕೆರೆ, ನಾಯಕನಹಟ್ಟಿ ಮತ್ತು ತಳಕು ಭಾಗದ ಜನಪದರಿಂದ ಈ ಹಾಡು ಇಲ್ಲಿ ನೆಲೆಯೂರಿರಬಹುದು. ಚಳ್ಳಕೆರೆ ಭಾಗದ ಜನರು ಸುಮಾರು ೧೯೫೦-೬೦ರ ಸುಮಾರಿನಲ್ಲಿ ಹಂಪಿ ಅಥವಾ ಕಮಲಾಪುರಕ್ಕೆ ವಲಸೆ ಬಂದಿದ್ದರು ಎಂಬುದು ಕಮಲಾಪುರದ ಕೋಲು ಕಲಾವಿದರ ಅಭಿಮತವಾಗಿದೆ. "ವಲಸೆ ಬಂದಂಥ ಚಳ್ಳಕೆರೆ ಪರಿಸರದ ಜನಪದರಿಂದ ಈ ತೆಲುಗು ಕೋಲುಪದ ಕಲಿತೆವು" ಎಂದು ಕಲಾವಿದ ಮತ್ತು ಕೋಲುಮೇಳಗಾರ, ಪೂಜಾರ್ ಗುರುವಯ್ಯ ಅವರು ಅಭಿಪ್ರಾಯಿಸುತ್ತಾರೆ.

ಈ ಕೋಲುಪದದಲ್ಲಿ 'ಸೆಳ್ಳಕೇರಿ ಲಂಜಿ ಕೊಡುಕ, ನೀಲ ಸೂಸೆ ಪೆಟ್ಟು ಪೆಟ್ಟೆ ಎಂದಿದೆ. ಇದರರ್ಥ 'ಚಳ್ಳಕೆರೆಯ ಸೂಳೆಮಗ ಸಮಯ ನೋಡಿ ಸರಿಯಾದ ಪೆಟ್ಟು ನೀಡಿದ' ಎಂಬುದು ಕನ್ನಡದ ಅರ್ಥವಾಗಿದೆ. ಹಾಗೆಯೇ 'ಸಿಲ್ಲಿವಾನ ಕೊನುವಕಿಂದ ಗೊಲ್ಲವಾಡು ದೊಡ್ಡಿಪಟ್ಟೆ' ಎಂಬುದಿದೆ. ಅಂದರೆ ಗೊಲ್ಲರವನು ಹಟ್ಟಿ ಅಥವಾ ಊರು ಸೇರಿದ ಎಂಬುದು ತಿಳಿದುಬರುತ್ತದೆ. ಈ ಹಾಡಿನಲ್ಲಿರುವ ವಿಚಾರಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಚಳ್ಳಕೆರೆ ಮತ್ತು ಮೊಳಕಾಲ್ಮೂರು ಭಾಗದಲ್ಲಿ ಗೊಲ್ಲರು ಹಾಗೂ ಬೇಡರು ಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿರುವುದು ಕಂಡುಬರುತ್ತದೆ. ಇಲ್ಲಿ ಚಳ್ಳಕೆರೆಯ ಗೊಲ್ಲರನ್ನು(ಲಂಜಿ ಕೊಡುಕ) ಸೂಳೆಮಗ ಎಂದು ಬೈದಿರುವುದನ್ನು ಗಮನಿಸಿದರೆ ಚಳ್ಳಕೆರೆಯ ಗೊಲ್ಲರು ಅಥವಾ ಇತರೆ ಸಮುದಾಯದವರು ವಲಸಿಗರಾಗಿ ಹಂಪಿ ಪರಿಸರದ ಕಮಲಾಪುರಕ್ಕೆ ಬಂದು ಯಾವುದೋ ಕಷ್ಟ-ಕಾರ್ಪಣ್ಯಗಳಿಗೆ ಸಿಲುಕಿದಂತೆ ಕಂಡುಬರುತ್ತದೆ. ಅದು ಯಾವಾಗ? ಹೇಗೆ? ಎಂಬುದು ಮಾತ್ರ ತಿಳಿಯದೆ ಉಳಿದಿದೆ. ಈ ವಿಷಯ ಕುರಿತಾಗಿ ಜನಪದರು ಸುಮಾರು ದಶಕಗಳ ಹಿಂದೆಯೆ ತಿಳಿಸಿರುವುದನ್ನು ಗಮನಿಸಿದರೆ ಪ್ರತಿಯೊಂದು ಕೋಲುಪದದ ಹಿಂದೆ ಒಂದೊಂದು ರೀತಿಯ ಸತ್ಯ ಸಂಗತಿಗಳು ನಡೆದಿರುವಂತೆ ಭಾಸವಾಗುತ್ತದೆ.

ಹಂಪಿ ಪರಿಸರದ ಕಮಲಾಪುರದಲ್ಲಿ ಸಂಗ್ರಹಿಸಿದ ಕೋಲುಪದದ ಮಾದರಿಯ ವಸ್ತು ವೈವಿಧ್ಯತೆ ಮತ್ತು ಸಮಾನಾಂಶಗಳು ಹೊಂದಿರುವ ಕೋಲುಪದವೊಂದು ಕೆಲವು ಮಾರ್ಪಾಡುಗಳನ್ನು

ಮಾಡಿಕೊಂಡು ಬಂದಿರುವುದನ್ನು ಕಾಣಬಹುದಾಗಿದೆ. ಈ ಹಾಡು ತುಮಕೂರು ಜಿಲ್ಲೆಯ ಮಧುಗಿರಿ ತಾಲೂಕಿನ ಹಳೇಹಟ್ಟಿಯಲ್ಲಿ ಸಂಗ್ರಹಿಸಲಾಗಿದೆ ಹಾಗೂ ತುಮಕೂರಿನ ಹಳೇಹಟ್ಟಿಯಲ್ಲಿ ಸಂಗ್ರಹಿಸಿದ ಕೋಲುಪದವನ್ನು ಕಮಲಾಪುರದ ಜನಪದರು ಮಾರ್ಪಾಡು ಮಾಡಿಕೊಂಡು ಹಾಡಿರಬಹುದು ಎಂಬುದನ್ನು ಅರಿಯಬೇಕಾಗಿದೆ.

ಕಮಲಾಪುರದಲ್ಲಿ ಸಂಗ್ರಹಿಸಿದ ತೆಲುಗು ಕೋಲುಪದಕ್ಕೂ ತುಮಕೂರಿನ ಹಳೇಹಟ್ಟಿಯಲ್ಲಿ ಸಂಗ್ರಹಿಸಿದ ಕೋಲುಪದಕ್ಕೂ ಪ್ರಾದೇಶಿಕ ಭಿನ್ನತೆಗಳೊಂದು ಹೊರತುಪಡಿಸಿ, ಹಾಡುವ ಧಾಟಿ, ಲಯ ಇವುಗಳಲ್ಲಿ ಅಭಿನ್ನತೆಯನ್ನು ಕಾಣಬಹುದು. ಹಾಗೆಯೇ ವಸ್ತುವಿಷಯದಲ್ಲಿ ಕೆಲವು ಮಾರ್ಪಾಡು ಮಾಡಿಕೊಂಡು ಪ್ರಾದೇಶಿಕ ಭಿನ್ನತೆಯನ್ನು ಕಾಣಬಹುದಾಗಿದೆ. ಉಳಿದಂತೆ ಈ ಎರಡೂ ತೆಲುಗು ಕೋಲುಪದಗಳಲ್ಲಿ ಸಾಮ್ಯತೆಗಳು ಕಾಣಸಿಗುತ್ತವೆ.

**ತುಮಕೂರಿನ ಮಧುಗಿರಿ ತಾಲೂಕಿನ ಹಳೇಹಟ್ಟಿಯಲ್ಲಿ ಸಂಗ್ರಹಿಸಿದ ತೆಲುಗು ಕೋಲುಪದ**

ದೂರಿ ದೂರಿ ತಾನಿ ತಂದನ್ನ ಬಂಗಾರಿ
ಪಾಪ ದೂರಿ ದೂರಿ ತಾನಿ ತಂದನ್ನ
ದೂರು ಪೆಯ್ಯಿ ದುರ್ಗಾಮು ಸೇರೆ
ಪೇರು ಪೆಯ್ಯಿ ಪೆನುಗೊಂಡ ಸೇರೆ
ಚಿನ್ನದಾನಿ ಮಾಟ ಪೆಯ್ಯಿ ಸಿಡದರಗಲ್ಲು ಸಾವಡೆಕ್ಕೆ
ದೂರಿ ದೂರಿ ತಾನಿ ತಂದನ್ನ |ಪ|

ಚಳ್ಳಕೇರಿ ಲಂಜಪಿಲ್ಲ ನನ್ನು
ಚೂಸಿ ಕೊಪ್ಪು ಕಟ್ಟೆ |ದೂರಿ|
ದೂರು ಸೂಡಿ ದುಃಖ ಸೂಡಿ
ದುನ್ನೆ ಉದ್ದುಲ ಗೋಳು ಸೂಡಿ
ತೆಲ್ಲವಾರಿ ಜಾಮುಲೋನ ಕನ್ನೆ
ಪಡುಸುಲ ಗೋಳು ಸೂಡಿ |ದೂರಿ|
ದೂರಿ ಸೂಡಿನ್ನಡಿಗಿನಾಡು, ದೂರು ಸೂಸಿ
ನಕ್ಕಿನಾಡು ಕನ್ನಿಪಡುಸ ಸಿನ್ನುದಾನ
ಕೊಪ್ಪ ಮೀದ ಎಕ್ಕಿನೊರಿಕಿ ಒಕ್ಕನಾಡು
ದೂರಿ ದೂರಿ ತಾನಿ ತಂದನ್ನ ಬಂಗಾರಿ
ಪಾಪ ದೂರಿ ದೂರಿ ತಾನಿ ತಂದನ್ನ
(ವಕ್ತೃ: ನರಸೇಗೌಡ, ಹನುಮಂತಪುರ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ)

ತುಮಕೂರಿನ ಹಳೇಹಟ್ಟಿಯಲ್ಲಿ ಸಂಗ್ರಹಿಸಿದ ತೆಲುಗು ಕೋಲುಪದ ಮತ್ತು ಕಮಲಾಪುರದಲ್ಲಿ ಸಂಗ್ರಹಿಸಿದ ತೆಲುಗು ಕೋಲುಪದಗಳೆರಡೂ ಒಂದೇ ರೀತಿಯ ಸಮಾನಾಂಶಗಳನ್ನು ಒಳಗೊಂಡಿವೆ.

ಆದರೆ ತುಮಕೂರಿನಲ್ಲಿ ಸಂಗ್ರಹಿಸಿದ ಕೋಲುಪದದಲ್ಲಿ ಒಬ್ಬ ಹೆಣ್ಣಿನ ಅಥವಾ ಹುಡುಗಿಯ ವಿಚಾರವಾಗಿ ದೂರುಗಳನ್ನು ನೀಡಿರುವುದರ ಕುರಿತಾಗಿ ಈ ಕೋಲುಪದ ಗಮನಸೆಳೆಯುತ್ತದೆ. ದೂರುಗಳನ್ನು ದೂರುತ್ತಾ ಇರುವವರು ದುರ್ಗ ಸೇರಿದರು. ದೂರುಗಳನ್ನು ನೀಡುತ್ತಾ ದೂರುಗಳಿಗೆ ಹೆಸರುವಾಸಿಯಾದವರು ಪೆನುಗೊಂಡ ಸೇರಿದರು. ಇದೆಲ್ಲವನ್ನು ನಡೆಸಿದಂಥ ಹುಡುಗಿ ಸಿಡದರಗಲ್ಲು ಚಾವಡಿ ಸೇರಿದವಳು ಎಂಬುದನ್ನು ತಿಳಿಸುತ್ತದೆ. ಹಾಗೆಯೇ ಈ ಹಾಡಿನಲ್ಲಿ 'ಚಳ್ಳಕೆರೆ ಲಂಜಪಿಲ್ಲ'(ಚಳ್ಳಕೆರೆಯ ಸೂಳೆ) ಎಂದು ಹೀನಮಾನವಾಗಿ, ಹೀಯಾಳಿಸಿರುವುದನ್ನು ಗಮನಿಸಬಹುದಾಗಿದೆ. ಹಾಗೆಯೇ ಹುಡುಗಿಯರ ಅಥವಾ ಮಹಿಳೆಯರ ಕಷ್ಟ-ಕಾರ್ಪಣ್ಯಗಳ ಕುರಿತಾಗಿ ತಿಳಿಸುತ್ತದೆ. ಹುಡುಗಿಯರು ಅಥವಾ ಸ್ತ್ರೀಯರು ಬೆಳಗಿನ ಜಾವ ಮುಂಜಾನೆಯೆ ಎದ್ದು ಕಸ, ಮುಸುರೆ, ಪಾತ್ರೆ-ಪಗಡ, ನೀರು ಸೇದುವುದು, ಅಡಿಗೆ ಮಾಡುವುದು, ಪೂಜೆ-ಪುನಸ್ಕಾರ ಇತ್ಯಾದಿಯಾಗಿ ಹದಿಹರೆಯದ ಹುಡುಗಿಯರಿಗೆ-ಹೆಂಗಸರಿಗೆ ಈ ತರಹದ ಹಲವು ತೆರನಾದ ಸಂಕಷ್ಟಗಳು ಎದುರಾಗುತ್ತವೆ ಎಂಬುದನ್ನು ಈ ಕೋಲುಪದ ಮಾರ್ಮಿಕವಾಗಿ ತಿಳಿಸುತ್ತದೆ.

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ಕಮಲಾಪುರದಲ್ಲಿ ಸಂಗ್ರಹಿಸಿದ 'ಆದಿ ಹೊನ್ನೆ ಬೂದಿ ಬೆಳವಡು' ಎನ್ನುವ ಕೋಲುಪದ ಹಾಗೂ ತುಮಕೂರಿನ ಮಧುಗಿರಿಯ ಹಳೇಹಟ್ಟಿಯಲ್ಲಿ ಸಂಗ್ರಹಿಸಲಾದ 'ದೂರಿ ದೂರಿ ತಾನಿ ತಂದನ್ನ, ಬಂಗಾರಿ ಪಾಪ ದೂರಿ ನಾರಿ ತಾನಿ ತಂದನ್ನ' ಎನ್ನುವಂಥ ಈ ಎರಡೂ ತೆಲುಗು ಕೋಲುಪದಗಳು ಒಂದೇ ರೀತಿಯ ಸಮಾನಾಂಶಗಳು ಒಳಗೊಂಡಿರುವುದನ್ನು ಈಗಾಗಲೇ ಗಮನಿಸಲಾಗಿದೆ. ತುಮಕೂರಿನ ಮಧುಗಿರಿಯಲ್ಲಿ ಸಂಗ್ರಹಿಸಿದ ತೆಲುಗು ಕೋಲುಪದ ಆಂಧ್ರ ಗಡಿಪ್ರಾಂತಗಳಿಂದ ನೇರ ಪ್ರಭಾವ ಬೀರಿರುವುದು ಕಾಣಸಿಗುತ್ತದೆ. ಸಿಡದರಗಲ್ಲು, ಪೆನುಗೊಂಡ, ಚಳ್ಳಕೆರೆ, ಸ್ಥಳನಾಮಗಳ ಕುರಿತಾಗಿ ಪ್ರಸ್ತಾಪಿಸಿರುವುದರಿಂದ ಈ ಸ್ಥಳಗಳು ಆಂಧ್ರ ಮತ್ತು ಕರ್ನಾಟಕ ಗಡಿ ಭಾಗದಲ್ಲಿ ಚಾಚಿಕೊಂಡಿವೆ. ಹಾಗಾಗಿ ಮಧುಗಿರಿಯಲ್ಲಿ ಸಂಗ್ರಹಿಸಿರುವ ಕೋಲುಪದ ಆಂಧ್ರ ಗಡಿ ಪರಿಸರದಿಂದ ಪ್ರಭಾವಿಸಲ್ಪಟ್ಟಿದೆ. ಆದರೆ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ಕಮಲಾಪುರದಲ್ಲಿ ಸಂಗ್ರಹಿಸಿದ ತೆಲುಗು ಕೋಲುಪದ ಗಡಿ ಪ್ರಾಂತಗಳಿಂದ ದೂರವಿದೆ. ಚಿತ್ರದುರ್ಗದ ಚಳ್ಳಕೆರೆ, ಮೊಳಕಾಲ್ಮೂರು ಭಾಗಗಳಿಂದ ವಲಸಿಗರಾಗಿ ಹಂಪಿ, ಕಮಲಾಪುರಕ್ಕೆ ಧಾವಿಸಿದ ಚಿತ್ರದುರ್ಗದ ಭಾಗದ ಜನಪದರಿಂದ ಈ ಕೋಲುಪದವನ್ನು ಕಲಿತು ರೂಢಿಸಿಕೊಂಡು ಬಂದಿರಬಹುದು ಎಂದು ಊಹಿಸಬಹುದಾಗಿದೆ. ಈ ಎರಡೂ ಹಾಡುಗಳನ್ನು ಹಾಡುವ ಧಾಟಿ, ಲಯ, ಒಂದೇ ಆಗಿದ್ದು, ಕೋಲಾಟ ಪ್ರದರ್ಶನ ಮಾಡುವ ಕಾಲಕ್ಕೆ ತಾಳಗಡ್ಡಿ ಅಥವಾ ಒಂಟಿ ಕಡ್ಡಿ ಪ್ರಕಾರಕ್ಕೆ ಈ ಗೀತೆಯನ್ನು ಹಾಡುವುದು ಕಾಣಸಿಗುತ್ತದೆ. ಹಾಗೆಯೆ ಎರಡೂ ಭಿನ್ನ ಪ್ರಾಂತಗಳಲ್ಲಿ ಇದೇ ಮಾದರಿಯ ಪ್ರಕಾರಕ್ಕೆ ಕೋಲಾಟ ಪ್ರದರ್ಶನ ಮಾಡುವುದು ಕಂಡುಬರುತ್ತದೆ.

ಹೀಗೆ ಗಡಿನಾಡ ಪ್ರಾಂತಗಳ ಕನ್ನಡ-ತೆಲುಗು ಕೋಲುಪದಗಳನ್ನು ಹೊರತುಪಡಿಸಿ ಕರ್ನಾಟಕದ ಒಳಗೂ ತೆಲುಗು - ತೆಲುಗು ಪದಗಳಲ್ಲೂ ಮತ್ತು ಕನ್ನಡ ಪದಗಳಲ್ಲೂ ಸಾಮ್ಯತೆಗಳು, ಸಮಾನಾಂಶಗಳು ಹಾಗೂ ಅಭಿನ್ನತೆಗಳ ಜೊತೆಗೆ ಭಿನ್ನತೆಗಳು ಕೂಡ ಕಂಡು ಬರುತ್ತವೆ. ಕರ್ನಾಟಕ - ಆಂಧ್ರ ಗಡಿ ಪರಿಸರದಲ್ಲಿ ದ್ವಿಭಾಷಿಕ ಹಿನ್ನೆಲೆಯನ್ನು ಹೊಂದಿರುವ ಕೋಲುಪದಗಳು ಕಾಣಸಿಗುವುದು ಸಹಜ ಪ್ರಕ್ರಿಯೆಯಾಗಿದೆ. ಹಾಗೆಯೇ ಕನ್ನಡ ನಾಡಿನಲ್ಲಿ ತೆಲುಗು ಗೀತೆಗಳು ಸಿಗುತ್ತವೆ ಹಾಗೂ ಈ ಹಾಡುಗಳಲ್ಲಿ ಕನ್ನಡ ನುಡಿಗಳು ಬೆರಕೆ ಆಗಿರುವುದು ಕಂಡುಬರುತ್ತದೆ.

**೫.೩. ಗಡಿನಾಡ ಕೋಲುಪದಗಳ ಸಾಮ್ಯತೆಗಳು**

ಕನ್ನಡ-ತೆಲುಗು ಕೋಲಾಟ ಪದಗಳು ಕರ್ನಾಟಕ - ಆಂಧ್ರ ಗಡಿ ಪ್ರಾಂತ ಪರಿಸರದಲ್ಲಿ ಸಹಜವಾಗಿ ಕಂಡುಬರುತ್ತವೆ. ದ್ವಿಭಾಷಿಕತೆ ಅಥವಾ ಪ್ರತ್ಯೇಕ ಇಲ್ಲವೆ ಮಿಶ್ರ ಭಾಷೆ ಕೋಲುಪದಗಳು ಕಾಣಸಿಗುತ್ತವೆ. ಕನ್ನಡ-ತೆಲುಗು ಭಾಷೆಯ ಪ್ರತ್ಯೇಕ ಹಾಡುಗಳು ಸಿಕ್ಕರೂ ಕನ್ನಡದಲ್ಲಿ ತೆಲುಗು, ತೆಲುಗಿನಲ್ಲಿ ಕನ್ನಡದ ನುಡಿಗಳು ಬೆರಕೆ ಆಗಿರುವುದನ್ನು ಕಾಣಬಹುದಾಗಿದೆ ಹಾಗೂ ಇದೇ ಮಾದರಿಯ ಕೋಲಾಟ ಪದಗಳು ಕರ್ನಾಟಕದಲ್ಲಿಯೇ ಆಂಧ್ರಪ್ರದೇಶದ ಗಡಿ ಭಾಗಗಳಿಗೆ ಹೊಂದಿಕೊಂಡಿರುವ ಪ್ರಾಂತಗಳಲ್ಲಿ ದೊರಕುತ್ತವೆ. ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನ ಬೋಸೇದೇವರಹಟ್ಟಿ, ನೆಲಗೇತನಹಟ್ಟಿ, ರಾಮದುರ್ಗ, ಚನ್ನಬಸಯ್ಯನಹಟ್ಟಿಯಲ್ಲಿ ಸಂಗ್ರಹಿಸಿದ ತೆಲುಗು ಕೋಲುಪದ ಮತ್ತು ತುಮಕೂರು ಜಿಲ್ಲೆಯ ಮಧುಗಿರಿ ತಾಲ್ಲೂಕಿನ ಹಳೇಹಟ್ಟಿಯಲ್ಲಿ ಸಂಗ್ರಹಿಸಿದ ತೆಲುಗು ಕೋಲುಪದ ಒಂದೇ ಮಾದರಿಯ ಅಥವಾ ಸಮಾನಾಂಶಗಳನ್ನು ಹೊಂದಿರುವ ಹಾಗೂ ಕೆಲವು ಭಿನ್ನತೆಗಳನ್ನು ಒಳಗೊಂಡಂತೆ, ಒಂದೇ ರೀತಿಯ ಧಾಟಿ, ಲಯ ಹೊಂದಿರುವ ಕೋಲುಪದವನ್ನು ಗಮನಿಸಬಹುದು. ಮಧುಗಿರಿಯ ಹಳೇಹಟ್ಟಿಯಲ್ಲಿ ಸಂಗ್ರಹಿಸಿದ ಕೋಲುಪದವನ್ನು ಭಾಷಿಕವಾಗಿ ಗಮನಿಸಿದಾಗ, ತೆಲುಗು ಕೋಲುಪದದಲ್ಲಿ ಕನ್ನಡದ ಪದಗಳು ಬೆರಕೆ ಆಗಿರುವುದು ಕಾಣಸಿಗುವುದಿಲ್ಲ. ಆದರೆ ಚಳ್ಳಕೆರೆಯ ಭಾಗದ ಹಟ್ಟಿ ಪರಿಸರದಲ್ಲಿ ಸಂಗ್ರಹಿಸಿರುವ ತೆಲುಗು ಕೋಲುಪದದಲ್ಲಿ ಕನ್ನಡದ ನುಡಿಯೊಂದು ಸೇರಿ ಹೋಗಿ ನುಡಿಬೆರಕೆಯಾಗಿರುವುದು ಕಾಣಸಿಗುತ್ತದೆ.

**ಮಧುಗಿರಿಯಲ್ಲಿ ಸಂಗ್ರಹಿತ ತೆಲುಗು ಕೋಲುಪದ**

ಎಕ್ಕಾಡ ವೇಸೀಮ ವೆರಿಕಾಲು
ಸಾನಿ ವೆರಿಕಾಲು ಸಾನಿ
ಕೋಡೂರು ದಿನ್ನಿಲೊ ನೂಟುಕ್ಕು
ಗುಡಿಸಾ ಕೋಟೊಕ್ಕು ಗುಡಿಸಾ |ಪ|
ನೂಟೊಕ್ಕು ಗುಡಿಸಿಕಿ ನೂವೊಕ್ಕು
ಪೆದ್ದ ನೇನೊಕ್ಕ ಪೆದ್ದ
ಬಿಜ್ಜಾರಿ ಮಾಟ್ಲಾಕು ಬಿಡ್ಡೊಕು

ಸಂಕಾ ಪಾಪೊಕ್ಕು ಸಂಕಾ

(ವಕ್ತೃ: ಪಾತಲಿಂಗಪ್ಪ, ಹಳೇಹಟ್ಟಿ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ)

ಈ ಕೋಲುಪದದಲ್ಲಿ ಒಬ್ಬ ಹೆಂಗಸಿಗೆ ಸಂಬಂಧಿಸಿ ಹಾಗೂ ಅವಳ ನಡೆ-ನುಡಿಗೆ ಸಂಬಂಧಿಸಿದಂತೆ ತರ್ಕಿಸಿರುವುದಿದೆ. ಈ ಗೀತೆಯಲ್ಲಿ ಹೆಂಗಸು ಯಾವುದೋ ಹೊಸ ಊರಿಗೆ ಹೋದಾಗ ಅಪರಿಚಿತ ವ್ಯಕ್ತಿಗಳು ಆ ಹೆಂಗಸಿನ ಕುರಿತಾಗಿ ನೀಡುವ ವಿವರಣೆಯಂತಿದೆ. ಇಲ್ಲಿ ಅಪರಿಚಿತ ಮಹಿಳೆಯನ್ನು, ಆ ವ್ಯಕ್ತಿಗಳು, ಯಾವೂರು ನಿಂದು, ಎಲ್ಲಿಗೆ ಹೊರಟಿರುವೆ ಎಂದು ವಿಚಾರಿಸುತ್ತಿರುವುದು. ಆರಂಭ ಸಾಲುಗಳಲ್ಲಿ ಕಾಣಬಹುದಾಗಿದೆ. ಹಾಗೆಯೇ ಕೋಡೂರು ದಿಬ್ಬದ ಮೇಲೆ ನೂರೊಂದು ಗುಡಿಸಲು ಜೊತೆಗೆ ಕೋಟಿ ಒಂದು ಗುಡಿಸಲುಗಳಿವೆ ಎಂಬ ವಿಚಾರವನ್ನು ಇಲ್ಲಿ ಪ್ರಸ್ತಾಪಿಸಿರುವುದಿದೆ. ಹಾಗೆಯೆ ಆ ನೂರೊಂದು ಗುಡಿಸಲುಗಳಿಗೆ ನೀನೆ ಹಿರಿಯಳು ಅಥವಾ ದೊಡ್ಡವಳು ಜೊತೆಗೆ ನಾನೊಬ್ಬ ಹಿರಿಯ ಅಥವಾ ಯಜಮಾನ ಎಂದು ಒಬ್ಬ ಹಿರಿಯ ವ್ಯಕ್ತಿ ಇನ್ನೊಬ್ಬ ಹಿರಿಯ ಹೆಂಗಸಿಗೆ ಹೇಳುವಂತೆ ಕಾಣುತ್ತದೆ. ಹೆಂಗಸಿಗೆ ಒಂದು ಸಣ್ಣ ಮಗುವಿದೆ. ಆ ಮಗುವನ್ನು ಕಂಕುಳಲ್ಲಿ ಕೂರಿಸಿಕೊಂಡು ಹೊರಟಿರುವ ಚಿತ್ರಣ ಈ ಕೋಲುಪದದಲ್ಲಿದೆ. ಹಾಗೆಯೇ ಹಿರಿಯ ಹೆಂಗಸಿಗೆ ಅಥವಾ ಸ್ತ್ರೀಗೆ ಜೊತೆಯಾಗಿ ಅತ್ತಿಗೆ-ನಾದಿನಿಯರು ಭಾವ-ಭಾಮೈದರು ಅವಳ ಜೊತೆಗೆ ಸಹ ಪಯಣಿಗರಾಗಿ ಹೊರಟಿರುವಂತೆ ಕಾಣಬರುತ್ತದೆ. ಜೊತೆಗೆ ಹಾಡಿನ ಕೊನೆಯ ಘಟ್ಟದಲ್ಲಿ ಆ ಮಹಿಳೆಯ ಕಂಕುಳಲ್ಲಿರುವ ಕೂಸು ಹೇಗೆ ಹುಟ್ಟಿತು? ಎಂಬುದು ಪ್ರಶ್ನಾರ್ಥಕವಾಗಿಯೆ ಈ ಕೋಲುಪದ ಮುಕ್ತಾಯವಾಗುವ ಹಂತಕ್ಕೆ ಬಂದು ನಿಲ್ಲುತ್ತದೆ.

ಇದೇ ಮಾದರಿಯ ಕೋಲುಪದ ಒಂದೇ ರೀತಿಯ ಧಾಟಿ, ಲಯ ಹೊಂದಿದ್ದು ಚಳ್ಳಕೆರೆಯ ಆಂಧ್ರ ಗಡಿಪ್ರಾಂತ ಪರಿಸರದಲ್ಲಿ ಸಂಗ್ರಹಿಸಲಾಗಿದೆ. ಮಧುಗಿರಿಯಲ್ಲಿ ಸಂಗ್ರಹಿಸಿದ ಕೋಲುಪದದಲ್ಲಿ ಒಬ್ಬ ಹಿರಿಯ ಹೆಂಗಸಿಗೆ ಸಂಬಂಧಿಸಿದಂತೆ ವಿಶ್ಲೇಷಿಸಿರುವುದು ಕಂಡುಬಂದಿದೆ. ಚಿತ್ರದುರ್ಗದ ಚಳ್ಳಕೆರೆಯ ಪರಿಸರದಲ್ಲಿ ಸಂಗ್ರಹಿಸಿದ ಈ ತೆಲುಗು ಕೋಲುಪದದಲ್ಲಿ ಒಬ್ಬ ಸ್ವಾಮೀಜಿಯನ್ನೋ ಅಥವಾ ಬೇರೆ ಯಾರೋ ಅಪರಿಚಿತ ವ್ಯಕ್ತಿಯನ್ನು ಗೇಲಿ ಮಾಡಿರುವಂತೆಯೋ ಅಥವಾ ಅಪಹಾಸ್ಯಕ್ಕೆ ಗುರಿ ಮಾಡಿರುವಂತೆಯೋ ಕಂಡುಬಂದಿದೆ.

**ಚಳ್ಳಕೆರೆ ಪರಿಸರದಲ್ಲಿ ಸಂಗ್ರಹಿಸಿದ ತೆಲುಗು ಕೋಲುಪದ**

ಯಕ್ಕಡ ಯಾವ ಸೀಮ ಯಲಕಲಸ್ವಾಮಿ
ಏಟು ಗಡ್ಡಮೀದ ನೂಟೊಕ್ಕು ಗುಡುಸ
ನೂಟೊಕ್ಕು ಗುಡುಸಾಕಿ ನಾದೊಕ್ಕು ಗುಡುಸ |ಪ|

ದುಡ್ಡಾಲು ಇಸ್ರತಾನೆ ಗೆದ್ದಸೆಪ್ಪಮ್ಮ
ದುಡ್ಡಾಲು ಮಾ ಇಂಟಿ ವಡ್ಡಿಗಾಸಲ್ಲೆ |ಪ|

(ವಕ್ತೃ: ಮುತ್ತಯ್ಯ, ನನ್ನಿವಾಳ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಈ ಕೋಲುಪದದ ಆರಂಭದ ಸಾಲುಗಳಲ್ಲಿ ಒಬ್ಬ ಅಪರಿಚಿತ ವ್ಯಕ್ತಿಯನ್ನು ಅಥವಾ ಸನ್ಯಾಸಿ ಅಥವಾ ಸ್ವಾಮೀಜಿಯನ್ನೋ ಅಪಹಾಸ್ಯಕ್ಕೆ ಗುರಿ ಮಾಡಿರುವುದು ಕಾಣಸಿಗುತ್ತದೆ. ಇಲ್ಲಿ ಪ್ರಸ್ತಾಪಿಸಲಾದ ಅಪರಿಚಿತ ವ್ಯಕ್ತಿ ಅಥವಾ ಸನ್ಯಾಸಿಯನ್ನು 'ಯಲಕಲಸ್ವಾಮಿ' ಎಂದು ಗೇಲಿ ಮಾಡಿರುವುದು ಕಾಣಸಿಗುತ್ತದೆ. 'ಯಲಕಲಸ್ವಾಮಿ' ಎಂದರೆ 'ಇಲಿಗಳ ಸ್ವಾಮಿ' ಎಂದರ್ಥ. ಇಲ್ಲಿ 'ಇಲಿಗಳ ಸ್ವಾಮಿ' ಎಂದು ಕರೆದಿರುವುದು ಒಬ್ಬ ಸಾಧುವನ್ನೋ ಅಥವಾ ಸನ್ಯಾಸಿಯನ್ನೋ ಇರಬಹುದು ಎಂದು ಊಹೆ ಮಾಡಬಹುದು. ಮಧುಗಿರಿಯಲ್ಲಿ ಸಂಗ್ರಹಿಸಿದ ಕೋಲುಪದದಲ್ಲಿ ಗುಡಿಸಲುಗಳ ವಿಚಾರವನ್ನು ಪ್ರಸ್ತಾಪಿಸಿರುವಂತೆ ಈ ಹಾಡಿನಲ್ಲಿಯೂ ಸಹ ಗುಡಿಸಲುಗಳ ಕುರಿತು ವಿಚಾರ ಮಾಡಿರುವುದಿದೆ. ಈ ಗೀತೆಯಲ್ಲಿ ದಿಬ್ಬದ ಮೇಲೆ ನೂರೊಂದು ಗುಡಿಸಲು ಆ ನೂರೊಂದು ಗುಡಿಸಲಿಗೆ ನನದೊಂದು ಗುಡಿಸಲು ಎಂಬುದನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಹಾಗೆಯೇ ದುಡ್ಡಿನ ಕುರಿತು ಪ್ರಸ್ತಾಪಿಸುತ್ತಾ ದುಡ್ಡು ನಮ್ಮ ಮನೆಯಲ್ಲಿ ಪುಡಿಗಾಸಿಗೆ ಸಮ ಎಂದು ಹೇಳಿರುವುದು ಕಂಡುಬರುತ್ತದೆ. ಈ ಕೋಲುಪದವನ್ನು ಹೊಸೆದ ಅಥವಾ ಕಟ್ಟಿದ ಜನಪದರು ಒಬ್ಬ ಸನ್ಯಾಸಿಯನ್ನು ಅಥವಾ ಸಾಧುವನ್ನೋ ಗೇಲಿ ಮಾಡಿ ಅಪಹಾಸ್ಯಕ್ಕೆ ಗುರಿ ಮಾಡಿರುವುದಿದೆ. ಜೊತೆಗೆ ದುಡ್ಡು ಕಾಲಕಸಕ್ಕೆ ಸಮ ಎಂಬಂತೆ ದುಡ್ಡಿಗೆ ಬೆಲೆ ನೀಡುವುದಿಲ್ಲ. ಮೌಲ್ಯಗಳಿಗೆ, ಆದರ್ಶಗಳಿಗೆ ಮಾತ್ರ ಬೆಲೆ ಇರುವುದು ಎಂಬ ಮಾತನ್ನು ಜನಪದರು ಈ ರೀತಿ ಸೂಕ್ಷ್ಮವಾಗಿ ಅಥವಾ ಮಾರ್ಮಿಕವಾಗಿ ನುಡಿದಿದ್ದಾರೆ.

ಈ ಕೋಲುಪದವು ತೆಲುಗಿನ ಪದವಾಗಿದ್ದರೂ ಸಹ ಕನ್ನಡದ ನುಡಿಗಳು ನುಸುಳಿರುವುದು ಕಾಣಸಿಗುತ್ತದೆ. ಉದಾಹರಣೆಗೆ: ಯಕ್ಕಾಡ ಯಾವ ಸೀಮ ಯಲಕಲ ಸ್ವಾಮಿ' ಎನ್ನುವಂಥ ಸಾಲಿನಲ್ಲಿ 'ಯಾವ' ಎನ್ನುವ ಪದವು ಕನ್ನಡದ ನುಡಿಯೆಂಬುದು ತಿಳಿದುಬರುತ್ತದೆ. ಹಾಗೆಯೇ ಇದೇ ಹಾಡಿನಲ್ಲಿ ಮತ್ತೊಂದು ಕನ್ನಡದ ನುಡಿಯು ಸೇರಿ ಹೋಗಿರುವುದನ್ನು ಕಾಣಬಹುದಾಗಿದೆ. 'ದುಡ್ಡಾಲು ಇಸ್ತಾನೆ ಗೆದ್ದ ಸೆಪ್ಪಮ್ಮ' ಎನ್ನುವಂಥ ಸಾಲಿನಲ್ಲಿಯೂ ಕೂಡ 'ದುಡ್ಡು' ಎನ್ನುವ ಪದಕ್ಕೆ ತೆಲುಗಿನಲ್ಲಿ ಬಹುವಚನ ರೂಪವನ್ನು ಪಡೆದಿರುವ 'ಲು' ಕಾರವು ಸೇರಿ 'ದುಡ್ಡಾಲು' ಎಂದಾಗಿದೆ. ಹಾಗಾಗಿ ಇದೊಂದು ಕನ್ನಡ ಮತ್ತು ತೆಲುಗಿನ ಎರಡೂ ಪದಗಳು ಸೇರಿ 'ದುಡ್ಡಾಲು' ಎಂಬ ಹೊಸ ನುಡಿಯೊಂದು ಕೋಲುಪದಗಳಲ್ಲಿ ಸೃಷ್ಟಿಯಾಗಿರುವುದು ಕಾಣಸಿಗುತ್ತದೆ. ಹೀಗೆ ತೆಲುಗು-ಕನ್ನಡ ಕೋಲಾಟ ಪದಗಳನ್ನು ಹಾಡುತ್ತಾ ಪ್ರದರ್ಶನ ಮಾಡುವ ಕಾಲಕ್ಕೆ ಆಯಾ ಭಾಷೆಯ ಹಾಡುಗಳನ್ನು ಹಾಡುತ್ತಿರುವಾಗ ಬೇರೊಂದು ಭಾಷೆಯ ನುಡಿಗಳು ಸೇರಿ ಹೋಗುವುದರ ಜೊತೆಗೆ ಎರಡೂ ಭಾಷೆಯ ನುಡಿಗಳು ಸೇರಿ ಹೊಸದೊಂದು ನುಡಿ ಅಥವಾ ಪದಗಳನ್ನು ಸೃಷ್ಟಿಸಿರುವುದು ಕೋಲುಪದಗಳಲ್ಲಿ ಕಾಣಸಿಗುತ್ತವೆ. ಹೀಗೆ ಕನ್ನಡ ಮತ್ತು ತೆಲುಗು ಭಾಷೆಗಳು ಗಡಿ ಪ್ರಾಂತ ಪರಿಸರದಲ್ಲಿ ಒಂದಕ್ಕೊಂದು ಪ್ರಭಾವಿಸಿಕೊಂಡು ಹೊಸತೊಂದು ನುಡಿಯ ಹುಟ್ಟಿಗೆ ಕಾರಣವಾಗುತ್ತಿವೆ ಎಂದು ಹೇಳಬಹುದು. ಈಗಾಗಲೇ ಪ್ರಸ್ತಾಪಿಸಿದ ಕೋಲುಪದದ

ಮಾದರಿಯಲ್ಲಿ ಮತ್ತೊಂದು ಕೋಲುಪದವು ಚಳ್ಳಕೆರೆ ಪರಿಸರದಲ್ಲಿ ಕಾಣಸಿಗುತ್ತದೆ. ಈ ಗೀತೆಯನ್ನು ಚಳ್ಳಕೆರೆಯ ಬೋಸೇದೇವರಹಟ್ಟಿ ಮತ್ತು ರಾಮದುರ್ಗ ಎಂಬ ಹಳ್ಳಿಗಳಲ್ಲಿ ಸಂಗ್ರಹಿಸಲಾಗಿದೆ. ಈ ಮೊದಲೇ ನೋಡಿದ ಎರಡೂ ಕೋಲುಪದಗಳಿಗಿಂತ ಈ ಕೋಲುಪದವು ಭಿನ್ನತೆಯಿಂದ ಕೂಡಿದೆ ಹಾಗೂ ಹಲವು ರೀತಿಯಲ್ಲಿ ಹೋಲಿಕೆ, ವ್ಯತ್ಯಾಸಗಳು ಕಂಡು ಬರುವುದರ ಜೊತೆಗೆ ಸಮಾನ ಅಂಶಗಳು ಈ ಕೋಲುಪದದಲ್ಲಿ ಕಾಣಸಿಗುತ್ತವೆ.

ಚಳ್ಳಕೆರೆಯು ಆಂಧ್ರಪ್ರದೇಶದ ಗಡಿಭಾಗಕ್ಕೆ ಹೊಂದಿಕೊಂಡಿರುವುದರಿಂದ ತೆಲುಗು ಕೋಲಾಟ ಪದಗಳು ತುಂಬಾ ವಿಪುಲವಾಗಿ ದೊರಕುತ್ತವೆ. ಹಾಗೆಯೇ ಈ ಕೋಲುಪದಗಳಲ್ಲಿ ಕನ್ನಡ ಪದಗಳು(ನುಡಿಗಳು) ನುಸುಳುವಿಕೆಯಿಂದ ತೆಲುಗು-ಕನ್ನಡಗಳು ಪರಸ್ಪರ ಪ್ರಭಾವಿಸಿಕೊಂಡಿರುವುದು ಕಂಡುಬರುತ್ತದೆ.

**ಚಳ್ಳಕೆರೆಯ ರಾಮದುರ್ಗದಲ್ಲಿ ಸಂಗ್ರಹಿಸಿದ ತೆಲುಗು ಕೋಲುಪದ**

ದಾತ ಪರೀಕ್ಷಂ ಪಟ್ಟಣ ಜೋಗಿ
ಸಂಕಾಕಿ ಜೋಳಿಗೆ ಏಸ್ಯಾಡೆ ಜೋಗಿ
ಕಾಸಿ ಕಾಮಂಡ್ಲಮು ಧರಿಸ್ಯಾಡೆರಯ್ಯಾ
ಯಾಡಾದಿಕಿ ಒಕಸಾರಿ ವಾಡೋಚ್ಚಡೆವ್ವಾ
ಯಕ್ಕಾಟಿ ಯಾವ ಸೀಮ ಯಲಕಲಸ್ವಾಮಿ
ದಾತ ಪರೀಕ್ಷಂ ಪಟ್ಟಣ ಜೋಗಿ
ಮುತ್ತೂಲು ಇಸ್ತಾನು ಗೆದ್ದ ಸೆಪ್ಪಮ್ಮ
ಮುತ್ತೂಲು ಮಾ ಇಂಟ್ಲೊ ಮುಗ್ಗಿ ಜೊನ್ನಾಲು
ಒಂಟೇಲು ಇಸ್ತಾನು ಗೆದ್ದೆ ಸೆಪ್ಪಮ್ಮ
ಬಂಟೇಲು ಮಾ ಇಂಟ್ಲೋ ಕುಂಟಿ ಕುಕ್ಕಾಲು
ಏನುಗಲು ಇಸ್ತಾನು ಗೆದ್ದೆ ಸೆಪ್ಪಮ್ಮ
ಏನುಗಲು ಮಾ ಇಂಟ್ಲೋ ಎನುಮು ಗೊಡ್ಡಾಲು
ದಾತ ಪರೀಕ್ಷಂ ಪಟ್ಟಣ ಜೋಗಿ
(ವಕ್ತೃ: ಪೂಜಾರಿ ಓಬಯ್ಯ, ರಾಮದುರ್ಗ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಮಧುಗಿರಿಯ ಹಳೇಹಟ್ಟಿ ಮತ್ತು ಚಳ್ಳಕೆರೆಯ ಬೋಸೆದೇವರಹಟ್ಟಿಯಲ್ಲಿ ಸಂಗ್ರಹಿಸಿದ ಎರಡೂ ಹಾಡುಗಳಿಗಿಂತ ಈ ಹಾಡು ಭಿನ್ನತೆಯಿಂದ ಕೂಡಿದೆ. ಈ ಎರಡೂ ಹಾಡುಗಳ ಸಮ್ಮಿಶ್ರದೊಂದಿಗೆ ರೂಪಿತವಾಗಿರುವ ಈ ಗೀತೆ ಅವೆರಡೂ ಹಾಡುಗಳಿಗಿಂತ ಪ್ರತ್ಯೇಕ ಸ್ಥಾನದಲ್ಲಿ ನಿಲ್ಲುತ್ತದೆ.

ಈ ಹಿಂದೆ ಪ್ರಸ್ತಾಪಿಸಲಾದ ಎರಡೂ ಕೋಲುಪದಗಳಲ್ಲಿ ಒಬ್ಬ ಮಹಿಳೆಯನ್ನು ಅಥವಾ ಹಿರಿಯ ಹೆಂಗಸನ್ನು ಕುರಿತು ಮತ್ತು ಒಬ್ಬ ಸ್ವಾಮೀಜಿ ಅಥವಾ ಅಪರಿಚಿತ ಸನ್ಯಾಸಿಯನ್ನು ಕುರಿತು ಪ್ರಸ್ತಾಪಿಸಿರುವುದಿದೆ. ಆದರೆ ಈ ಕೋಲುಪದದಲ್ಲಿ ಸನ್ಯಾಸಿಯ ಪ್ರಸ್ತಾಪ ಮಾಡುವುದರ

ಜೊತೆಗೆ ಒಬ್ಬ ಜೋಗಿಯು ತನ್ನ ಕೈಚಳಕದಿಂದ ಮಹತ್ವ ಪಡೆದಿರುವ ವಸ್ತುಗಳನ್ನು ಹೇಗೆ ತನ್ನ ಕೈವಶ ಮಾಡಿಕೊಳ್ಳುತ್ತಾನೆ ಎಂಬುದರ ಕುರಿತಾಗಿ ಪ್ರಸ್ತಾಪ ಮಾಡಿರುವುದು ಕಂಡು ಬರುತ್ತದೆ.

ಪಟ್ಟಣದಿಂದ ಬಂದಂಥ ಜೋಗಿಯ ಮೋಡಿಯ ಕಲೆಗೆ, ಮಹತ್ವ ಸ್ಥಾನವನ್ನು ಪಡೆದಿರುವ ಬೆಲೆಯುಳ್ಳ ಕಡಲಮುತ್ತುಗಳು ಮುಗ್ಗು ಹೋದ ಅಥವಾ ಕೆಟ್ಟು ಹೋದ ಹಳಸಿದ ಜೋಳದಂತೆ ಬಿದ್ದಿವೆ ಎಂದು ಹೇಳುವುದನ್ನು ಗಮನಿಸಿದರೆ ಜೋಗಿಯ ಸಿರಿವಂತಿಕೆಯನ್ನು ಊಹಿಸಬೇಕಾಗುತ್ತದೆ. ಹಾಗೆಯೇ ಜೋಗಿಯ ಮನೆಯಲ್ಲಿನ ಒಂಟೆಗಳು ಮನೆ ಕಾವಲು ಕಾಯುವ ನಾಯಿಗಳ ಹಾಗೆ ಬಿದ್ದಿವೆ ಎಂಬುದನ್ನು ನೋಡಿದರೆ ಜೋಗಿಯ ಕೈಚಳಕದ ಕಲೆಗಾರಿಕೆಯು ಎಂಥಹದ್ದು ಎಂಬುದು ಅರಿವಿಗೆ ಬರುತ್ತದೆ. ಜೊತೆಗೆ ಆನೆಗಳು ಕೊಬ್ಬಿ, ಮದವೇರಿ ನಿಂತಿವೆ. ಆದರೆ ಫಲವೇನು? ಸಂತಾನ ಫಲವಿಲ್ಲದೆ ಗೊಡ್ಡು ಎಮ್ಮೆಗಳ ಹಾಗೆ ಜೋಗಿಯ ಮನೆಯ ಮುಂದೆ ಬಿದ್ದಿವೆ. ಗೊಡ್ಡು ಎಂದರೆ ಸಂತಾನವಿಲ್ಲದಿರುವುದು ಎಂದರ್ಥ. ಹೀಗೆ ಜೋಗಿಯ ಮೋಡಿ ಆಟವನ್ನು ಕೈಚಳಕದ ಕಲೆಗಾರಿಕೆಯನ್ನು ಈ ಗೀತೆ ತೆರೆದಿಡುತ್ತದೆ. ಹಾಡಿನ ಮಧ್ಯದಲ್ಲಿ 'ಯಕ್ಕಡಿ ಯಾವ ಸೀಮ ಯಲಕಲ ಸ್ವಾಮಿ' ಎಂದು ಕರೆದು ಗೇಲಿ ಮಾಡಿ ಅಪಹಾಸ್ಯಕ್ಕೆ ಗುರಿ ಮಾಡಿದ್ದಾರೆಂಬುದು ಹೇಳಬಹುದು. ಒಟ್ಟಿನಲ್ಲಿ ಜನಪದರು ತಮ್ಮ ಅನುಭವದ ಹಿನ್ನೆಲೆಯಲ್ಲಿ ಈ ರೀತಿಯ ಕಾಲ್ಪನಿಕ ಕಥೆಗಳನ್ನು ಕಟ್ಟಿ ಹಾಡುವುದರ ಜೊತೆಗೆ ಕೋಲಾಟ ನೋಡಲು ಬಂದ ನೋಡುಗರಿಗೆ ಮನೋರಂಜನೆ ನೀಡಲು ಈ ತರಹದ ಕಥೆಗಳನ್ನು ಕಟ್ಟಿ ಹಾಡುತ್ತಾ, ನಗೆಗಡಲಲ್ಲಿ ತೇಲಿಸುತ್ತಿದ್ದರು ಎಂಬುದು ಇಂತಹ ಹಾಡುಗಳ ಮುಖೇನ ತಿಳಿದುಬರುತ್ತದೆ.

ಈ ಕೋಲುಪದವು ತೆಲುಗಿನ ಕೋಲುಪದವಾದರೂ ಕನ್ನಡದ ನುಡಿಗಳು ನುಸುಳಿರುವುದು ಕಂಡುಬಂದಿದೆ. ಅವುಗಳು ಒಂಟೆ, ಪಟ್ಟಣ, ಯಾವ, ಈ ಪದಗಳು ಕನ್ನಡದ ಪದಗಳಾಗಿದ್ದು ಕನ್ನಡ ನಾಡಿನಲ್ಲಿ ಈ ಹಾಡುಗಳನ್ನು ಕಟ್ಟಿ ಹಾಡಿರುವುದರಿಂದ ಸಹಜವಾಗಿ ಕನ್ನಡ ಪದಗಳು ತೆಲುಗು ಕೋಲುಪದಗಳಲ್ಲಿ ಸೇರಿ ಹೋಗಿರುವುದನ್ನು ಕಾಣಬಹುದಾಗಿದೆ.

### ೫.೪. ಕನ್ನಡ ಕೋಲುಪದಗಳಲ್ಲಿ ತೆಲುಗು ನುಡಿಬೆರಕೆ

ಕರ್ನಾಟಕ-ಆಂಧ್ರ ಗಡಿ ಪರಿಸರದಲ್ಲಿ ತೆಲುಗು ಹಾಡುಗಳಲ್ಲಿ ಕನ್ನಡದ ನುಡಿಗಳು ನುಡಿಬೆರಕೆಯಾಗಿರುವಂತೆ, ಕನ್ನಡದ ಕೋಲುಪದಗಳಲ್ಲಿ ತೆಲುಗು ನುಡಿಗಳು ಬೆರಕೆಯಾಗಿರುವುದು ಕಂಡುಬರುತ್ತದೆ. ಇದು ಕೇವಲ ಕರ್ನಾಟಕ ಗಡಿ ಪ್ರಾಂತ ಪರಿಸರಕ್ಕೆ ಮಾತ್ರ ಸೀಮಿತವಾಗಿರದೆ ಆಂಧ್ರಪ್ರದೇಶದ ಗಡಿಪ್ರಾಂತ ಪರಿಸರಕ್ಕೂ ಇದು ಅನ್ವಯವಾಗುತ್ತದೆ. ಉದಾಹರಣೆಗೆ ಚಳ್ಳಕೆರೆಯ ಜೋಸೆದೇವರಹಟ್ಟಿಯಲ್ಲಿ ಸಂಗ್ರಹಿಸಿದ ಕೋಲುಪದದಲ್ಲಿ ತೆಲುಗು ಭಾಷೆಯ ನುಡಿಯೊಂದು ಬೆರಕೆಯಾಗಿರುವುದು ಕಾಣಸಿಗುತ್ತದೆ.

**ಕನ್ನಡ ಕೋಲುಪದದಲ್ಲಿ ತೆಲುಗಿನ ನುಡಿ ನುಡಿಬೆರಕೆಯಾಗಿರುವ ಕೋಲುಪದ**

ಟಗರು ಟಗರು ಪೋಟುಲಾಡೆ ಗೆಜ್ಜೆ ಗಲ್ಲೆಂದವೋ
ಮಾಳಿಗೆ ಮೇಗಳ ಮಜ್ಜಿಗೆ ಸಾರು ಗಾಳಿ ಬೋರೆಂದವೋ
ಕಣ್ಣಿತಾರ ಕಣ್ಣಿಯೊಂದು ದನ ಕಟ್ಟ ಕಣ್ಣಿಯೋ
ಸರಪಣಿ ತಾರ ಸರಪಣಿಯೋ ಸರಳೆಮ್ಮ ಕಟ್ಟ ಸರಪಣಿಯೋ

(ವಕ್ತೃ: ಬೋರಯ್ಯ, ಬೋಸೆದೇವರಹಟ್ಟಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಈ ಕೋಲುಪದವು ಕನ್ನಡನಾಡಿನ ಪ್ರಾಂತವಾದ ಚಳ್ಳಕೆರೆಯ ಪರಿಸರದಲ್ಲಿ ಸಂಗ್ರಹಿಸಲಾಗಿದೆ. ಇದು ಕನ್ನಡದ ಗೀತೆಯಾದರೂ ಆರಂಭದ ಸಾಲಿನಲ್ಲಿ 'ಟಗರು ಟಗರು ಪೋಟುಲಾಡೆ ಗೆಜ್ಜೆ ಗಲ್ಲೆಂದವೋ' ಎಂಬುದರಲ್ಲಿ 'ಪೋಟುಲಾಡೆ' ಎನ್ನುವಂಥ ನುಡಿಯು ತೆಲುಗಿನ ಪದವಾಗಿದೆ. ಚಳ್ಳಕೆರೆ ಪ್ರಾಂತವು ಆಂಧ್ರಪ್ರದೇಶದ ಗಡಿ ಪರಿಸರಕ್ಕೆ ಹೊಂದಿಕೊಂಡಿರುವುದರಿಂದ ಕನ್ನಡದ ನುಡಿಗಳ ಮೇಲೆ ಅಥವಾ ಕನ್ನಡ ಕೋಲುಪದಗಳು ಅಥವಾ ಇತರೆ ಜನಪದ ಹಾಡುಗಳಲ್ಲಿ ತೆಲುಗಿನ ಪ್ರಭಾವ ಆಗಿರುವುದು ಕಾಣಸಿಗುತ್ತದೆ. ಹಾಗೆಯೇ ಈ ಕೋಲುಪದದಲ್ಲಿಯೂ ಸಹ ಅದು ಕಂಡುಬಂದಿದೆ. ಇದು ಕೋಲಾಟ ಪದಗಳಲ್ಲಿ ಮಾತ್ರವಲ್ಲದೆ ಸೋಬಾನೆ ಪದಗಳು, ಭಜನೆಪದಗಳು, ಬುರ್ರಕಥಾ, ಗಾದೆ, ಒಗಟು ಇತ್ಯಾದಿಗಳಲ್ಲೂ ಕನ್ನಡದ ಹಾಡುಗಳಲ್ಲಿ ತೆಲುಗು ಪದಗಳು(ನುಡಿಗಳು) ಬೆರೆತು ಹೋಗಿರುವುದನ್ನು ಗಮನಿಸಿದರೆ ಆಂಧ್ರ ಮತ್ತು ಕರ್ನಾಟಕದ ಸಂಸ್ಕೃತಿಯು ಪರಸ್ಪರ ಎರಡು ರಾಜ್ಯಗಳನ್ನು ಒಂದೇ ಎಂಬ ನೀತಿಯ ಜೊತೆಗೆ ಎರಡು ರಾಜ್ಯಗಳ ಐಕ್ಯತೆಯನ್ನು ಕೋಲುಪದಗಳು ಸಾರುತ್ತವೆ ಎಂಬುದನ್ನು ಗಮನಿಸಬಹುದಾಗಿದೆ. ಇದು ಕರ್ನಾಟಕದ ಗಡಿಪ್ರಾಂತಗಳಿಗೆ ಮಾತ್ರ ಸೀಮಿತವಾಗಿರದೆ ಆಂಧ್ರಪ್ರದೇಶದ ಗಡಿ ಪ್ರಾಂತಗಳ ತೆಲುಗು ಕೋಲುಪದ ಹಾಗೂ ಇತರೆ ಜನಪದ ಕಲೆಗಳಲ್ಲಿನ ಹಾಡುಗಳ ಮೇಲೂ ಕನ್ನಡದ ಪ್ರಭಾವ ಆಗಿರುವುದನ್ನು ಗಮನಿಸಬಹುದಾಗಿದೆ. ಕನ್ನಡ ನಾಡಿನ ಕನ್ನಡ ಕೋಲುಪದಗಳಲ್ಲಿ ತೆಲುಗು ನುಡಿಗಳು ಸೇರಿ ಹೋಗಿರುವುದು. ಹಾಗೆಯೇ ತೆಲುಗು ನಾಡಿನ ತೆಲುಗು ಕೋಲುಪದಗಳಲ್ಲಿ ಕನ್ನಡದ ನುಡಿಗಳು ಬೆರಕೆಯಾಗಿರುವುದು ಕಂಡುಬರುತ್ತದೆ. ಹೀಗೆ ಎರಡು ರಾಜ್ಯಗಳನ್ನು ಏಕವಾಗಿಸುವ ಗಡಿಪ್ರಾಂತಗಳು ಎರಡು ಭಿನ್ನ ಸಂಸ್ಕೃತಿಗಳನ್ನು ಅಥವಾ ಬಹುತ್ವ ಸಂಸ್ಕೃತಿಯನ್ನು ತನ್ನೊಡಲಲ್ಲಿರಿಸಿಕೊಂಡಿರುವುದು ಗಡಿಪ್ರಾಂತ ಕೋಲುಪದಗಳಲ್ಲಿನ ವಿಶಿಷ್ಟತೆಯಾಗಿದೆ.

### ೫.೫. ಗಡಿನಾಡ ಬೇಡರ ಕೋಲುಪದಗಳು

ಕರ್ನಾಟಕ - ಆಂಧ್ರ ಗಡಿ ಪರಿಸರವು ಸಾಮುದಾಯಿಕವಾಗಿ, ಧಾರ್ಮಿಕವಾಗಿ, ಭಾಷಿಕವಾಗಿ ಮತ್ತು ಸಾಂಸ್ಕೃತಿಕವಾಗಿಯೂ ಶ್ರೀಮಂತಿಕೆಯಿಂದ ಕೂಡಿದ ಪ್ರದೇಶವಾಗಿದೆ. ಗಡಿ ಪ್ರಾಂತಗಳಲ್ಲಿ ಹಲವು ತೆರನಾದ ಭಾಷೆ, ಸಂಸ್ಕೃತಿ, ಸಮುದಾಯಗಳು ನೆಲೆಗೊಂಡಿದ್ದು, ಅವುಗಳೆಲ್ಲವೂ ಏಕರೂಪವನ್ನು ಪಡೆದುಕೊಂಡಿರುವುದು ಗಡಿ ಪರಿಸರದಲ್ಲಿ ಕಾಣಬಹುದಾಗಿದೆ. ಗಡಿ ಪರಿಸರದಲ್ಲಿ

ನೆಲೆಸಿರುವ ಹಲವು ಸಮುದಾಯಗಳು ತಮ್ಮದೇ ಆದ ಸಂಸ್ಕೃತಿ, ಭಾಷೆ, ಆಚಾರ-ವಿಚಾರ, ರೂಢಿ-ಸಂಪ್ರದಾಯಗಳನ್ನು ರೂಪಿಸಿಕೊಂಡಿರುತ್ತವೆ. ಗಡಿನಾಡಿನ ಪ್ರಾಂತಗಳಲ್ಲಿ ತಮ್ಮ ಭಾಷೆ, ಸಂಸ್ಕೃತಿಯೊಂದಿಗೆ ಇತರೆ ಜನಾಂಗದ, ಇತರೆ ಸಮುದಾಯಗಳ ಭಾಷೆ, ಸಂಸ್ಕೃತಿಗಳನ್ನು ಸಹ ತಮ್ಮಲ್ಲಿ ರೂಢಿಸಿಕೊಂಡಿರುತ್ತಾರೆ. ಗಡಿ ಭಾಗದ ಜನಸಮುದಾಯಗಳಲ್ಲಿ ಅನಾದಿಕಾಲದಿಂದಲೂ ಜನಪದ ಕಲೆ, ಸಂಸ್ಕೃತಿ, ಭಾಷೆ, ಸಾಹಿತ್ಯ ಮತ್ತಿತರ ಸಂಗತಿಗಳಲ್ಲಿ ಕೊಡು-ಪಡೆ ನಡೆದಿರುವುದು ಮತ್ತು ನಡೆಯುತ್ತಿರುವುದು ಸಾಮಾನ್ಯ ಮತ್ತು ಸಹಜವಾದ ಪ್ರಕ್ರಿಯೆ ಆಗಿದೆ.

ಆಂಧ್ರ - ಕರ್ನಾಟಕ ಗಡಿನಾಡ ಪ್ರಾಂತ ಪರಿಸರದಲ್ಲಿ ಹಲವು ಸಮುದಾಯಗಳು ನೆಲೆಸಿವೆ. ಅವುಗಳು ಕುರುಬರು, ಗೊಲ್ಲರು, ಮಾದಿಗರು, ಕೊರಚರು, ಬೇಡರು, ವಡ್ಡರು, ಲಿಂಗಾಯತರು ಮತ್ತಿತರ ಸಮುದಾಯಗಳು ನೆಲೆಸಿರುವುದಿದೆ. ಯಾವುದೇ ಜನಾಂಗವಿರಲಿ, ಸಮುದಾಯವಿರಲಿ, ಅದರಲ್ಲಿ ಎರಡು ರೀತಿಯಲ್ಲಿ ಪಂಗಡಗಳು ಅಥವಾ ವರ್ಗಗಳಿರುವುದು ಪ್ರತಿ ಸಮುದಾಯದಲ್ಲಿ ಕಾಣಸಿಗುತ್ತದೆ. ಉದಾಹರಣೆಗೆ ಗೊಲ್ಲರಲ್ಲಿ ಕಾಡುಗೊಲ್ಲರು, ಊರುಗೊಲ್ಲರು, ಮಾದಿಗರಲ್ಲಿ ಛಲವಾದಿಗಳು, ಹೊಲೆಯರು, ಕುರುಬರಲ್ಲಿ ಕಾಡುಕುರುಬರು, ಜೇನುಕುರುಬರು, ವಡ್ಡರಲ್ಲಿ ಕಲ್ಲುವಡ್ಡರು, ಮಣ್ಣುವಡ್ಡರು ಮತ್ತು ಬೇಡರಲ್ಲಿ ಊರುಬೇಡರು ಮತ್ತು ಮ್ಯಾಸಬೇಡರು ಎಂಬ ಎರಡು ಪಂಗಡಗಳಿವೆ.

### ೫.೬. ಗಡಿನಾಡ ಬೇಡ ಸಮುದಾಯದ ಪಂಗಡಗಳು

ತೆಲುಗು - ಕನ್ನಡ ಎರಡೂ ರಾಜ್ಯಗಳ ಗಡಿ ಭಾಗಗಳಲ್ಲಿಯೂ ಗಡಿಯೇತರ ಪ್ರಾಂತಗಳಲ್ಲಿಯೂ ಎರಡೂ ಕಡೆಗಳಲ್ಲಿಯೂ ಬೇಡರು ಹೆಚ್ಚಾಗಿ ನೆಲೆಸಿರುವುದಿದೆ. ಒಂದು ಮರದ ರೆಂಬೆಯಲ್ಲಿ ಎರಡು ಕವಲೊಡೆದ ಹಾಗೆಯೇ ಬೇಡ ಸಮುದಾಯದಲ್ಲಿಯೂ ಕೂಡ ಎರಡು ಪಂಗಡಗಳಾಗಿ ಕವಲೊಡಿದಿವೆ. ಅವುಗಳು ಒಂದು ಊರುಬೇಡರು ಮತ್ತೊಂದು ಮ್ಯಾಸಬೇಡರು. ಈ ಎರಡೂ ವರ್ಗದವರೂ ಆಂಧ್ರ ಮತ್ತು ಕರ್ನಾಟಕದ ಗಡಿ ಜಿಲ್ಲೆಗಳಲ್ಲಿ ನೆಲೆಸಿದ್ದಾರೆ. ಆಂಧ್ರ ಪ್ರದೇಶದ ಗಡಿನಾಡ ಪ್ರಾಂತಗಳಲ್ಲಿ ನೆಲೆಸಿರುವ ಊರುಬೇಡರು ಕನ್ನಡ-ತೆಲುಗು ಎರಡೂ ಭಾಷೆಗಳನ್ನು ಬಲ್ಲವರಾಗಿದ್ದಾರೆ. ಕರ್ನಾಟಕದ ಗಡಿನಾಡ ಪ್ರಾಂತಗಳಲ್ಲಿ ನೆಲೆಸಿರುವ ಊರುಬೇಡರು ಕನ್ನಡವನ್ನು ಮಾತ್ರ ಮಾತಾನಾಡುವುದಿದೆ. ಅಲ್ಲಲ್ಲಿ ತೆಲುಗು ಮಾತನಾಡುವವರು ಕಂಡುಬಂದರೂ ತುಂಬಾ ವಿರಳ. ಹಾಗೆಯೇ ಕರ್ನಾಟಕ ಮತ್ತು ಆಂಧ್ರ ಗಡಿ ಪ್ರಾಂತಗಳಲ್ಲಿ ನೆಲೆಸಿರುವ ಮ್ಯಾಸಬೇಡರು ಕನ್ನಡ ಮತ್ತು ತೆಲುಗು ಎರಡೂ ಭಾಷೆಗಳನ್ನು ಸಲೀಸಾಗಿ ಮಾತನಾಡುತ್ತಾರೆ. ಮ್ಯಾಸಬೇಡರ ಮನೆಮಾತು ತೆಲುಗು, ವ್ಯಾವಹಾರಿಕವಾಗಿ ಬಳಸುವ ಭಾಷೆ ಕನ್ನಡ ಹಾಗೆಯೇ ಮ್ಯಾಸಬೇಡರು ಮಾತನಾಡುವ ಕನ್ನಡ-ತೆಲುಗು ಮಿಶ್ರಿತ ಭಾಷೆಯನ್ನು ಜಾನಪದ ತಜ್ಞರು ಮತ್ತು ಭಾಷಾ ವಿಜ್ಞಾನಿಗಳು ಕಂದೆಲುಗು ಎಂಬುದಾಗಿ ಕರೆದಿದ್ದಾರೆ. ಎರಡೂ ರಾಜ್ಯಗಳಲ್ಲಿ ನೆಲೆಸಿರುವ ಇವರು ಎರಡೂ ಕಡೆಗಳಲ್ಲಿ ಕನ್ನಡ-ತೆಲುಗು ಎರಡೂ ಭಾಷೆಗಳನ್ನು ಮಾತನಾಡುವುದಿದೆ.

ಎರಡೂ ರಾಜ್ಯಗಳ ಗಡಿ ಭಾಗಗಳಲ್ಲಿ ನೆಲೆಸಿರುವ ಮ್ಯಾಸಬೇಡರು ಮತ್ತು ಊರುಬೇಡರು ಒಂದೇ ಸಮುದಾಯಕ್ಕೆ ಸೇರಿದವರಾದರೂ ಕೂಡ ರೂಢಿ-ಸಂಪ್ರದಾಯ, ಜೀವನಾವರ್ತನಾ ಆಚರಣೆಗಳಾದ ಜನನ, ನಾಮಕರಣ, ನಿಶ್ಚಿತಾರ್ಥ, ಮದುವೆ, ಸೀಮಂತ ಮತ್ತು ಮರಣ ಇತ್ಯಾದಿ ವಿಚಾರಗಳಲ್ಲಿಯೂ ಹಾಗೆಯೇ ಜನಪದ ಕಲಾ ಪ್ರಕಾರಗಳಾದ ಬಯಲಾಟ, ಕೋಲಾಟ, ಭಜನೆ ಮತ್ತು ಸೋಬಾನೆ ಪದಗಳಲ್ಲಿಯೂ ಕೆಲವೊಂದು ಸಾಮ್ಯ-ವೈಷಮ್ಯಗಳು ಸ್ಪಷ್ಟವಾಗಿ ಗೋಚರವಾಗುತ್ತವೆ.

ತೆಲುಗು - ಕನ್ನಡ ಗಡಿ ಪ್ರಾಂತಗಳ ಜಿಲ್ಲೆಗಳಲ್ಲಿ ನೆಲೆಸಿರುವ ಮ್ಯಾಸಬೇಡ ಮತ್ತು ಊರುಬೇಡರು ಹಲವು ಜನಪದ ಕಲೆಗಳನ್ನು ಸಿದ್ಧಿಸಿಕೊಂಡಿದ್ದಾರೆ. ಅವುಗಳಲ್ಲಿ ಕೋಲಾಟವಂತೂ ಇವರಲ್ಲಿ ಪ್ರಸಿದ್ಧಿ ಪಡೆದಂಥ ಕಲೆಯಾಗಿದೆ. ಈ ಎರಡೂ ಪಂಗಡಗಳಲ್ಲಿ ಕೋಲುಪದಗಳನ್ನು ಹಾಡುತ್ತಾ ಕೋಲಾಟ ಪ್ರದರ್ಶನ ಮಾಡುವುದು ಕಂಡುಬಂದಿದೆ. ಕನ್ನಡ-ತೆಲುಗು ಎರಡೂ ಭಾಷೆಗಳಲ್ಲಿ ಪದಗಳನ್ನು ಹಾಡುತ್ತಾರೆ. ಜೊತೆಗೆ ಎರಡೂ ಭಾಷೆಯಲ್ಲಿ ಪ್ರತ್ಯೇಕವಾಗಿಯೂ ಪದಗಳನ್ನು ಹಾಡುತ್ತಾರೆ. ಇವರು ಹಾಡುವ ಕೋಲುಪದಗಳಲ್ಲಿ ಹಲವು ತೆರನಾದ ಸಮಾನಾಂಶಗಳು ಕಾಣಸಿಗುತ್ತವೆ. ಅವರಾಡುವ ಹಾಡುಗಳಲ್ಲಿ ಒಂದೇ ತೆರನಾದ ವಸ್ತು, ಒಂದೇ ತೆರನಾದ ಭಾಷೆ ಹಾಗೂ ಒಂದೇ ರೀತಿಯ ಜನಪದ ದೈವಗಳನ್ನು ಸ್ತುತಿಸುವುದು ಇತ್ಯಾದಿ ಅಂಶಗಳು ಸಾಮಾನ್ಯವಾಗಿ ಗೋಚರಿಸುತ್ತವೆ.

### ೫.೭. ಗಡಿನಾಡ ಮ್ಯಾಸಬೇಡ ಮತ್ತು ಊರುಬೇಡರ ಕೋಲುಪದಗಳು

ಕರ್ನಾಟಕ-ಆಂಧ್ರಪ್ರದೇಶದ ಗಡಿಪ್ರಾಂತಗಳಲ್ಲಿ ನೆಲೆಸಿರುವ ಬೇಡರು ಎರಡು ಪಂಗಡಗಳಾದ ಮ್ಯಾಸಬೇಡ ಮತ್ತು ಊರುಬೇಡರು ಕನ್ನಡ-ತೆಲುಗು ಎರಡೂ ಭಾಷೆಗಳನ್ನು ಮಾತನಾಡುತ್ತಾರೆ. ಇವರು ಆಂಧ್ರಪ್ರದೇಶದ ಕರ್ನೂಲು, ಕಡಪ, ಅನಂತಪುರ ಗಡಿಪ್ರಾಂತ ಜಿಲ್ಲೆಗಳಲ್ಲಿ ಹಾಗೆಯೇ ಕರ್ನಾಟಕದ ಚಿತ್ರದುರ್ಗ, ಬಳ್ಳಾರಿ, ತುಮಕೂರು, ರಾಯಚೂರು ಮತ್ತು ಕೋಲಾರ ಗಡಿ ಪ್ರಾಂತಗಳಲ್ಲಿ ಹೆಚ್ಚಾಗಿ ನೆಲೆಸಿದ್ದಾರೆ. ಗಡಿನಾಡ ಪ್ರಾಂತಗಳಲ್ಲಿ ನೆಲೆಸಿರುವ ಇವರು ಸಹಜವಾಗಿ ದ್ವಿಭಾಷಿಕರು ಮತ್ತು ಬಹುಭಾಷಿಕರಾಗಿರುವುದಿದೆ. ಗಡಿನಾಡಿನಲ್ಲಿರುವ ಊರುಬೇಡ ಮತ್ತು ಮ್ಯಾಸಬೇಡರು ಭಾಷೆ ಮತ್ತು ಸಂಸ್ಕೃತಿಯಲ್ಲಿ ಹಲವು ವಿಶಿಷ್ಟತೆಗಳನ್ನು ಹೊಂದಿದ್ದಾರೆ. ಬೇಡರ ಈ ಎರಡೂ ಪಂಗಡಗಳಲ್ಲಿ ಜನಪದ ಸಾಹಿತ್ಯವು ವಿಪುಲವಾಗಿ ಹರಿದಾಡುತ್ತಿದೆ. ಮ್ಯಾಸಬೇಡ ಮತ್ತು ಊರು ಬೇಡರಲ್ಲಿ ಜಾನಪದ ಕಲಾ ಪ್ರಕಾರಗಳಾದ ಕೋಲಾಟ, ಬಯಲಾಟ, ಸೋಬಾನೆಪದ, ಭಜನೆಪದ ಮತ್ತು ಬೇಡರ ಕುಣಿತ ಮುಂತಾದವುಗಳನ್ನು ಹಾಡುವುದು ಅಲ್ಲದೇ ಪ್ರದರ್ಶನ ಮಾಡುವುದು ಗಡಿನಾಡ ಪ್ರಾಂತಗಳಲ್ಲಿ ಕಾಣಸಿಗುತ್ತದೆ.

ಕನ್ನಡ-ತೆಲುಗು ಗಡಿನಾಡ ಪ್ರಾಂತಗಳಲ್ಲಿರುವ ಮ್ಯಾಸಬೇಡರು ಮತ್ತು ಊರುಬೇಡರು ಹೆಚ್ಚಾಗಿ ಕೋಲಾಟವನ್ನು ಪ್ರದರ್ಶನ ಮಾಡುವುದು ಕಂಡುಬಂದಿದೆ. ಇವರು ಗಡಿನಾಡಿನಲ್ಲಿ ನೆಲೆಸಿರುವುದರಿಂದ ಕನ್ನಡ-ತೆಲುಗು ಎರಡೂ ಭಾಷೆಯ ಕೋಲುಪದಗಳನ್ನು ಹಾಡುತ್ತಾರೆ.

ಹಾಗೆಯೇ ಎರಡೂ ಭಾಷೆಗಳ ಸಮ್ಮಿಶ್ರ ಕೋಲುಪದಗಳನ್ನು ಹಾಡುವುದಿದೆ. ಇವರ ಕೋಲುಪದಗಳಲ್ಲಿ ಏಕರೂಪದ ಅಂಶಗಳನ್ನು ಕಾಣಬಹುದಾಗಿದೆ.

ಮ್ಯಾಸಬೇಡ ಮತ್ತು ಊರುಬೇಡರ ಗಡಿನಾಡ ಕೋಲುಪದಗಳಲ್ಲಿ ವೈಷಮ್ಯಗಳಿಗಿಂತ ಸಾಮ್ಯತೆಗಳು ಹೆಚ್ಚಾಗಿ ಗೋಚರಿಸುತ್ತವೆ. ಈ ಎರಡೂ ಪಂಗಡಗಳ ಕೋಲಾಟ ಪದಗಳಲ್ಲಿನ ಸಮಾನಾಂಶಗಳನ್ನು ಹೀಗೆ ನಿರೂಪಿಸಬಹುದಾಗಿದೆ.

ಪ್ರಾರ್ಥನಾ ಗೀತೆಗಳು
ಶೃಂಗಾರ ಗೀತೆಗಳು
ಮುಕ್ತಾಯದ ಗೀತೆಗಳು

**ಸ್ತುತಿ ಗೀತೆಗಳು**

ಗಡಿನಾಡ ಪ್ರಾಂತಗಳಲ್ಲಿ ನೆಲೆಸಿರುವ ಪ್ರತಿ ಸಮುದಾಯವೂ ಕೂಡ ಪ್ರಾರ್ಥನಾ ಗೀತೆಗಳಿಂದ ಕೋಲಾಟ ಪ್ರದರ್ಶನವನ್ನು ಮೊದಲು ಮಾಡುವುದು ಕಂಡುಬರುತ್ತದೆ. ಹಾಗೆಯೇ ಮ್ಯಾಸಬೇಡ ಮತ್ತು ಊರುಬೇಡರ ಕೋಲುಪದಗಳಲ್ಲಿಯೂ ಸಹ ಪ್ರಾರ್ಥನಾ ಹಾಡುಗಳನ್ನು ಹಾಡುವುದರೊಂದಿಗೆ ಕೋಲು ಪ್ರದರ್ಶನ ಮಾಡುವುದಿದೆ. ಈ ಎರಡೂ ಪಂಗಡಗಳಲ್ಲಿ ಪ್ರಾರ್ಥನಾ ಗೀತೆಗಳನ್ನು ಹಾಡುವ ಕಾಲಕ್ಕೆ ವಿಘ್ನ ವಿನಾಶಕನಾದ ಗಣೇಶನನ್ನು ಸ್ತುತಿಸಿ ಅನಂತರ ಇತರೆ ದೇವರುಗಳನ್ನು ಸ್ತುತಿಸುತ್ತಾ ಕೋಲಾಟ ಪ್ರದರ್ಶನವನ್ನು ಮಾಡುವುದು ಕಂಡುಬಂದಿದೆ.

ಊರುಬೇಡ ಸಮುದಾಯದಲ್ಲಿ ಕೋಲಾಟವನ್ನು ಪ್ರದರ್ಶನ ಮಾಡುವ ಕಾಲಕ್ಕೆ ಹಾಡುವಂಥ ಪ್ರಾರ್ಥನಾ ಕೋಲುಪದ –

ಶಿವ ಶಿವ ಮೂರ್ತಿವಿ ಗನನಾಥ
ನುವು ಶಿವುನಿ ಕುಮಾರಡಿವು ಗನನಾಥ
ಯಿದ್ದಿ ನೀದಿ, ಬುದ್ಧಿ ನಾದಿ ಗನವಾಥ
ನಿನ್ನು ಯಿಗಿನೇಶ್ವರುದಂದುರು ಗನನಾಥ
ಸದುವು ನೀದಿ ಸೊಮ್ಮು ನೀದೆ ಗನನಾಥ
ಸರಸ್ವತಿ ನೀಕು ಚಂದಮು ಗನನಾಥ
ತೈಯಕ್ಕು ತಾದಿಮ್ಮಿತಾ

(ವಕ್ತೃ: ಬಸಪ್ಪ, ಉಡೆಗೊಳಂ, ಆದವಾನಿ ತಾಲ್ಲೂಕು, ಕರ್ನೂಲ್ ಜಿಲ್ಲೆ)

ಕೋಲಾಟವನ್ನು ಆರಂಭ ಮಾಡುವ ಕಾಲಕ್ಕೆ ಗಣಸ್ತುತಿ ಮಾಡುವುದರ ಮುಖೇನ ಪ್ರದರ್ಶನವನ್ನು ಮಾಡುತ್ತಾರೆ. ಈ ಗೀತೆಯಲ್ಲಿ ಶಿವ ಅಥವಾ ಈಶ್ವರನ ಮಗನಾದ ಗಣೇಶನನ್ನು ಸ್ತುತಿಸಿರುವುದಿದೆ. ಗಣೇಶನು ವಿದ್ಯೆ ಬುದ್ಧಿಗೆ ಪ್ರಸಿದ್ಧಿ ಪಡೆದವನು. ಅಲ್ಲದೆ ಸರಸ್ವತಿ ಪುತ್ರನು

ಎಂದು ಸ್ತುತಿಸಲಾಗಿದೆ. ಅಲ್ಲದೇ ಕೋಲಾಟವನ್ನು ಪ್ರದರ್ಶನ ಮಾಡುವಾಗ ಯಾವುದೇ ರೀತಿಯ ಅಡೆ-ತಡೆಗಳು ಬಾರದಿರಲಿ ಎಂಬ ಉದ್ದೇಶದಿಂದ ಕೋಲಾಟ ಪ್ರದರ್ಶನ ಮಾಡುವ ಕಾಲಕ್ಕೆ ಗಣಪತಿಯ ಸ್ತುತಿಯನ್ನು ಮಾಡಿರುವುದು ಇದೆ. ಹಾಗೆಯೇ ಬೇಡರ ಮತ್ತೊಂದು ಪಂಗಡವಾದ ಮ್ಯಾಸಬೇಡರು ಕೋಲಾಟ ಪ್ರದರ್ಶನ ಮಾಡುವ ಕಾಲಕ್ಕೆ ಗಣಸ್ತುತಿಯನ್ನು ಮಾಡುತ್ತಾ ಕೋಲಾಟ ಪ್ರದರ್ಶನವನ್ನು ಆರಂಭಿಸುತ್ತಾರೆ.

ಮ್ಯಾಸಬೇಡರು ಕೋಲು ಪ್ರದರ್ಶನ ಮಾಡುವ ಆರಂಭದ ಪ್ರದರ್ಶನಕ್ಕೆ ಹಾಡುವ ಗಣಸ್ತುತಿಯ ಕೋಲುಪದ.

**ತೆಲುಗು-ಕನ್ನಡ ಸಮ್ಮಿಶ್ರ ಕೋಲುಪದ**

ಶರಣಂ ಶರಣಂ ಗಣನಾಥ ನಾನು
ಶೆಲಿಮಿಲಿಗೆ ಹೋಗ್ತಿನಿ ಗಣನಾಥ
ವೀದಿಲೊ ನಿನಗುಟ್ಟಿದೆ ಗಣನಾಥ
ನಿನ್ನು ಈಶ್ವರುಡಂದ್ರೆ ಗಣನಾಥ |೨|

ಬಾಯೊಳ್ಳು ನಿನಗುಟ್ಟಿದೆ ಗಣನಾಥ
ನಿನ್ನು ಬ್ರಹ್ಮದೇವುಡಂದ್ರೆ ಗಣನಾಥ
ಗಿಡುಗೋಳ್ ನಿನಗುಟ್ಟಿದೆ ಗಣನಾಥ
ನಿನ್ನು ಈಶ್ವರುಡಂದ್ರೆ ಗಣನಾಥ
ಕಾಪೊಳ್ಳು ನಿನಗುಟ್ಟಿದೆ ಗಣನಾಥ
ನಿನ್ನು ಕಾಡುಮೇಡು ಅಂದ್ರೆ ಗಣನಾಥ
ಶರಣಂ ಶರಣಂ ಗಣನಾಥ

(ವಕ್ತೃ: ನಿಂಗಪ್ಪ, ಮೇಗಳಹಟ್ಟಿ, ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಈ ಗೀತೆಯು ಗಣಸ್ತುತಿಯ ಪ್ರಕಾರಕ್ಕೆ ಸೇರಿದೆ. ಈ ಹಾಡಿನಲ್ಲಿ ಕನ್ನಡ-ತೆಲುಗು ಎರಡೂ ಭಾಷೆಗಳು ಸೇರಿ ದ್ವಿಭಾಷಿಕತೆಯನ್ನು ಹೊಂದಿರುವುದು ಇದೆ. ಈ ಕೋಲುಪದವನ್ನು ಮ್ಯಾಸಬೇಡರು ಕೋಲಾಟವನ್ನು ಪ್ರದರ್ಶನ ಮಾಡುವ ಪೂರ್ವದಲ್ಲಿ ಹಾಡುತ್ತಾರೆ. ಇವರು ಕನ್ನಡ - ತೆಲುಗು ಎರಡೂ ಭಾಷೆಗಳನ್ನು ಏಕಕಾಲದಲ್ಲಿ ಬಳಸುವುದರಿಂದ ಇವರು ಹಾಡುವ ಹಾಡುಗಳಲ್ಲಿಯೂ ಎರಡೂ ಭಾಷೆಗಳು ಮಿಶ್ರವಿರುವ ಕೋಲುಪದಗಳು ಗಡಿನಾಡ ಪ್ರಾಂತಗಳಲ್ಲಿ ಗೋಚರಿಸುತ್ತವೆ. ಅಲ್ಲದೇ ಈ ಹಾಡಿನಲ್ಲಿ ಕೆಲವು ಸಮುದಾಯಗಳ ಹೆಸರುಗಳನ್ನು ಪ್ರಸ್ತಾಪಿಸಿರುವುದಿದೆ. ಅವುಗಳು ಬಾಯೊಳ್ಳು(ಬೇಡರು), ಕಾಪೊಳ್ಳು(ಒಕ್ಕಲಿಗರು) ಈ ಎರಡು ಸಮುದಾಯದವರು ಗಣಪತಿಯನ್ನು ಸ್ತುತಿಸುವ ಚಿತ್ರಣವನ್ನು ಈ ಕೋಲುಪದದಲ್ಲಿ ನೀಡಲಾಗಿದೆ. ಬೇಡರು ಗಣೇಶನನ್ನು ಬ್ರಹ್ಮ ದೇವರು ಎಂದು ಸ್ತುತಿಸಿದರೆ, ಒಕ್ಕಲಿಗರು ಆತನನ್ನು ಕಾಡುಮೇಡು ಎಂದು ತಿರಸ್ಕರಿಸುವುದಿದೆ.

ಹಾಗೆಯೇ ಈ ಕೋಲುಪದವು ಕನ್ನಡ-ತೆಲುಗು ಗಡಿಪ್ರಾಂತವಾದ ಮೊಳಕಾಲ್ಮೂರಿನಲ್ಲಿ ಮ್ಯಾಸಬೇಡರ ಸಮುದಾಯಕ್ಕೆ ಸೇರಿದವರು ಹಾಡಿರುವುದಾಗಿದೆ. ಹೀಗೆ ಗಡಿನಾಡ ಪ್ರಾಂತಗಳಲ್ಲಿ ನೆಲೆಸಿರುವ ಮ್ಯಾಸಬೇಡ ಮತ್ತು ಊರುಬೇಡರು ಕೋಲಾಟ ಪ್ರದರ್ಶನ ಮಾಡುವ ಕಾಲಕ್ಕೆ ಪ್ರಾರ್ಥನಾ ಗೀತೆಯಿಂದ ಮೊದಲು ಮಾಡುವುದು ಕಂಡುಬಂದಿದೆ. ಹಾಗೆಯೇ ಈ ಎರಡೂ ಪಂಗಡಗಳಲ್ಲಿಯೂ ಏಕಕಾಲಕ್ಕೆ ಕನ್ನಡ-ತೆಲುಗು ಎರಡೂ ಭಾಷೆಗಳನ್ನು ಮಾತನಾಡುವುದರಿಂದ ಸಮ್ಮಿಶ್ರ ಮಾದರಿಯ ಕೋಲುಪದಗಳು ಸಿಗುತ್ತವೆ. ಪ್ರತಿ ಸಮುದಾಯದಲ್ಲಿಯೂ ಕೋಲಾಟ ಆರಂಭ ಮಾಡುವಾಗ ಗಣಸ್ತುತಿಯ ಪದಗಳಿಗೆ ಕೋಲಾಟ ಪ್ರದರ್ಶನವನ್ನು ಮಾಡಿ ಅನಂತರ ಶೃಂಗಾರ, ಹಾಸ್ಯ, ಚಾರಿತ್ರಿಕ ಮತ್ತಿತರ ವಸ್ತುವನ್ನು ಒಳಗೊಂಡಿರುವ ಹಾಡುಗಳಿಗೆ ಪ್ರದರ್ಶನವನ್ನು ಮುಂದುವರೆಸುವುದಿದೆ.

**ಪ್ರಣಯ ಅಥವಾ ಶೃಂಗಾರದ ಗೀತೆಗಳು**

ಊರುಬೇಡ ಮತ್ತು ಮ್ಯಾಸಬೇಡರ ಕೋಲಾಟಪದಗಳನ್ನು ಹಾಡುವ ಆರಂಭದಲ್ಲಿ ಗಣಸ್ತುತಿಯ ಗೀತೆಯನ್ನು ಹಾಡುವುದು ಕಡ್ಡಾಯವಾಗಿರುತ್ತದೆ. ಅನಂತರ ಹಾಸ್ಯ, ಶೃಂಗಾರ, ಐತಿಹಾಸಿಕ ಮತ್ತು ಸಾಮಾಜಿಕ ವಿಡಂಬನೆಯನ್ನು ಮಾಡುವಂಥ ಕೋಲುಪದಗಳನ್ನು ಹಾಡುವುದು ಮತ್ತು ಪ್ರದರ್ಶನವನ್ನು ಮುಂದುವರಿಸುವುದು ಕಾಣಸಿಗುತ್ತದೆ. ಈ ಎರಡೂ ಪಂಗಡಗಳ ಕೋಲುಪದಗಳಲ್ಲಿ ಹೆಚ್ಚಾಗಿ ಶೃಂಗಾರ ಅಥವಾ ಪ್ರಣಯಕ್ಕೆ ಸಂಬಂಧಿಸಿದ ಹಾಡುಗಳನ್ನು ಸಾಮಾನ್ಯವಾಗಿ ಹಾಡುತ್ತಾರೆ. ಶೃಂಗಾರಕ್ಕೆ ಸಂಬಂಧಿಸಿದ ಹಾಡುಗಳಲ್ಲಿ ಹದಿಹರೆಯದ ಹುಡುಗ - ಹುಡುಗಿಯರ ಪ್ರಣಯ, ಗಂಡ - ಹೆಂಡತಿಯರ ಸರಸ-ಸಲ್ಲಾಪ, ಗಂಡನನ್ನು ಕಾಣದ ಹಾಗೆ ಪರಪುರುಷರನ್ನು ಕೂಡುವ ಹೆಣ್ಣುಗಳ ಅಕ್ರಮ ಸಂಬಂಧದ ಪ್ರಣಯ ಹೀಗೆ ಪ್ರಣಯ ಅಥವಾ ಶೃಂಗಾರಕ್ಕೆ ಸಂಬಂಧಿಸಿದ ಕೋಲುಪದಗಳಲ್ಲಿ ವಿಭಿನ್ನ ಮಾದರಿಯ ಪ್ರಣಯವನ್ನು ಅನಾವರಣ ಮಾಡುತ್ತವೆ.

**ಊರುಬೇಡರ ಕೋಲುಪದ**

ಹಳ್ಳದಾಗಳ ಅರತಿ ಕುಂತಿರೋ
ಗರತಿ ತೆಗಿಯೆ ತೆಗಿಯೆ ನಿನ್ನ ಕೊಡ
ಹತ್ತು ಕೊಡಗಳೊಂದು ಹರ್ತಿಲಿ
ಬರುತಾವೆ ಸಿಪ್ಪುತಾರೆ ಕೈಗೊಡ
ಸಿಪ್ಪು ಕೇಳುವ ಸುಗುಣ ಸುಂದರ
ಯಾವೂರೋ ಎಲೆ ರಮಣ
ಗೊತ್ತಿಲ್ಲವೇನೆ ಮುಮ್ಮಡ್ಲಾರು
ಹುಡುಗರು ಕೋಲಿನಲ್ಲಿ ಚತುರ
ಗೊತ್ತಿಲ್ಲವೇನೆ ಮುಮ್ಮುಡ್ಲಾರು
ಹುಡುಗರು ಕೋಲಿನಲ್ಲಿ ಚತುರ

ಬಿಕ್ಕಿ ವಿಕ್ಕಿ ನಡಿ ನನ್ನ ನೆಟ್ಟಗಾರು
ಹುಡುಗ ನೀರು ಚೆಲ್ಲಾವೆ ಶಾಲುಗೆ
ನಿಂದೇನು ಸಲಿಗೋ ಹಿಂದಕೆ
ಸರಿಯೋ ತೆಗೆದೊಡಿದೆನು ಮಾರಿಗೆ

(ವಕ್ತೃ: ಗಾದಿಲಿಂಗಪ್ಪ, ಹೊಳಗುಂದಿ, ಆಲೂರು ತಾಲ್ಲೂಕು, ಕರ್ನೂಲ್ ಜಿಲ್ಲೆ)

ಈ ಕೋಲುಪದವು ಶೃಂಗಾರ ಅಥವಾ ಪ್ರಣಯದ ವಸ್ತುವನ್ನು ಒಳಗೊಂಡಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಈ ಹಾಡಿನಲ್ಲಿ ಊರುಬೇಡರ ಒಳಪಂಗಡವಾದ ಮುಮ್ಮಡ್ಲಾರು ಎನ್ನುವಂಥ ಬೆಡಗನ್ನು ಉಲ್ಲೇಖಿಸಿರುವುದು ಕಂಡುಬಂದಿದೆ. ಮುಮ್ಮಡ್ಲಾರು ಬೆಡಗಿನ ಹುಡುಗನು, ನೀರಿಗೆ ಕೊಡವನ್ನು ತೆಗೆದುಕೊಂಡು ಹೋಗುತ್ತಿರುವ ಹುಡುಗಿಯನ್ನು ಸುಖಾಸುಮ್ಮನೆ ಕೆಣಕಿ ಮಾತನಾಡಿಸಿರುವುದಿದೆ. ಆಗ ಆ ಹುಡುಗಿ ಯಾವೂರೋ ನಿಂದು ಎಂದು ವಿಚಾರಿಸಿದಾಗ ಅವನು ಗೊತ್ತಿಲ್ಲವೇನೆ 'ಮುಮ್ಮುಡ್ಲಾರು ಹುಡುಗರು ಕೋಲಿನಲ್ಲಿ ಚತುರ' ಎಂದು ಅವಳಿಗೆ ಹೇಳಿ ಸ್ಪಷ್ಟಪಡಿಸುತ್ತಾನೆ. ಹೀಗೆ ಒಬ್ಬರಿಗೊಬ್ಬರು ಪರೋಕ್ಷ ಮಾತಿನ ಚಾಟಿಯ ಮೂಲಕವೇ ಪ್ರಣಯದಾಟವನ್ನು ಆಡುತ್ತಿರುವುದು ಈ ಕೋಲುಪದದಲ್ಲಿ ಕಂಡುಬಂದಿದೆ. ಮುಮ್ಮುಡ್ಲಾರು ಹುಡುಗನು ತೀರಾ ಸಲಿಗೆಯಿಂದ ಅವಳ ಹತ್ತಿರ ಸುಳಿದಾಡಿದಾಗ ನಿನ್ನದು ಯಾತರ ಸುಲಿಗೆಯೋ ಹಿಂದಕ್ಕೆ ಸರಿಯೋ ತೆಗೆದೊಡಿದೆನು ಮಾರಿಗೆ ಎಂದು ಮುಮ್ಮುಡ್ಲಾರು ಹುಡುಗನನ್ನು ಬಯ್ಯುತ್ತಾ ಇರುವುದು ಸಹ ಗೋಚರಿಸುತ್ತದೆ. ಹೀಗೆ ಕೋಲುಪದಗಳಲ್ಲಿ ಪ್ರಣಯದ ಅಭಿವ್ಯಕ್ತಿಯನ್ನು ಹೆಚ್ಚಾಗಿ ಪರೋಕ್ಷವಾಗಿಯೇ ವ್ಯಕ್ತಪಡಿಸುತ್ತಿರುವುದು ಕಂಡುಬಂದಿದೆ. ಇದೇ ಮಾದರಿಯ ಹಾಡೊಂದು ಮ್ಯಾಸಬೇಡರು ಹಾಡುವ ಕೋಲುಪದಗಳಲ್ಲಿಯೂ ಹರಿದಾಡುತ್ತಿದೆ. ಕೋಲುಪದದ ಸಾಹಿತ್ಯದಲ್ಲಿ ಕೆಲವೊಂದು ಮಾರ್ಪಾಡುಗಳನ್ನು ಮಾಡಿಕೊಂಡಿರುವುದು ಬಿಟ್ಟರೆ ಉಳಿದಂತೆ ಎರಡು ಹಾಡುಗಳನ್ನು ಹಾಡುವಂಥ ಧಾಟಿ ತಾಳ, ಲಯ, ಗತಿಗಳು ಎಲ್ಲವೂ ಒಂದೇ ತೆರನಾಗಿರುವುದು ಕಂಡುಬಂದಿದೆ.

## ಮ್ಯಾಸಬೇಡರ ಕೋಲುಪದ

ಹಳ್ಳದಾಗಳ ಅರತಿ ಕುಂತಿರೋ
ಗರತಿ ತೆಗಿ ತೆಗಿ ನಿನ್ನ ಕೊಡ
ಬರ್ತಿ ಕೊಡಗಳೊಂದು ಹರ್ತೀಲಿ
ಬರುತಾವೆ ಸಿಪ್ಪೆ ತಾರೆ ಕೈ ಕೊಡ
ಸಿಪ್ಪೆ ಕೇಳಲಿಕ್ಕೆ ಯಾವುರೋ
ಚೆಲುವ ಚೆನ್ನಿಗ
ಗೊತ್ತಿಲವೇನೆ ಪಾಮುಡ್ಲಾರು ಹುಡುಗರು
ಕೋಲಿನಲ್ಲಿ ಬಲು ಚಮತ್ಕಾರ
ನೀರು ತುಂಬುತಾ ನಿಜವುಳ್ಳ

ಗರತಿ ಯಾವೊಲ್ಲೆ ನಿಮ್ಮ ಮನೆ
ವಾರೆ ಜಪ್ಪರ ಒಂದೀರೆಯ ಬಳ್ಳಿ
ಗಂಗಿ ಬಾಗಿಲು ಮನೆ |೨|

ಊರಕೆ ಹೋಗುತಾ ಎಡಕೆ
ತಿರುಗುತಾ ಈರಭದ್ರ ದೇವರ
ಕಾಯ ಒಡೆದು ಕೈಯ ಮುಗಿದು
ಬೇಡು ತಾಳೆ ಮಕ್ಕಳ ಫಲ
ಥಥೈ ಜಂತಕಾ

(ಹಾಡಿದವರು: ಚಂದ್ರಪ್ಪ, ಮಾಕನಡಕು, ಕೂಡ್ಲಿಗಿ ತಾಲ್ಲೂಕು)

ಈ ಕೋಲುಪದವು ಊರುಬೇಡರ ಕೋಲುಪದದ ಮಾದರಿಯಲ್ಲಿಯೇ ಆರಂಭವಾಗಿದೆ. ಅನಂತರ ಪದದ ಮಧ್ಯದ ಸಾಹಿತ್ಯದಲ್ಲಿ ವ್ಯತ್ಯಾಸವಾಗಿ ಕೆಲವೊಂದು ಮಾರ್ಪಾಡುಗಳಾಗಿರುವುದಿದೆ. ಊರುಬೇಡರ ಕೋಲುಪದದಲ್ಲಿ ಊರುಬೇಡರ 'ಮುಮ್ಮುಡ್ಲಾರು' ಬೆಡಗಿನ ಕುರಿತಾಗಿ ಪ್ರಸ್ತಾಪ ಬಂದರೆ ಮ್ಯಾಸಬೇಡರ ಕೋಲುಪದದಲ್ಲಿ ಮ್ಯಾಸಬೇಡರ ಬೆಡಗಾದ 'ಪಾಮುಡ್ಲಾರು' ಎನ್ನುವ ಬೆಡಗಿನ ಕುರಿತು ಪ್ರಸ್ತಾಪಿಸಿರುವುದಿದೆ. ಈ ಗೀತೆಯು ಶೃಂಗಾರದ ವಸ್ತುವನ್ನು ಒಳಗೊಂಡಿದೆ. ಈ ಹಾಡಿನಲ್ಲಿ ಮದುವೆಯಾದ ಒಬ್ಬ ಸ್ತ್ರೀಯು ಕೊಡವನ್ನಿಡಿದು ನೀರಿಗೆ ಹೋಗುವಂಥ ಸಂದರ್ಭದಲ್ಲಿ ಪಾಮುಡ್ಲಾರು ಹುಡುಗನು ಅವಳನ್ನು ಪ್ರಣಯ ಅಥವಾ ಶೃಂಗಾರದಿಂದ ಮಾತನಾಡಿಸಿರುವುದು ಕಾಣುತ್ತದೆ. ಅನಂತರ ನಿನ್ನ ಮನೆ ಎಲ್ಲಿ ಬರುತ್ತೆ ಎಂದು ಪಾಮುಡ್ಲಾರು ಹುಡುಗನು ಕೇಳಿದಾಗ ಅವಳು ಅದಕ್ಕೆ ಉತ್ತರವಾಗಿ ಕೆಲವೊಂದು ಗುರುತುಗಳನ್ನು ಹೀಗೆ ಹೇಳುತ್ತಾಳೆ. ವಾರೆ-ಜಪ್ಪರಕ್ಕೆ ಹಿರೇಕಾಯಿಯ ಬಳ್ಳಿ ಹಬ್ಬಿಕೊಂಡಿರುವುದು ಮತ್ತು ಗಂಗೆ ಬಾಗಿಲು ಇರುವುದು ಯಾವುದೋ ಅದೇ ನಮ್ಮನೆ ಎಂದು ಒಗಟಿನ ರೂಪದಲ್ಲಿ ಹೇಳುತ್ತಾಳೆ. ಹಾಗೆಯೇ ಊರ ಒಳಗಡೆ ಹೋಗಿ ಎಡಕ್ಕೆ ತಿರುಗಿ ವೀರಭದ್ರದೇವರಿಗೆ ಕಾಯಿ ಒಡೆದು ಪೂಜೆ ಮಾಡಿ ಕೈಮುಗಿದು ಮಕ್ಕಳ ಫಲವನ್ನು ಬೇಡುತ್ತಾಳೆ. ಮದುವೆಯಾಗಿ ಹಲವು ವರ್ಷಗಳ ಕಾಲ ಮಕ್ಕಳಿಲ್ಲದ ನೋವು ಅನುಭವಿಸಿದ ಹೆಣ್ಣೊಬ್ಬಳು ಮಕ್ಕಳಿಗಾಗಿ ದೇವರ ಮೊರೆ ಹೋಗಿರುವುದು ಈ ಕೋಲುಪದದಲ್ಲಿ ಸ್ಪಷ್ಟವಾಗಿ ಗೋಚರವಾಗುತ್ತದೆ.

ಊರುಬೇಡ ಮತ್ತು ಮ್ಯಾಸಬೇಡರ ಈ ಎರಡೂ ಕೋಲುಪದಗಳು ಶೃಂಗಾರದ ವಸ್ತುವನ್ನು ಒಳಗೊಂಡಿರುವುದು ಗೋಚರಿಸುತ್ತದೆ. ಎರಡೂ ಹಾಡುಗಳಲ್ಲಿ ಆಯಾ ಪಂಗಡಗಳಲ್ಲಿನ ಬೆಡಗನ್ನು ಪ್ರಸ್ತಾಪ ಮಾಡಲಾಗಿದೆ. ಹಾಗೆಯೆ ವಿವಾಹಿತ ಹೆಣ್ಣೊಬ್ಬಳ ಜೊತೆಗೆ ಸರಸದ ಮಾತುಕತೆಯೂ ಎರಡೂ ಹಾಡುಗಳಲ್ಲಿ ಬಂದಿದೆ. ಎರಡೂ ಹಾಡುಗಳಲ್ಲಿರುವ ವ್ಯತ್ಯಾಸವೆಂದರೆ ಊರುಬೇಡರ ಕೋಲುಪದದಲ್ಲಿ ವಿವಾಹಿತ ಹೆಣ್ಣು ಮಕ್ಕಳ ಫಲವನ್ನು ಬೇಡುತ್ತಿರುವುದು ಕಂಡುಬಂದಿಲ್ಲ. ಆದರೆ ಮ್ಯಾಸಬೇಡರು ಹಾಡಿದ ಗೀತೆಯಲ್ಲಿ ಮಕ್ಕಳ ಫಲ ನೀಡಬೇಕೆಂದು ವೀರಭದ್ರ ದೇವರ

ಮೊರೆ ಹೋಗಿರುವುದು ಕಾಣಸಿಗುತ್ತದೆ. ಹೀಗೆ ಗಡಿನಾಡಿನ ಪ್ರಾಂತಗಳಲ್ಲಿ ನೆಲೆಸಿರುವ ಬೇಡರ ಈ ಎರಡು ಪಂಗಡಗಳ ಕೋಲುಪದಗಳಲ್ಲಿ ಒಂದೇ ರೀತಿಯ ವಸ್ತು, ಭಾಷಿಕವಾಗಿ ದ್ವಿಭಾಷಿಕತೆ, ಬಹುಭಾಷಿಕತೆ ಮತ್ತು ಸಾಂಸ್ಕೃತಿಕವಾಗಿ ಗಡಿನಾಡ ಪ್ರಾಂತಗಳಲ್ಲಿ ನೆಲೆಸಿರುವ ಎರಡು ಗಡಿಭಾಗದ ದೇವರುಗಳನ್ನು ಈ ಎರಡೂ ಪಂಗಡದವರು ಪೂಜಿಸುವುದು ಮತ್ತು ಆರಾಧಿಸುವುದು ಕಂಡು ಬರುತ್ತದೆ. ಹಾಗಾಗಿ ಮ್ಯಾಸಬೇಡ ಮತ್ತು ಊರುಬೇಡರು ಕೋಲಾಟವು ಸೇರಿದಂತೆ ಬಯಲಾಟ, ಸೋಬಾನೆ, ಭಜನೆ ಪದ ಮುಂತಾದ ಜನಪದ ಕಲೆಗಳಲ್ಲಿ ಏಕರೂಪದ ಸಮಾನವಾದ ಅಂಶಗಳು ಒಳಗೊಂಡಿರುವುದನ್ನು ಕಾಣಬಹುದಾಗಿದೆ. ಅಲ್ಲದೇ ಗಡಿನಾಡ ಪ್ರಾಂತಗಳಲ್ಲಿ ಮ್ಯಾಸಬೇಡ ಮತ್ತು ಊರುಬೇಡರ ಬಾಂಧವ್ಯ ಉತ್ತಮ ರೀತಿಯಲ್ಲಿರುವುದು ಗೋಚರಿಸುತ್ತದೆ.



ಅಧ್ಯಾಯ : ಆರು

# ಗಡಿನಾಡ ಕೋಲಾಟ ಪದಗಳ ವೈಶಿಷ್ಟ್ಯಗಳು

ಅಧ್ಯಾಯ : ಆರು

# ಗಡಿನಾಡ ಕೋಲಾಟ ಪದಗಳ ವೈಶಿಷ್ಟ್ಯತೆಗಳು

**ಭಾ**ರತವು ಹಲವು ಜಾತಿ, ಧರ್ಮ, ರಾಜ್ಯಗಳಿಂದ ಒಟ್ಟುಗೂಡಿರುವ ಗಣರಾಜ್ಯ. ಅದು ತನ್ನ ವಿಸ್ತಾರತೆಯನ್ನು ರಾಜ್ಯಗಳೊಂದಿಗೆ ಹಂಚಿಕೊಂಡಿದೆ. ಹಾಗೆಯೇ ಒಂದು ರಾಜ್ಯವು ಹಲವು ರಾಜ್ಯಗಳೊಂದಿಗೆ ತನ್ನ ಗಡಿಯನ್ನು ಹಂಚಿಕೊಂಡಿರುತ್ತದೆ. ಗಡಿಯ ವಿಚಾರದಲ್ಲಿ ಕೆಲವು ರಾಜಕೀಯ ಸಮಸ್ಯೆಗಳು ಮತ್ತು ಭೂಗಡಿಗೆ ಸಂಬಂಧಿಸಿದ ಸಮಸ್ಯೆಗಳು ಹಾಗೂ ಜಲವಿವಾದಗಳಿರುತ್ತವೆ. ಇವೆಲ್ಲ ಭೌಗೋಳಿಕ ಸಮಸ್ಯೆಗಳೆಂದು ತೋರಿದರೆ ಸಾಂಸ್ಕೃತಿಕ ವಿಚಾರಕ್ಕೆ ಬಂದಾಗ ಈ ಎಲ್ಲ ಸಮಸ್ಯೆಗಳು ಮುಚ್ಚಿ ಹೋಗುವುದು ಕಾಣಬಹುದು. ಭಾರತವು ಹಲವು ಧರ್ಮ, ಜನಾಂಗ, ಸಮುದಾಯ, ಭಾಷೆ, ಸಂಸ್ಕೃತಿಗಳ ನೆಲೆವೀಡು ಎಂಬುದು ಈಗಾಗಲೇ ವಿದಿತವಾಗಿದೆ. ಹಾಗೆಯೇ ಭಾರತದ ಒಳಗೆ ಇರುವ ರಾಜ್ಯಗಳ ಗಡಿ ಪ್ರಾಂತ ಪರಿಸರವು ಸಹ ಹಲವು ಭಾಷೆ, ಜನಾಂಗ, ಧರ್ಮ, ಸಂಸ್ಕೃತಿಗಳ ನೆಲೆವೀಡು ಎಂದರೆ ಅತಿಶಯೋಕ್ತಿಯಾಗಲಾರದು.

ಗಡಿನಾಡು ಎನ್ನುವುದು ಹಲವು ವಿಶಿಷ್ಟತೆಗಳಿಂದ ಕೂಡಿದ ದ್ವಿಭಾಷಿಕ ಅಥವಾ ಬಹುಭಾಷಿಕ ಪ್ರದೇಶವಾಗಿರುತ್ತದೆ. ಒಂದು ರಾಜ್ಯದ ಗಡಿಭಾಗಕ್ಕೆ ಹೊಂದಿಕೊಂಡಿರುವ ಬೇರೆ ಬೇರೆ ರಾಜ್ಯಗಳ ಗಡಿ ಪ್ರಾಂತಗಳನ್ನು ಸೇರಿಸಿಕೊಂಡು ಗಡಿನಾಡು ಎಂದು ಕರೆಯುವುದು ವಾಡಿಕೆ. ಗಡಿ ಪ್ರಾಂತಗಳು ಭೌಗೋಳಿಕವಾಗಿ ಕಾಲದಿಂದ ಕಾಲಕ್ಕೆ ಸಂಬಂಧಾನುಸಾರ ಬದಲಾವಣೆ ಆಗುತ್ತಿರುತ್ತದೆ. ೧೮೪೯ರಲ್ಲಿ ಬ್ರಿಟೀಷರ ಆಳ್ವಿಕೆಯ ಕಾಲದಲ್ಲಿ ಕರ್ನಾಟಕದ ಮೈಸೂರು ರಾಜ್ಯದ ಬಳ್ಳಾರಿ ಪ್ರಾಂತ್ಯವು ಮದ್ರಾಸ್ ಸರ್ಕಾರಕ್ಕೆ ಸೇರಿತ್ತು ಎಂಬುದು ಚರಿತ್ರೆಯಿಂದ ತಿಳಿದುಬರುವ ಸಂಗತಿ. ಇದಕ್ಕೂ ಮೊದಲು ಕನ್ನಡ ನಾಡಿನ ಗಡಿ ವಿಚಾರ ಕುರಿತಾಗಿ ಕ್ರಿ.ಶ.ಸು. ೯ನೇ ಶತಮಾನದ ಕನ್ನಡದ ಮೊದಲ ಅಲಂಕಾರ ಕೃತಿ ಎನಿಸಿಕೊಂಡಿರುವ ಕವಿರಾಜಮಾರ್ಗದಲ್ಲಿ ಕನ್ನಡ ಗಡಿ ವಿಚಾರವಾಗಿ ಪ್ರಸ್ತಾಪ ಮಾಡಿರುವುದನ್ನು ಕಾಣಬಹುದು. ಶ್ರೀ ವಿಜಯನು ಕನ್ನಡ ಮಾತನಾಡುವ ಪ್ರದೇಶವನ್ನು ಕನ್ನಡನಾಡಿನ ಗಡಿ ವಿಚಾರವನ್ನು ಈ ರೀತಿ ಪ್ರಸ್ತಾಪ ಮಾಡಿದ್ದಾರೆ.

"ಕಾವೇರಿಯಿಂದಮಾ ಗೋದಾವರಿವರಮಿರ್ಪ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ"(ಶಾಮರಾಯ ತ.ಸು.; ೨೦೧೦; ಪುಟ ೬-೭) ಎಂಬ ಆತನ ಹೇಳಿಕೆಯಿಂದ ಉತ್ತರಕ್ಕೆ

ಗೋದಾವರಿಯೂ ದಕ್ಷಿಣಕ್ಕೆ ಕಾವೇರಿಯೂ ಕನ್ನಡ ನಾಡಿನ ಗಡಿಗಳಾಗಿದ್ದವೆಂದು ತಿಳಿದುಬರುತ್ತದೆ. ಕವಿರಾಜಮಾರ್ಗಕಾರನ ಹೇಳಿಕೆಯನ್ನು ಗಮನಿಸಿದರೆ ಕನ್ನಡನಾಡು ತುಂಬಾ ವೈಶಾಲ್ಯತೆಯಿಂದ ಕೂಡಿತ್ತು ಹಾಗೂ ಗೋದಾವರಿ ನದಿಯಿಂದ ಕಾವೇರಿ ನದಿಯವರೆಗೂ ತನ್ನ ಅಂದರೆ ಕನ್ನಡ ನಾಡಿನ ಭೌಗೋಳಿಕ ಗಡಿಯನ್ನು ರೂಪಿಸಿಕೊಂಡಿತ್ತು ಎಂಬುದಾಗಿ ತಿಳಿಯುತ್ತದೆ. ಹೀಗೆ ವಿಶಾಲತೆಯನ್ನು ಒಳಗೊಂಡಿದ್ದಂತಹ ಕನ್ನಡ ನಾಡು ಬರು ಬರುತ್ತಾ ಚದುರಿದಂತೆ ಕಾಣುತ್ತದೆ. ಕನ್ನಡ ನಾಡು ಕಾಲದ ಮಿತಿಗೆ ಸಿಕ್ಕಿ ಭೌಗೋಳಿಕ ಗಡಿ ಬದಲಾವಣೆಯಾಗಿದೆ. ಭಾಷಾವಾರು ಪ್ರಾಂತಗಳ ವಿಂಗಡಣೆಯಾಗುವುದಕ್ಕೂ ಮೊದಲು ೧೯ನೇ ಶತಮಾನದಲ್ಲಿ ಕನ್ನಡ ಮಾತನಾಡುವ ಬಳ್ಳಾರಿ, ದಕ್ಷಿಣ ಕನ್ನಡ ಪ್ರದೇಶಗಳು, ಮದ್ರಾಸ್ ಪ್ರಾಂತಕ್ಕೆ ಒಳಪಟ್ಟಿದ್ದವು. ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಅಲೂರು, ಹೊಳಗುಂದ ಮತ್ತು ಅನಂತಪುರಂ ಜಿಲ್ಲೆಯ ರಾಯದುರ್ಗ ಮತ್ತು ಕಲ್ಯಾಣದುರ್ಗಗಳಲ್ಲಿ ಕನ್ನಡ ಹೆಚ್ಚಾಗಿ ಮಾತಾಡುತ್ತಿದ್ದರಿಂದಾಗಿ ಈ ಪ್ರದೇಶಗಳು ಕನ್ನಡ ನಾಡಿನ ವ್ಯಾಪ್ತಿಗೆ ಸೇರ್ಪಡೆಗೊಂಡಿದ್ದವು.

ಭಾರತವು ೧೯೫೬ರಲ್ಲಿ ಭಾಷಾವಾರು ವಿಂಗಡಣೆಯಾದ ನಂತರ ಕನ್ನಡ ಮಾತಾಡುವ ಜನರು ಬಳ್ಳಾರಿಯಲ್ಲಿ ಹೆಚ್ಚಾಗಿರುವುದರಿಂದಾಗಿ ಬಳ್ಳಾರಿಯನ್ನು ಮೈಸೂರಿಗೆ ಸೇರಿಸಲಾಯಿತು. ವಿಪರ್ಯಾಸವೆಂದರೆ ಕನ್ನಡ, ತೆಲುಗನ್ನು ಸಮಪ್ರಮಾಣದಲ್ಲಿ ಮಾತನಾಡುವ ಪ್ರಸ್ತುತ ಆಂಧ್ರಕ್ಕೆ ಸೇರ್ಪಡೆ ಮಾಡಿರುವ ಆಲೂರು, ಹೊಳಗುಂದ, ಆದೋನಿ, ರಾಯದುರ್ಗ, ಕಲ್ಯಾಣದುರ್ಗಗಳನ್ನು ಸಂಪೂರ್ಣವಾಗಿ ಆಂಧ್ರಪ್ರದೇಶಕ್ಕೆ ಸೇರ್ಪಡೆ ಮಾಡಲಾಯಿತು. ಹೀಗೆ ಗಡಿ ಸಮಸ್ಯೆಗಳು ಒಂದಲ್ಲ ಒಂದು ರೀತಿಯಲ್ಲಿ ರಾಜಕೀಯವಾಗಿ ಮತ್ತು ಆರ್ಥಿಕವಾಗಿ ಎಂದಿಗೂ ತೆರೆದುಕೊಂಡಿರುತ್ತವೆ. ಆದರೆ ಕವಿರಾಜಮಾರ್ಗಕಾರ ಹೇಳಿದ ಕನ್ನಡ ನಾಡಿನ ವಿಸ್ತಾರತೆಗೂ ಮತ್ತು ೧೯೫೬ರಲ್ಲಿ ಭಾಷಾವಾರು ವಿಂಗಡಣೆಯ ವಿಶಾಲ ಕರ್ನಾಟಕವನ್ನು ಅವಲೋಕಿಸಿ ನೋಡಿದಾಗ ಕರ್ನಾಟಕಕ್ಕೆ ಗಡಿಯ ವಿಚಾರದಲ್ಲಿ ರಾಜಕೀಯ ಹಿನ್ನಡೆಯಾಗಿದೆ ಎಂಬುದು ಮೇಲ್ನೋಟಕ್ಕೆ ತಿಳಿದುಬರುವ ಕಟುವಾಸ್ತವವಾಗಿದೆ. ರಾಜಕೀಯವಾಗಿ ಮತ್ತು ಆರ್ಥಿಕವಾಗಿ ಭೌಗೋಳಿಕ ಭೂ ಗಡಿಯ ವಿಚಾರದಲ್ಲಿ ನೀರಿಗಾಗಿ ಜಲವಿವಾದಗಳು ರಾಜ್ಯ - ರಾಜ್ಯಗಳೊಡನೆ ಅಂತಃಕಲಹಗಳು ಏರ್ಪಡುವ ಹಾಗೆ ಮಾಡಿರುವುದುಂಟು. ಆದರೆ ಅಂತಹ ಗಡಿಗಳ ವಿಚಾರಕ್ಕೆ ಬಂದಾಗ ಗಡಿ ಸಂಸ್ಕೃತಿಯನ್ನು ಅವಲೋಕಿಸಿದರೆ ರಾಜಕೀಯವಾಗಿ ಭೂ ಗಡಿ ಸಮಸ್ಯೆಯೊಂದನ್ನು ಹೊರತುಪಡಿಸಿದರೆ ಇಲ್ಲಿ ನೆಲೆಸಿರುವ ಜನರಲ್ಲಿ ಜಾತ್ಯತೀತವಾಗಿ ಸಾಂಸ್ಕೃತಿಕವಾಗಿ ಪ್ರತಿಯೊಂದು ಕಲೆ, ಆಚರಣೆ, ಕ್ರೀಡೆ ರೂಢಿ, ಸಂಪ್ರದಾಯಗಳಲ್ಲಿ ಸಾಮಾನ್ಯವಾಗಿ ಹೆಚ್ಚಾಗಿ ಸಾಮ್ಯತೆಗಳು ಗೋಚರಿಸುತ್ತವೆ.

ಕರ್ನಾಟಕ - ಆಂಧ್ರ ಗಡಿಪ್ರಾಂತಗಳ ಕಲೆ - ಸಂಪ್ರದಾಯಗಳಲ್ಲೂ ಸಮಾನಾಂಶಗಳು ಸಾಮ್ಯತೆ ಮತ್ತು ಹೋಲಿಕೆಗಳು ಕಂಡುಬರುತ್ತವೆ. ಆಂಧ್ರ - ಕರ್ನಾಟಕ ಗಡಿ ಪರಿಸರದಲ್ಲಿ ಬುರ್ರಕಥಾ, ಒಗಟು, ಗಾದೆ, ಭಜನೆ ಪದ, ಸೋಬಾನೆ ಪದ, ಬಯಲಾಟ ಮತ್ತು ಕೋಲಾಟ ಇತ್ಯಾದಿ ಕಲೆಗಳಲ್ಲಿ ಸಮಾನಾಂಶಗಳನ್ನು ಒಳಗೊಂಡಿವೆ.

ಆಂಧ್ರಪ್ರದೇಶ ಮತ್ತು ಕರ್ನಾಟಕ ಇವೆರಡು ಪರಸ್ಪರ ನೆರೆಹೊರೆ ಮನೆಗಳಂತೆ ನೆರೆ ರಾಜ್ಯಗಳಾಗಿವೆ. ಕನ್ನಡ ಮತ್ತು ತೆಲುಗು ಭಾಷೆಗಳ ಸಂಬಂಧ ಪುರಾತನವಾದದ್ದು. ಈ ಎರಡೂ ರಾಜ್ಯಗಳ ನಡುವೆ ಕೊಡು - ಪಡೆ ಅವ್ಯಾಹತವಾಗಿ ನಡೆದಿದೆ. ಹಾಗೆಯೇ ಈ ಎರಡು ಭಾಷಾ ಪ್ರಾಂತಗಳು ಒಂದಕ್ಕೊಂದು ಆತುಕೊಂಡಿವೆ. ತೆಲುಗು ಮತ್ತು ಕನ್ನಡ ಸಂಸ್ಕೃತಿಗಳ ನಡುವಿನ ನಂಟಿಗೆ ಹಲವು ನೂರು ವರ್ಷಗಳ ಚರಿತ್ರೆ ಇದೆ. ಕರ್ನಾಟಕ - ಆಂಧ್ರ ಗಡಿಭಾಗಗಳು ಕಡೇ ಪಕ್ಷ ಎರಡು ಭಾಷೆ ಮತ್ತು ಎರಡು ಸಂಸ್ಕೃತಿಗಳನ್ನು ಒಳಗೊಂಡಿರುವ ತಾಣವಾಗಿರುವುದು ಕಂಡುಬರುತ್ತದೆ. ಸಾಂಸ್ಕೃತಿಕವಾಗಿ, ಭಾಷಿಕವಾಗಿ ಮತ್ತು ಸಾಮುದಾಯಿಕವಾಗಿ ಗಡಿ ಪ್ರಾಂತಗಳಲ್ಲಿ ಎರಡಕ್ಕಿಂತ ಹೆಚ್ಚು ಭಾಷೆಗಳು ನೆಲೆಗೊಂಡಿರುವುದು ಕಾಣಸಿಗುತ್ತದೆ. ಆಯಾ ಸಮುದಾಯದವರು ಸಮುದಾಯಗಳಲ್ಲಿನ ಮಾತೃಭಾಷೆ ಮತ್ತು ಮೂಲ ಸಂಸ್ಕೃತಿಗಳ ಚಹರೆಗಳನ್ನು ಬಳಸಿಕೊಂಡೇ ಗಡಿನಾಡಿನ ಇತರೆ ಭಾಷೆ ಸಂಸ್ಕೃತಿಯನ್ನು ತಮ್ಮ ಬದುಕಿನಲ್ಲಿ ಏಕವಾಗಿಸಿಕೊಳ್ಳುವ ಅನಿವಾರ್ಯತೆಯನ್ನು ಗಡಿ ಪ್ರಾಂತ ಪರಿಸರದ ಜನತೆ ಅರಿತಿರುತ್ತಾರೆ. ಆಂಧ್ರಪ್ರದೇಶದ ಜನರ ಸಂಸ್ಕೃತಿ ಮತ್ತು ಭಾಷೆಯ ಪ್ರಭಾವ ನಮ್ಮ ಜನರ ಮೇಲಾದ ಕನ್ನಡ ನಾಡಿನ ಸಂಸ್ಕೃತಿ ಮತ್ತು ಭಾಷೆ ಆಂಧ್ರಪ್ರದೇಶದ ಗಡಿ ಪ್ರಾಂತ ಜನರ ಮೇಲಾಗಿರುವುದು ಕಂಡು ಬಂದಿದೆ ಹಾಗೂ ಇದು ಸಹಜವಾದ ಪ್ರಕ್ರಿಯೆಯೂ ಹೌದು. ಕರ್ನಾಟಕ ಮತ್ತು ಆಂಧ್ರಪ್ರದೇಶದ ಗಡಿ ಪ್ರಾಂತಗಳ ಜನರು ಒಂದಕ್ಕಿಂತ ಹೆಚ್ಚು ಭಾಷೆ - ಸಂಸ್ಕೃತಿಗಳನ್ನು ರೂಢಿಸಿಕೊಂಡಿರುತ್ತಾರೆ ಅಥವಾ ಒಂದು ಸಮುದಾಯ ಬೇರೆ ಸಮುದಾಯದ ಭಾಷೆ ಮತ್ತು ಸಂಸ್ಕೃತಿಯನ್ನು ಅನುಸರಿಸುತ್ತಾ ತಮ್ಮ ಮೂಲ ಸಾಂಸ್ಕೃತಿಕತೆಯನ್ನು ಉಳಿಸಿಕೊಂಡು ಬರುತ್ತಿರುವುದು ಗಡಿ ಭಾಷೆಗಳಲ್ಲಿ ಕಂಡುಬರುತ್ತದೆ. ಹಾಗಾಗಿ ಗಡಿಪ್ರಾಂತ ಪರಿಸರದಲ್ಲಿ ಎರಡಕ್ಕಿಂತ ಹೆಚ್ಚು ಭಾಷೆಗಳು, ಸಮುದಾಯಗಳು, ಧರ್ಮಗಳು ಮತ್ತು ಸಂಸ್ಕೃತಿಗಳು ನೆಲೆಗೊಂಡು ಅವುಗಳೆಲ್ಲವುಗಳ ಸಮ್ಮಿಶ್ರದೊಂದಿಗೆ ಬಹುಸಂಸ್ಕೃತಿಯನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಬಂದಿವೆ. ಹಾಗಾಗಿ ಗಡಿನಾಡು ಪರಿಸರದ ಜನರಲ್ಲಿ ಯಾವುದೇ ಸಾಂಸ್ಕೃತಿಕ ಕಲೆ, ಕ್ರೀಡೆ, ಆಚಾರ-ವಿಚಾರ, ಉಡುಗೆ-ತೊಡುಗೆ, ರೂಢಿ, ಸಂಪ್ರದಾಯಗಳಲ್ಲಿ ಸಮಾನಾಂಶಗಳು ಗೋಚರಿಸುತ್ತವೆ.

ಡಿ.ಎನ್. ಯೋಗೀಶ್ವರಪ್ಪ ಅವರು ಗಡಿನಾಡ ಜಾನಪದ ಸಂಸ್ಕೃತಿಯ ಕುರಿತು ಮಾತನಾಡುತ್ತಾ ಕರ್ನಾಟಕ ಮತ್ತು ಆಂಧ್ರಪ್ರದೇಶದ ಜಾನಪದ ದೈವಗಳ ಕುರಿತಾಗಿ ಈ ರೀತಿ ಪ್ರಸ್ತಾಪಿಸಿದ್ದಾರೆ.

"ಕರ್ನಾಟಕ - ಆಂಧ್ರ ಒಂದೇ ನಾಣ್ಯದ ಎರಡು ಮುಖಗಳು ಈ ಎರಡೂ ಭಾಷಿಕರನ್ನು ಹತ್ತಿರಕ್ಕೆ ತಂದವರೆಂದರೆ, ಆಂಧ್ರ - ಕರ್ನಾಟಕದ ಜಾನಪದ ದೇವತೆಗಳು. ಉದಾಹರಣೆಗೆ ಕರ್ನಾಟಕದ ಮಲ್ಲಯ್ಯ ಆಂಧ್ರದಲ್ಲಿ ಮಲ್ಲಿಕಾರ್ಜುನನಾದರೆ, ಆಂಧ್ರಪ್ರದೇಶದ ವೆಂಕಟರಮಣ ಕರ್ನಾಟಕದಲ್ಲಿ ತಿಮ್ಮಪ್ಪನಾಗಿದ್ದಾನೆ. ಆಂಧ್ರದ ಗಡಿ ಭಾಗದವರೆಗೆ ಕೊರಟಗೆರೆ ಬಳಿಯ ಗೊರವನಹಳ್ಳಿ ಲಕ್ಷ್ಮೀ ಮುಖ್ಯ ದೇವತೆಯಾದರೆ ಕರ್ನಾಟಕದ ಗಡಿ ಭಾಗದವರೆಗೆ ಕದ್ರಿ ನರಸಿಂಹ ತಿರುಪತಿ ಮುಖ್ಯರಾಗುತ್ತಾರೆ. ಪ್ರತಿ ವರ್ಷವೂ ಇಲ್ಲಿಯ ಭಕ್ತರೂ ಅಲ್ಲಿಗೆ, ಅಲ್ಲಿಯ ಭಕ್ತರೂ ಇಲ್ಲಿಗೆ

ಬರುವುದರಿಂದ ಸಹಜವಾಗಿ ಭಾಷೆಗಳ ಕೊಡುಕೊಳ್ಳುವಿಕೆ ನಡೆಯುತ್ತದೆ"(ಹನುಮಂತರಾಯಪ್ಪ.ಕೆ.; ೨೦೦೮; ಪುಟ ೨೧೦) ಎಂದು ಅಭಿಪ್ರಾಯಿಸಿದ್ದಾರೆ. ಹೀಗೆ ಕರ್ನಾಟಕ - ಆಂಧ್ರ ಪ್ರದೇಶದ ಗಡಿ ಪ್ರಾಂತಗಳಲ್ಲಿ ನೆಲೆಸಿದ ಜಾನಪದ ದೈವಗಳಿಗೆ ಆಂಧ್ರ ಪ್ರದೇಶದ ಗಡಿ ಪ್ರಾಂತದ ಜನರು ಬಂದು ಹೋಗುವುದು ಮಾಡುವುದು ಎರಡು ಭಿನ್ನ ಸಂಸ್ಕೃತಿಗಳ, ಎರಡು ಭಿನ್ನ ಭಾಷೆಗಳ ಸಮಾಗಮವಾಗುವುದರಿಂದ ಮತ್ತು ಆಯಾ ಸಂಸ್ಕೃತಿ ಮತ್ತು ಭಾಷೆಗಳ ಕೊಡು - ಪಡೆ ನಡೆಯುವುದರಿಂದ ಎರಡು ಸಂಸ್ಕೃತಿಗಳು ಮತ್ತು ಭಾಷೆಗಳು ಏಕವಾಗಿ ಕನ್ನಡ - ತೆಲುಗು ಭಾಷೆಗಳೆರಡೂ ಸೇರಿ ದ್ವಿಭಾಷಿಕ ಹಾಗೂ ಬಹು ಸಾಂಸ್ಕೃತಿಕ ನೆಲೆಯಾಗಿರುವುದು ಕಂಡು ಬಂದಿದೆ.

ಗಡಿ ಪ್ರಾಂತ ಪರಿಸರವು ಪ್ರಾಚೀನ ಕಾಲದಿಂದಲೂ ಸಾಹಿತ್ಯ ಸಂಸ್ಕೃತಿಗೆ ಮತ್ತು ಭಾಷೆಗೆ ಅನನ್ಯವಾದ ಕೊಡುಗೆ ನೀಡಿದೆ. ಇಲ್ಲಿನ ವಿಶಿಷ್ಟತೆ ಎಂದರೆ ಕರ್ನಾಟಕ ಮತ್ತು ಆಂಧ್ರಪ್ರದೇಶದ ಒಳನಾಡುಗಳಲ್ಲಿ ಕಾಣಸಿಗದ ಜಾನಪದ ಸಂಸ್ಕೃತಿಯ ಭಂಡಾರವೂ ಈ ಗಡಿ ಪ್ರದೇಶದಲ್ಲಿದೆ. ಕರ್ನಾಟಕ - ಆಂಧ್ರ ಗಡಿ ಪರಿಸರದ ಪ್ರಾಂತಗಳಲ್ಲಿ ತೆಲುಗು ಕನ್ನಡ ಪರಸ್ಪರ ಸಮ್ಮಿಲನಗೊಂಡಿರುವುದರಿಂದ ಇಲ್ಲಿನ ಹಾಡು, ಕುಣಿತಗಳಲ್ಲಿ ವಿಶಿಷ್ಟ ಕಲಾವಂತಿಕೆಯು ರೂಪಗೊಂಡಿದೆ. ಉದಾಹರಣೆಗೆ ಬಯಲಾಟ, ಬುರ್ರಕಥಾ, ಸೋಬಾನೆಪದ, ಭಜನೆಪದ, ತೊಗಲುಗೊಂಬೆಯಾಟ, ಗೊರವರ ಕುಣಿತ, ಯಕ್ಷಗಾನ, ತಮಟೆ, ಮುಖವೀಣೆ ಮತ್ತು ಕೋಲಾಟ ಇತ್ಯಾದಿ ಜನಪದ ಪ್ರದರ್ಶನ ಕಲೆಗಳು ಕನ್ನಡ - ತೆಲುಗು ಎರಡು ಭಾಷೆಗಳಲ್ಲಿ ಆಯಾಯಾ ಜನಾಂಗದ ಸಂಸ್ಕೃತಿಯನ್ನು, ಭಾಷಿಕಾಂಶಗಳನ್ನು ತೆರದಿಡುತ್ತವೆ. ಕರ್ನಾಟಕ - ಆಂಧ್ರಪ್ರದೇಶ(ಸೀಮಾಂಧ್ರ)ದ ಗಡಿನಾಡು ಪ್ರಾಂತ ಪರಿಸರದಲ್ಲಿ ಭೌಗೋಳಿಕವಾಗಿ, ಸಾಂಸ್ಕೃತಿಕವಾಗಿ, ಭಾಷಿಕವಾಗಿ, ಸಾಮುದಾಯಿಕವಾಗಿ ಮತ್ತು ಜನಾಂಗಿಕವಾಗಿ ಭಿನ್ನ ಭಿನ್ನ ಸಂಸ್ಕೃತಿಗಳು ಒಳಗೊಂಡಿದ್ದರೂ, ಅವರಾಡುವ ಜನಪದ ಪ್ರದರ್ಶನ ಕಲೆಗಳಲ್ಲಿ ಹಾಡು, ಕುಣಿತಗಳಲ್ಲಿ ಏಕತಾನತೆಯ ಅಂಶಗಳು ಒಳಗೊಂಡಿರುವುದನ್ನು ಗಮನಿಸಬಹುದಾಗಿದೆ.

### ೬.೧. ಗಡಿನಾಡ ಕೋಲುಪದಗಳಲ್ಲಿ ಸಾಮುದಾಯಿಕ ಅನನ್ಯತೆ

ಗಡಿನಾಡು ಎಂದಾಕ್ಷಣ ಹಲವು ಧರ್ಮಗಳು, ಜನಾಂಗಗಳು, ಹತ್ತಾರು ಜಾತಿ ಸಮುದಾಯಗಳು ಸೇರಿಕೊಂಡಿರುವುದು ಕಂಡು ಬರುತ್ತದೆ. ಗಡಿನಾಡಿನಲ್ಲಿ ಕುರುಬರು, ಗೊಲ್ಲರು, ನಾಯಕರು ಅಥವಾ ಬೇಡರು, ಕೊರಚರು, ಮುಸ್ಲಿಮರು, ಪಿಂಜಾರರು, ಲಿಂಗಾಯತರು, ಒಕ್ಕಲಿಗರು, ವೀರಶೈವರು ಹೀಗೆ ಹಲವು ಜಾತಿ, ಕುಲ, ಸಮುದಾಯಗಳು, ಐದಾರು ಧರ್ಮಗಳು, ಹತ್ತಾರು ಜಾತಿಗಳು ನೂರಾರು ಉಪಜಾತಿಗಳು ಒಟ್ಟಿಗೆ ಬದುಕುತ್ತವೆ. ಈ ಎಲ್ಲಾ ಧರ್ಮಗಳ ಭಾಷಿಕರು, ಜಾತಿ-ಉಪಜಾತಿಯವರು ಒಂದೆಡೆ ನೆಲೆಸಿರುವುದರಿಂದ ಪರಸ್ಪರ ಕೊಡು-ಕೊಳ್ಳುವಿಕೆಯಿಂದ ಸಾಂಸ್ಕೃತಿಕವಾಗಿ ಒಂದರ ಮೇಲೊಂದು ಪ್ರಭಾವ ಬೀರುವುದು, ಸ್ವೀಕರಿಸುವುದು ಸಹಜವಾಗಿ ನೂರಾರು ವರ್ಷಗಳಿಂದ ನಡೆದು ಬಂದಿದೆ.

ಯಾವುದೇ ಒಂದು ಜಾತಿ, ಸಮುದಾಯ, ಜನಾಂಗ ಮತ್ತು ಕುಲಗಳು ಸಂಪ್ರದಾಯ, ಆಚರಣೆ, ಆಚಾರ-ವಿಚಾರ, ಉಡುಗೆ-ತೊಡುಗೆ, ಕಲೆಗಳು ಇತ್ಯಾದಿ ಸಾಂಸ್ಕೃತಿಕ ಆಚರಣೆಗಳನ್ನು ಹೊಂದಿರುತ್ತವೆ. ಒಂದೊಂದು ಸಮುದಾಯದಲ್ಲೂ ಸಾಂಸ್ಕೃತಿಕ ಆಚರಣೆ ಮತ್ತು ಜನಪದ ಕಲೆಗಳಲ್ಲಿ ಏಕತೆಯಿದ್ದರೂ ಅವರು ಮಾತನಾಡುವ ಭಾಷೆ, ಸಾಹಿತ್ಯ, ನಡೆ-ನುಡಿಗಳಲ್ಲಿ ಭಿನ್ನತೆಗಳನ್ನು ಕಾಣಬಹುದಾಗಿದೆ. ಕೆಲವೊಂದು ಸಮುದಾಯಗಳಲ್ಲಿ ಕೋಲಾಟದಂತಹ ಕಲೆಯನ್ನು ಗಮನಿಸಿದಾಗ ಕೋಲಾಟದ ಪ್ರದರ್ಶನವು ಒಂದೇ ರೀತಿಯಲ್ಲಿ ಕಂಡು ಬಂದು ಕೋಲುಗಳ ಖಣಿಲ್ ಖಣಿಲ್ ನಾದವು ಹೊರಹೊಮ್ಮುತ್ತದೆ. ಇದು ಮೇಲ್ನೋಟಕ್ಕೆ ಎಲ್ಲಾ ಸಮುದಾಯಗಳಲ್ಲಿ ಒಂದೇ ತೆರನಾದ ಕೋಲಾಟವೆಂಬಂತೆ ಭಾಸವಾಗುತ್ತದೆ. ಆದರೆ ಕೋಲಾಟದ ಗತ್ತು - ಗತಿ ಹೆಜ್ಜೆಗಳಲ್ಲಿ ಕೋಲು ಕೊಡುವ ವಿಧಾನಗಳಲ್ಲಿ ಹಾಡುಗಳನ್ನು ಹಾಡುವ ವಿಧಾನ ಮತ್ತು ಭಾಷೆ ಇತ್ಯಾದಿಯನ್ನು ಗಮನಿಸಿದಾಗ ಒಂದೊಂದು ಸಮುದಾಯಕ್ಕೂ ಒಂದೊಂದು ತೆರನಾದ ಕೋಲಾಟ ಪದಗಳ ಪ್ರಕಾರಗಳು ಮತ್ತು ಹೋಲಿಕೆ ಸಾಮ್ಯತೆಗಳು ಕಂಡುಬರುತ್ತವೆ.

ಕೋಲಾಟವು ಸರಳ ಮತ್ತು ಸುಂದರವಾದ ಆಟವಾಗಿರುವುದರಿಂದ ತುಂಬಾ ಜನಪ್ರಿಯತೆ ಪಡೆದಿದೆ. ಈ ಆಟವು ಯಾವುದೇ ರೀತಿಯ ದುಂದು-ವೆಚ್ಚವನ್ನು ಅಥವಾ ಅಪಾರ ಹಣವನ್ನು ಬಯಸದೆ ಸರಳವಾಗಿ ಎಲ್ಲಿ ಬೇಕಾದರೂ, ಯಾರು ಬೇಕಾದರೂ ಆಡುವಂತಹ ಜನಪದ ಕಲೆಯಾಗಿದೆ. ಹಾಗಾಗಿ ಕೋಲು ಹುಯ್ಯುವ ಸಂಪ್ರದಾಯವು ಪ್ರತಿಯೊಂದು ಸಮುದಾಯದಲ್ಲೂ ಕಾಣುವಂತಹದ್ದು. ಜನಪದ ಕಲೆ, ಆಟ, ನೃತ್ಯ ಪ್ರದರ್ಶನಗಳು ಯಾವುದೇ ಒಂದು ಸಮುದಾಯ, ಜನಾಂಗ, ಕುಲ ಮತ್ತು ಜಾತಿಗಳಿಗೆ ಸೀಮಿತವಾಗದೆ ವಿಶಾಲವಾದ ಹರವನ್ನು ಹೊಂದಿರುತ್ತದೆ - ಎನ್ನುವುದಕ್ಕೆ ಕೋಲಾಟ ಉತ್ತಮ ಉದಾಹರಣೆಯಾಗಿದೆ.

ಕರ್ನಾಟಕ - ಆಂಧ್ರ ಗಡಿ ಪರಿಸರದಲ್ಲಿ ಕುರುಬರು ಕಾಡುಗೊಲ್ಲರು, ಮಾದಿಗರು, ಬೇಡರು (ನಾಯಕರು), ಕೊರಚರು, ಒಕ್ಕಲಿಗರು ಮತ್ತು ಲಂಬಾಣಿಗರು ಇತ್ಯಾದಿ ಸಮುದಾಯಗಳಲ್ಲಿ ಕೋಲಾಟ ಆಡುವುದು ಕಂಡುಬರುತ್ತದೆ. ಕರ್ನಾಟಕದಲ್ಲಿ ಕಾಡುಗೊಲ್ಲ, ಮ್ಯಾಸಬೇಡ ಸಮುದಾಯದವರು ಕೋಲಾಟವನ್ನು ಯಥೇಚ್ಛವಾಗಿ ಆಡುತ್ತಾರೆ. ಜಾನಪದ ವಿದ್ವಾಂಸರು ಆದ ಜೀ.ಶಂ. ಪರಮಶಿವಯ್ಯ ಅವರು ಈರೇಗೌಡರ ಕೋಲಾಟ ಪದಗಳು ಕೃತಿಗೆ ಬರೆದ ಮುನ್ನುಡಿಯಲ್ಲಿ ಹೀಗೆ ವ್ಯಾಖ್ಯಾನಿಸಿದ್ದಾರೆ. "ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೋಲಾಟ ವಿಶೇಷವಾಗಿ ಕಂಡು ಬರುವುದು ಮರಾಟಿ ನೃತ್ಯದಲ್ಲಿ 'ಮರಾಟಿ' ನೃತ್ಯ ಬಹುಶಃ ಜನಾಂಗದ ಸೂಚಕವಾಗಿರಬೇಕು ಎಂದಿದ್ದಾರೆ"(ಈರೇಗೌಡ; ೧೯೭೫; ಮುನ್ನುಡಿ; ಪುಟ ೭). 'ಮರಾಟಿ' ಎನ್ನುವ ಜನಾಂಗವೊಂದು ಕೋಲಾಟವನ್ನು ಪ್ರದರ್ಶನ ಮಾಡುತ್ತಾರೆ ಎಂಬುದನ್ನು ಈ ಹೇಳಿಕೆ ಸೂಚಿಸುತ್ತದೆ. ಕೋಲಾಟ ಕಲೆಯಲ್ಲಿ ನೈಪುಣ್ಯತೆಯನ್ನು ಪಡೆದ ಸಮುದಾಯಗಳ ಕುರಿತಾಗಿ ಜೀ.ಶಂ. ಪರಮಶಿವಯ್ಯ ಅವರು ಈರೇಗೌಡರ ಕೋಲಾಟ ಪದಗಳು 'ಸಂಕಲನದ ಕೃತಿಯಲ್ಲಿ ಕಾಡುಗೊಲ್ಲರ ಕೋಲಾಟ ಕಲೆಯ ಬಗ್ಗೆ ಪ್ರಸ್ತಾಪಿಸಿರುವುದು ಕಾಣಬರುತ್ತದೆ. ಈ ಕಲೆಯಲ್ಲಿ ನಿಪುಣರು ಅವರಲ್ಲಿ ಗೆಜ್ಜೆ

ಕೋಲಾಟ ಮುಖ್ಯವಾದುದ್ದು ಎಂಬುದಾಗಿ ಕಾಡುಗೊಲ್ಲರು ಕೋಲಾಟದಲ್ಲಿ ಪಡೆದ ಪ್ರಸಿದ್ಧಿಯ ಕುರಿತಾಗಿ ಅಭಿಪ್ರಾಯಪಟ್ಟಿದ್ದಾರೆ(ಈರೇಗೌಡ; ೧೯೭೫; ಪುಟ ೨). ಗೊಲ್ಲರಲ್ಲಿ ಸ್ತ್ರೀಯರು-ಪುರುಷರು ಕೋಲಾಟವಾಡುವುದಿದೆ. ಇವರಲ್ಲಿ ಕೊರವಂಜಿ ಕೋಲಾಟ ಅತ್ಯಂತ ಪ್ರಸಿದ್ಧಿ ಪಡೆದ ಕೋಲಾಟವಾಗಿರುವುದು, ಕೃಷ್ಣನೊಂದಿಗೆ ಗೊಲ್ಲತಿಯರು ಕೋಲಾಟವಾಡಿರುವುದಕ್ಕೆ ಪೌರಾಣಿಕವಾದ ಚರಿತ್ರೆ ಇರುವುದನ್ನು ಗಮನಿಸಲಾಗಿದೆ.

ಕಾಡುಗೊಲ್ಲರನ್ನು ಹೊರತುಪಡಿಸಿ ಇತರೆ ಜನಾಂಗದವರೂ ಕೋಲಾಟ ಆಡುವುದು ಕಂಡುಬರುತ್ತದೆ. ಅಂತಹ ಸಮುದಾಯಗಳ ಕುರಿತಾಗಿ ಕಾಳೇಗೌಡ ನಾಗವಾರ ಅವರ ಲೇಖನ ಸಂಗ್ರಹ; ಜೀ.ಶಂ.ಪ. ಅವರ "ಜಾನಪದ ಬರಹಗಳು" ಎನ್ನುವ ಕೃತಿಯಲ್ಲಿ ಈ ರೀತಿಯಾಗಿ ಉಲ್ಲೇಖಿಸಿರುವುದುಂಟು. "ಕೊರಚರು, ನಾಯಕರು, ಕೊರಮರು, ಕುರುಬರು ಮುಂತಾದ ಜಾತಿ ಜನಾಂಗದವರಲ್ಲಿಯೂ ಕೋಲಾಟ ವಿಶೇಷವಾಗಿ ಕಂಡುಬರುತ್ತದೆ. ಒಕ್ಕಲಿಗರಲ್ಲಿ ಈ ಕೋಲಾಟ ಪ್ರಾಚೀನ ಕಾಲದಿಂದಲೂ ಉಳಿದು ಬಂದಿರುವುದು ತೋರುತ್ತದೆ ಎಂದಿರುವುದನ್ನು ಗಮನಿದರೆ ಗೊಲ್ಲರ ಜೊತೆಗೆ ಕೋಲಾಟದಲ್ಲಿ ನಾಯಕರು, ಕೊರಮರು ಮತ್ತು ಒಕ್ಕಲಿಗರು ಪ್ರಸಿದ್ಧಿ ಪಡೆದಿದ್ದರು" ಎಂಬುದನ್ನು(ಕಾಳೇಗೌಡ ನಾಗವಾರ; ಪುಟ ೧೮೫) ಕಾಳೇಗೌಡ ನಾಗವಾರ ಅವರ ಹೇಳಿಕೆಯಿಂದ ತಿಳಿಯಬಹುದಾಗಿದೆ. ಹೀಗೆ ವಿದ್ವಾಂಸರ ಹೇಳಿಕೆಗಳನ್ನು ಮತ್ತು ಅಭಿಪ್ರಾಯಗಳನ್ನು ಗಮನಿಸಿದಾಗ ಕರ್ನಾಟಕದಲ್ಲಿ ಕಾಡುಗೊಲ್ಲರು, ನಾಯಕರು, ಕೊರಮರು/ ಕೊರಚರು ಮತ್ತು ಒಕ್ಕಲಿಗರು ಕೋಲಾಟವಾಡುವುದರಲ್ಲಿ ತುಂಬಾ ನೈಪುಣ್ಯತೆಯನ್ನು ಗಳಿಸಿದ್ದಾರೆ ಎಂಬ ವಿಚಾರ ತಿಳಿದು ಬರುತ್ತದೆ. ಕೋಲಾಟವು ಕೇವಲ ಯಾವುದೋ ಒಂದು ಸಮುದಾಯಕ್ಕೆ ಸೀಮಿತವಲ್ಲ ಆಸಕ್ತಿಯಿರುವ ಪ್ರತಿಯೊಂದು ಸಮುದಾಯವೂ ಕೋಲಾಟದ ಕಲೆಯನ್ನು ಕರಗತ ಮಾಡಿಕೊಂಡಿರುವುದನ್ನು ಕಾಣಬಹುದಾಗಿದೆ. ಹಾಗೆಯೇ ಕೋಲಾಟದಲ್ಲಿ ವಿಶೇಷವಾಗಿ ನೈಪುಣ್ಯತೆಯನ್ನು ಪಡೆದ ಸಮುದಾಯವೆಂದರೆ ಕಾಡುಗೊಲ್ಲ ಸಮುದಾಯ ಎಂಬುದಾಗಿ ವಿದ್ವಾಂಸರ ಅಭಿಪ್ರಾಯಗಳಿಂದ ತಿಳಿದುಬಂದಿದೆ. ಹಾಗಾಗಿ ಕೋಲಾಟದಲ್ಲಿ ಕಾಡುಗೊಲ್ಲ ಸಮುದಾಯವೇ ಅಗ್ರಪಂಕ್ತಿಯಲ್ಲಿ ನಿಲ್ಲುತ್ತದೆ ಎಂದು ಹೇಳಬೇಕಾಗುತ್ತದೆ.

ಕೋಲಾಟವನ್ನು ಕರ್ನಾಟಕದ ಗಡಿಭಾಗದಲ್ಲಿ ಹೆಚ್ಚಾಗಿ ಆಡುತ್ತಿದ್ದ ಸಮುದಾಯಗಳೆಂದರೆ ಕಾಡುಗೊಲ್ಲರು, ನಾಯಕರು, ಕೊರಮರು, ಕೊರಚರು, ಮಾದಿಗರು ಎಂಬುದಾಗಿ ತಿಳಿದುಬಂದಿದೆ. ಪ್ರಸ್ತುತ ಸಂದರ್ಭದಲ್ಲಿ ಆಂಧ್ರ ಪ್ರದೇಶದ ಗಡಿಭಾಗಗಳಲ್ಲಿ ನಾಯಕ, ಮಾದಿಗ ಸಮುದಾಯದವರು ಹೆಚ್ಚಾಗಿ ಕೋಲಾಟವಾಡುತ್ತಾರೆ ಮತ್ತು ಕೋಲು ಪದಗಳನ್ನು ಹಾಡುತ್ತ ಜೊತೆಗೆ ಪ್ರದರ್ಶನವನ್ನು ಮಾಡುತ್ತಾರೆ ಎಂಬುದು ತಿಳಿದುಬಂದಿದೆ.

ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಹೊಳಗುಂದ, ಮಾರ್ಲಮಡಿಕೆ ಮತ್ತು ಅನಂತಪುರ ಜಿಲ್ಲೆಯ ಕಲ್ಯಾಣದುರ್ಗ ಮತ್ತು ರಾಯದುರ್ಗಗಳಲ್ಲಿ ಕೋಲಾಟವನ್ನು ಹೆಚ್ಚು ಆಡುತ್ತಿರುವುದು ನಾಯಕ ಸಮುದಾಯದವರು ಎಂದು ತಿಳಿದುಬಂದಿದೆ. ಕ್ಷೇತ್ರಕಾರ್ಯ ಮಾಡಿದಂತಹ ಸಂದರ್ಭದಲ್ಲಿ

ಹೆಚ್ಚಾಗಿ ನಾಯಕರು ಮತ್ತು ಮಾದಿಗರು ಕೋಲಾಟವಾಡುತ್ತಿರುವುದು ಕಂಡುಬಂದಿದೆ. ಹೆಚ್ಚಾಗಿ ನಾಯಕ ಸಮುದಾಯ ಆಂಧ್ರ ಪ್ರದೇಶದ ಗಡಿ ಭಾಗಗಳಲ್ಲಿ ಕೋಲಾಟ ಆಡುತ್ತಿರುವುದು ಕಂಡುಬಂದಿದೆ. ಸಂಶೋಧಕರಾದ ಆದೆಪ್ಪನವರು ತಮ್ಮ ಪಿಎಚ್.ಡಿ. ಮಹಾಪ್ರಬಂಧ "ಅನಂತಪುರ ಜಿಲ್ಲಾ ವಾಲ್ಮೀಕುಲ ಸಾಂಸ್ಕೃತಿಕ ಅಧ್ಯಯನಂ" ಎಂಬ ಮಹಾಪ್ರಬಂಧದಲ್ಲಿ ನಾಯಕರು ಹೆಚ್ಚಾಗಿ ಕೋಲಾಟ ಆಡುತ್ತಾರೆ ಎಂಬುದನ್ನು ಹೀಗೆ ಅಭಿಪ್ರಾಯಿಸಿದ್ದಾರೆ. "ಜಾನಪದುಲನೀ ಎಕ್ಕುವುಗಾ "ಜೆಟ್ಟಿಜಾಮು ಪಾಟಲು, ಕೊಪುಲ ಪಾಟಲು, ಮೊರಲ್ಯೆನವಿ ಎಕ್ಕುವುಗಾ ಬೊಂಬ ಸ್ತ್ರೀಲು, ಕೊಪಿಲ ಪಾಟಲ್ಯೆತೆ ಬೋಯಲತೀ ಮಗವಾರು ಎಕ್ಕುವುಗ ಪಾಡುತಾರು". ಮಿಗುತಾ ಕುಲಾಲ ಕಂಟಿ ವೀರಿಕೆ ಪಾಟಲು ಪಾಡಟಂ ಕಾನಿ, ಕೋಪು ಕಟ್ಟಪಂಗಾದಿ ಬಾಗ ವಚ್ಚು. ವೀರಿಕೆ ಸಹಜಂಗ ಸೃಜನಾತ್ಮಕ ಶಕ್ತಿ ಎಕ್ಕುವ ಅಂದುಕೆ ಜೊನ್ನ ಚತ್ರವಾಯ ಮೊಸೇತಿಪುಡು ಪಾರು ಪಿನುಕ ಬುಡುಸಲು(ವೇರುಲುಂಡೆ ವೈಪು) ವೆನುಕಕು ಮುಂದುಕು ವಿಡಿಡೆದಾನ್ನಿ ಬಟ್ಟಿ ಆಂಜನೇಯ ಸ್ವಾಮಿ ಬೊಮ್ಮಗಾನಿ, ಶ್ರೀರಾಮ, ಲಕ್ಷ್ಮಣ, ಸೀತಾ, ರಾಮಾಂಜನೇಯ, ಬೊಮ್ಮುಲುಗಾನಿ ಏಸ್ಯೆಟಟ್ಲುವಾಮ ನೇಸ್ತುನ್ನಾರಂಟೆ ವೀರ ಸೃಜನಾತ್ಮಕ ಶಕ್ತಿ ಎಂತಟದೋ ಮನಂ ಅಂಜನಾ ವೇಸುಕೋವಚ್ಚು"(ಆದೆಪ್ಪ; ೧೯೯೭; ಪುಟ ೨೪೩-೨೪೪) ಎಂದು ನಾಯಕ ಸಮುದಾಯದ ಸ್ತ್ರೀ ಮತ್ತು ಪುರುಷರು ಕೋಲಾಟದಲ್ಲಿ ನೈಪುಣ್ಯತೆ ಪಡೆದವರಾಗಿದ್ದಾರೆ ಎಂಬುದಾಗಿ ಹೇಳಿರುವುದು ಸಹಜವೇ ಆಗಿದೆ.

### ೬.೧.೧. ಮ್ಯಾಸಬೇಡ ಸಮುದಾಯದ ಕೋಲಾಟ ಪದಗಳು

ಇವರು ಮೂಲತಃ ಕಾಡಿನಲ್ಲಿ ವಾಸ ಮಾಡುತ್ತಾರೆಂಬುದು ತಿಳಿದುಬಂದಿರುವುದಾಗಿದೆ. ಹಾಗೆ ಕೆಲವು ದಶಕಗಳಿಂದ ಈಚೆಗೆ ನಗರ ಪ್ರದೇಶಗಳ ಹತ್ತಿರ ಮನೆಗಳನ್ನು ಮಾಡಿಕೊಂಡು ಇರುವುದನ್ನು ಕಾಣಬಹುದು. ಇವರು ಪಶುಪಾಲಕರು ಆಗಿದ್ದಾರೆ. ಪಶುಪಾಲನೆ ಮಾಡುತ್ತಾ, ಪಶುಗಳನ್ನು ಮೇಯಿಸುತ್ತಾ ಬಂದಿದ್ದರಿಂದ ಮ್ಯಾಸರು ಎಂಬ ನಾಮ ವಿಶೇಷಣಸೇರಿ ಮ್ಯಾಸಬೇಡರು ಎಂಬುದಾಗಿ ಕರೆಯವುದು ವಾಡಿಕೆಯಾಗಿದೆ. ಎಂ.ಜಿ. ಈಶ್ವರಪ್ಪ ಅವರು ಮ್ಯಾಸಬೇಡರ ಕುರಿತಾಗಿ ಹೀಗೆ ಅಭಿಪ್ರಾಯಿಸಿದ್ದಾರೆ. "ಈ ಜನಾಂಗದ ಕೆಲವರು ವಿಜಯನಗರ ಸಾಮ್ರಾಜ್ಯ ಮೀಸಲು ಪಡೆಯ ನಾಯಕರಾಗಿದ್ದರಿಂದ ಮೀಸಲು ನಾಯಕರು ಮ್ಯಾಸನಾಯಕರು ಎಂದಾಗಿದೆ ಎನ್ನುತ್ತಾರೆ"(ಈಶ್ವರಪ್ಪ.ಎಂ.ಜಿ.; ೧೯೮೨; ಪುಟ ೬). ವಿಜಯನಗರ ಕಾಲದಲ್ಲಿ ಧೈರ್ಯ ಸಾಹಸಕ್ಕೆ ಹೆಸರು ವಾಸಿಯಾದ ಸೈನಿಕ ಪಡೆಯೆಂದು, ಮೀಸಲು ಪಡೆ ಎಂದು ಗುರುತಿಸಿಕೊಂಡಿರುವುದರಿಂದ ಈ ನಾಯಕರಿಗೆ ಮೀಸಲು ನಾಯಕರು ಅಥವಾ ಮ್ಯಾಸನಾಯಕರು ಎಂಬ ಪದ ಬಂದಿದೆ ಎಂದು ಹೇಳಿದ್ದಾರೆ. ಎಂ.ಜಿ. ಈಶ್ವರಪ್ಪ ಅವರ ಮತ್ತೊಂದು ಅಭಿಪ್ರಾಯದ ಪ್ರಕಾರ "ಇವರು ಪಶುಪಾಲನೆ ಮಾಡುತ್ತಿದ್ದರೆಂದೂ, ಇವರು ಶ್ರೀಶೈಲದ ಕಡೆಯಿಂದ ಪಶುಗಳನ್ನು ಮೇಯಿಸಿಕೊಳ್ಳುತ್ತ ಕರ್ನಾಟಕದ ಕಡೆಗೆ ಬಂದರೆಂದೂ ತಿಳಿಯುತ್ತದೆ. ಹಿಂದೆ ಒಬ್ಬ ಮುಂದೆ ಒಬ್ಬ ಇದ್ದರು. ಹಿಂದೆ ಇದ್ದವನು ಆಕಳ ಕರುವಿನ ಕಾಲು ಮುರಿದು ತಿನ್ನಲು ಶುರು ಮಾಡಿದನಂತೆ. ಆದಕ್ಕೆ

ಮುಂದಿದ್ದವನು ನೀನು ಗೋಮಾಂಸ ತಿಂದೆ ನೀನು ಬ್ಯಾಡ" ಅಂತ ಅವನನ್ನು ಬಿಟ್ಟು ಮುಂದೆ ಬಂದನಂತೆ. ಮುಂದೆ ಬಂದವನು ಕಾಡುಗೊಲ್ಲ ಆದ, ಹಿಂದೆ ಉಳಿದವನು ಮ್ಯಾಸಬೇಡ ಆದನಂತೆ. ಹಾಗಾಗಿ ಮೇಯಿಸುವವರು>ಮೇಸುವವರು>ಮ್ಯಾಸರು ಆಗಿದೆಯಂತೆ (ಈಶ್ವರಪ್ಪ.ಎಂ.ಜಿ.; ೧೯೮೨; ಪುಟ ೬-೭) ಎಂಬ ಅಭಿಪ್ರಾಯವನ್ನು ನೀಡಿದ್ದಾರೆ. ಈ ಎಲ್ಲ ದಾಖಲೆಗಳ ಪ್ರಕಾರ ಪಶುಗಳನ್ನು ಮೇಯಿಸುತ್ತ ಬಂದಿರುವುದಕ್ಕೆ ಅವರನ್ನು ಮೇಯಿಸುವರು>ಮ್ಯಾಸರು ಎಂಬುದಾಗಿ ಕರೆದಿದ್ದು ಮ್ಯಾಸನಾಯಕರು ಎಂಬುದಾಗಿ ಕರೆದಿರುವುದನ್ನು ಕಾಣಬಹುದಾಗಿದೆ.

ಮ್ಯಾಸಬೇಡರ ಸಮುದಾಯದಲ್ಲಿ ಜನಪದ ಸಾಹಿತ್ಯ ತುಂಬಾ ಹುಲುಸಾಗಿ ಸಿಗುತ್ತದೆ. ಇವರ ಜನಪದ ಕಲೆಗಳಾದ ಬಯಲಾಟ, ಮೋಡಿ ಕುಣಿತ, ಬೇಡರ ಕುಣಿತ, ದಾಸರ ಕುಣಿತ ಮತ್ತು ಕೋಲಾಟ ಇತ್ಯಾದಿ ಪ್ರದರ್ಶನ ಕಲೆಗಳನ್ನು ತಮ್ಮ ಜೀವನದಲ್ಲಿ ರೂಢಿಸಿಕೊಂಡು ಬಂದಿದ್ದಾರೆ. ಇವರ ಮನೆಮಾತು ತೆಲುಗು ಆಗಿದ್ದು, ಇವರು ಆಂಧ್ರಪ್ರದೇಶದ ಶ್ರೀಶೈಲದಿಂದ ವಲಸೆ ಬಂದವರೆಂದು ವಿದ್ವಾಂಸರು ಅಭಿಪ್ರಾಯಿಸಿದ್ದಾರೆ. ವಿದ್ವಾಂಸರಾದ ಎಂ.ಜಿ. ಈಶ್ವರಪ್ಪನವರು ಮ್ಯಾಸಬೇಡರು ಆಂಧ್ರದಿಂದ ವಲಸೆ ಬಂದವರೆಂದು ಪ್ರಸ್ತಾಪಿಸುತ್ತಾ ಹೀಗೆ ನಿರೂಪಿಸಿದ್ದಾರೆ. "ಪಶುಪಾಲನೆ ಮಾಡುತ್ತಾ ಶ್ರೀ ಶೈಲ ಕಡೆಯಿಂದ ಪಶುಗಳನ್ನು ಮೇಯಿಸುತ್ತಾ ಕರ್ನಾಟಕದ ಕಡೆ ಬಂದವರೆಂದೂ ತಿಳಿಯುತ್ತದೆ ಎಂದು ಹೇಳುತ್ತಾ ಮ್ಯಾಸಬೇಡರು ಮೂಲತಃ ಆಂಧ್ರದಿಂದ ಬಂದಿದ್ದರಿಂದ ಇವರ ಭಾಷೆ ತೆಲುಗು ಆಗಿದೆ ಹಾಗೂ ಆಡುವ ಜನಪದ ಕಲೆಗಳಾಗಲಿ, ಸಾಹಿತ್ಯಗಳಲ್ಲಿಯಾಗಲಿ ತೆಲುಗು-ಕನ್ನಡಗಳ ಭಾಷೆಯ ಮಿಶ್ರಣವಾಗುವುದು ಕಂಡುಬರುತ್ತದೆ" (ಈಶ್ವರಪ್ಪ.ಎಂ.ಜಿ.; ೧೯೮೨; ಪುಟ ೬-೭).

ಮ್ಯಾಸಬೇಡರು ಹೆಚ್ಚಾಗಿ ಹಬ್ಬ ಹರಿದಿನಗಳಲ್ಲಿ ಸೋಬಾನೆ ಪದ, ಭಜನೆಪದ, ಬಯಲಾಟ ಮತ್ತು ಕೋಲಾಟವನ್ನು ಹೆಚ್ಚಾಗಿ ಆಡುವುದು ಕಂಡುಬರುತ್ತದೆ. ಕೋಲಾಟವನ್ನು ಹೆಚ್ಚಾಗಿ ಬೇಸಿಗೆಯ ದಿನಗಳಲ್ಲಿ, ರಾತ್ರಿಯ ಬೆಳದಿಂಗಳಲ್ಲಿ, ವಿರಾಮ ವೇಳೆಯಲ್ಲಿ ಹೆಚ್ಚಾಗಿ ಪ್ರದರ್ಶನ ಮಾಡುತ್ತಾರೆ. ಇವರ ಕೋಲಾಟದಲ್ಲಿ ಹಲವು ರೀತಿಯ ಪ್ರಕಾರಗಳು ಕಂಡು ಬರುತ್ತವೆ. ಆದರೆ ಇವರು ಜಡೇಕೋಲಾಟವನ್ನು ಆಡುವುದರಲ್ಲಿ ಪ್ರಸಿದ್ಧಿಯನ್ನು ಪಡೆದಿದ್ದಾರೆ. ಕೋಲಾಟದಲ್ಲಿ ತಾಳಗಡ್ಡಿ, ಹಾರಗಡ್ಡಿ, ಒಂಟಿಗಡ್ಡಿ ಜೋಡುಕೋಲು, ತೇರಗೋಲು, ಹರಿಗೋಲು, ತಿಪರಿ ಮತ್ತು ಜಡೇಕೋಲು ಮುಂತಾದ ಪ್ರಕಾರಗಳನ್ನು ಆಡುವುದು ಕಂಡುಬಂದಿದೆ.

ಮ್ಯಾಸಬೇಡರ ಕೋಲು ಪದಗಳಲ್ಲಿ ಹಲವು ರೀತಿಯ ವಸ್ತುವೈವಿಧ್ಯತೆಗಳು ಬಂದು ಹೋಗುತ್ತವೆ. ಗಂಡ-ಹೆಂಡತಿಯರ ಸರಸ-ವಿರಸಗಳು, ಗೆಳೆಯ-ಗೆಳತಿಯರ ಪ್ರಣಯ ಸಲ್ಲಾಪ, ಅತ್ತೆ-ಅಳಿಯರಿಗೆ ಸಂಬಂಧಿಸಿದಂತೆ ಹಾಸ್ಯ ಗೀತೆಗಳು, ಸಾಂಸ್ಕೃತಿಕ ನಾಯಕರು ಆದ ಬೋಸೆ ದೇವರು, ಜಗಳೂರು ಪಾಪನಾಯಕ, ಮಾಕನಡಕು ಒಬಳದೇವರು, ಬೊಮ್ಮದೇವರು, ತಿಪ್ಪೇಸ್ವಾಮಿ, ಗಾದ್ರಿಪಾಲನಾಯಕ ಮುಂತಾದ ದೇವರುಗಳ ಕುರಿತಾಗಿ ಸಾಹಿತ್ಯ ಸಿಗುತ್ತದೆ ಮತ್ತು ಐತಿಹಾಸಿಕವಾಗಿ

ಚರಿತ್ರೆಯಲ್ಲಿ ಹೋರಾಡಿ ಮಡಿದಂತಹ ವೀರರ ಕುರಿತಾಗಿಯೂ ಸಾಹಿತ್ಯ ಸಿಗುತ್ತದೆ. ಮದಕರಿನಾಯಕ, ಒನಕೆ ಓಬವ್ವ ಮುಂತಾದ ಐತಿಹಾಸಿಕ ಪುರುಷರು, ಮಹಿಳೆಯರು ಕೋಲಾಟ ಪದಗಳಲ್ಲಿ ವಸ್ತುವಿಷಯವಾಗಿರುವುದನ್ನು ಕಾಣಬಹುದು.

ಮ್ಯಾಸಬೇಡರ ಕೋಲುಪದಗಳಲ್ಲಿ ತಮ್ಮ ವೃತ್ತಿ, ಆಚಾರ-ವಿಚಾರಗಳು ಅನಾವರಣಗಳಾಗುತ್ತವೆ. ಇವರ ಉಡುಗೆ-ತೊಡುಗೆ ಆಹಾರ ಪದ್ಧತಿ, ರೂಢಿ-ಸಂಪ್ರದಾಯಗಳನ್ನು ಇವರ ಕೋಲುಪದಗಳಿಂದ ತಿಳಿಯಬಹುದಾಗಿದೆ. ಇವರ ಒಂದು ಕೋಲುಪದದಲ್ಲಿ ಇವರು ಮೂಲತಃ ಪಶುಪಾಲಕರು ಮತ್ತು ದನಕರುಗಳನ್ನು ಮೇಯಿಸುವ ವೃತ್ತಿಯನ್ನು ಮಾಡುತ್ತಿದ್ದರು ಎಂಬುದು ತಿಳಿಯುತ್ತದೆ.

"ಬೇಡ ಓ ಬ್ಯಾಟಿಕಾರಣ್ಣ
ಬೇಡ ಕಾಮನಬಿಲ್ಹಿಡಿವಣ್ಣ
ಗುಡ್ಡದಾ ಹುಲ್ಲು ಮೇಯ್ತಿದ್ದವಣ್ಣಾ ||೨||
ಚಿಲುಮೆಯ ನೀರು ಕುಡಿತಿದ್ದಾವಣ್ಣ |ಬೇಡ|

ಬಾದೆಯಾ ಹುಲ್ಲು ಮೇಯ್ತಿದ್ದವಣ್ಣಾ ||೨||
ಬಾವಿಯಾ ನೀರು ಕುಡಿತಿದ್ದವಣ್ಣಾ |ಬೇಡ|
ಹುಳ್ಳಿಯಾ ಹೊಲ ಮೇಯ್ತಿದವಣ್ಣ ||೨||
ಮಡಗಿನ ನೀರು ಕುಡಿತಿದ್ದಾವಣ್ಣ
ದೋಣಿಯಾಗಳ ನೀರು ಕುಡಿತಿದ್ದವಣ್ಣಾ" |ಬೇಡ|

(ವಕ್ತೃ: ಕುರಿಬೋರಯ್ಯ, ಬೋಸೇದೇವರಹಟ್ಟಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಇವರು ಕಾಡು ಮೃಗಗಳಾದ ಹಂದಿ, ಜಿಂಕೆ, ಮೊಲ ಇತ್ಯಾದಿ ಪ್ರಾಣಿಗಳನ್ನು ಬೇಟೆಯಾಡುತ್ತಿದ್ದರು ಎಂಬುದಕ್ಕೆ ಈ ಹಾಡಿನ ಆರಂಭದ ಸಾಲು 'ಬೇಡ ಓ ಬ್ಯಾಟಿಕಾರಣ್ಣ ಬೇಡ ಕಾಮನ ಬಿಲ್ಲು ಹಿಡಿರಣ್ಣ' ಎಂಬುದು ಸಾಕ್ಷಿಯಾಗಿದೆ. ಬಿಲ್ಲು ಬಾಣಗಳ ಪ್ರಸ್ತಾಪ ಬಂದಿರುವುದನ್ನು ಗಮನಿಸಿದರೆ, ಇವರು ಬೇಟೆಗಾರರು ಎಂಬುದು ಈ ಹಾಡಿನಿಂದ ತಿಳಿದುಬರುತ್ತದೆ. ಹಾಗಾಗಿಯೇ ಈ ಹಾಡಿನಲ್ಲಿ ಬ್ಯಾಟಿಕಾರ ಎಂದು ಬಳಸಿರುವುದು. ಹಾಗೆಯೇ ಮೂಲ ವೃತ್ತಿ ಪಶುಪಾಲನೆ ಎಂಬುವುದನ್ನು ಈ ಗೀತೆ ಸಾರುವಂತಿದೆ. ಇವರು ಮೂಲತಃ ಪಶುಪಾಲಕರಾಗಿದ್ದು ಆಂಧ್ರದ ಶ್ರೀಶೈಲದಿಂದ ಕರ್ನಾಟಕಕ್ಕೆ ಪಶುಗಳನ್ನು ಮೇಯಿಸುತ್ತ ಬಂದರು ಎಂಬುದನ್ನು ವಿದ್ವಾಂಸರಾದ ಈಶ್ವರಪ್ಪನವರು ಈಗಾಗಲೇ ಪ್ರಸ್ತಾಪ ಮಾಡಿರುವುದನ್ನು ಇಲ್ಲಿ ಸ್ಮರಿಸಬಹುದು. ಹಾಗೆಯೇ ಇಲ್ಲಿ ಪಶುಗಳನ್ನು ಮೇಯಿಸುವಂತಹ ಪಶುಪಾಲಕ ವೃತ್ತಿಯ ಬೇಡರೇ ಈ ಹಾಡನ್ನು ಕಟ್ಟಿರುವಂತಿದೆ. ಈ ಹಾಡಿನಲ್ಲಿ ಪಶುಗಳು ಅಥವಾ ದನಗಳು ಗುಡ್ಡದ ಹುಲ್ಲು ಮೇಯ್ತಿದವಣ್ಣಾ, ಚಿಲುಮೆಯ ನೀರು ಕುಡಿತಿದ್ದವಣ್ಣಾ, ಬಾದೆಯಾ ಹುಲ್ಲು ಮೇಯ್ತಿದ್ದವಣ್ಣಾ, ಬಾವಿಯಾಗಳ ನೀರು ಕುಡಿತ್ತಿದ್ದವಣ್ಣಾ ಎಂದು ಪ್ರಸ್ತಾಪಿಸಿರುವುದನ್ನು ಗಮನಿಸಿದರೆ ಮ್ಯಾಸಬೇಡರು ಹೆಚ್ಚಾಗಿ ಅಡವಿಯಲ್ಲೆ ನೆಲೆಸಿರುತ್ತಿದ್ದರು

ಮತ್ತು ಪಶುಗಳನ್ನು ಗುಡ್ಡಗಾಡು, ಅಡವಿ ಪ್ರದೇಶಗಳಲ್ಲಿ ಮೇಯಿಸುತ್ತಾ ಹಳ್ಳ-ಕೊಳ್ಳ ಹರಿಯುವ ಕಡೆ ಚಿಲುಮೆಯನ್ನು ತೋಡಿ ದನ-ಪಶುಗಳಿಗೆ ನೀರನ್ನು ಕುಡಿಸುತ್ತಿದ್ದರು ಎಂಬ ಕಟುವಾಸ್ತವವನ್ನು ಈ ಕೋಲುಪದ ಬಿಚ್ಚಿಡುತ್ತದೆ. ಈ ಹಾಡಿನಲ್ಲಿ ಮ್ಯಾಸಬೇಡರು ಮೂಲತಃ ಮೇಯಿಸುವವರು> ಮೇಸರು>ಮ್ಯಾಸರು ಎಂಬುದಾಗಿ ಬಂದಿರುವುದು ಎಂದು ತಿಳಿಯಬಹುದಾಗಿದೆ. ಒಟ್ಟಾರೆ ಈ ಕೋಲುಪದದಿಂದ ಮ್ಯಾಸಬೇಡರ ನಿಜವಾದ ವೃತ್ತಿ ಪಶುಪಾಲನೆ ಮತ್ತು ಬೇಟೆಗಾರಿಕೆ ಆಗಿತ್ತು ಎಂಬುದು ತಿಳಿದುಬರುತ್ತದೆ.

ಮ್ಯಾಸಬೇಡರು ಆಂಧ್ರಪ್ರದೇಶದಿಂದ ವಲಸೆ ಬಂದು ಕರ್ನಾಟಕದ ಬಳ್ಳಾರಿ, ಚಿತ್ರದುರ್ಗ, ದಾವಣಗೆರೆ ಮತ್ತು ತುಮಕೂರುಗಳಲ್ಲಿ ನೆಲೆಸಿದ್ದಾರೆ. ಇವರ ಮನೆ ಮಾತು ತೆಲುಗು ಆಗಿದ್ದು ವ್ಯಾವಹಾರಿಕವಾಗಿ ಕನ್ನಡವನ್ನು ಬಳಸುತ್ತಾರೆ. ಹಾಗೆಯೇ ಇವರಾಡುವ ಜನಪದ ಕಲೆಗಳಲ್ಲಿ ಕನ್ನಡ-ತೆಲುಗು ಭಾಷೆಗಳನ್ನು ಬಳಸುತ್ತಾರೆ ಮತ್ತು ಎರಡು ಭಾಷೆಗಳಲ್ಲಿ ಪ್ರತ್ಯೇಕವಾಗಿ ಹಾಡುಗಳನ್ನು ಬಳಸುವುದಿದೆ. ಮ್ಯಾಸಬೇಡರು ಕರ್ನಾಟಕಾಂಧ್ರ ಗಡಿಪ್ರಾಂತ ಪರಿಸರದಲ್ಲಿಯೇ ಹೆಚ್ಚಾಗಿ ನೆಲೆಸಿರುವುದರಿಂದ ಇವರು ದ್ವಿಭಾಷಿಕರಾಗಿದ್ದಾರೆ ಹಾಗೂ ಇವರ ಕೋಲಾಟದಲ್ಲಿಯೂ ದ್ವಿಭಾಷಿಕ ಸಂಸ್ಕೃತಿಯನ್ನು ಕಾಣಬಹುದಾಗಿದೆ. ಕನ್ನಡ ಮತ್ತು ತೆಲುಗು ಎರಡು ಭಾಷೆಗಳನ್ನು ಒಳಗೊಂಡಿರುವ ಒಂದು ಕೋಲು ಪದವನ್ನು ಉದಾಹರಣೆಯಾಗಿ ನೋಡಬಹುದಾಗಿದೆ. ಮ್ಯಾಸಬೇಡ ಸಮುದಾಯದಲ್ಲಿ ಕೋಲಾಟ ಪ್ರದರ್ಶನ ಮಾಡುವ ಕಾಲಕ್ಕೆ ಕನ್ನಡ ಮತ್ತು ತೆಲುಗು ಎರಡು ಭಾಷೆಗಳು ಬಳಕೆಯಾಗಿರುವ ಕೋಲುಪದಗಳನ್ನು ಹಾಡುವುದು ಕಂಡುಬರುತ್ತದೆ. ಇವರು ಮೂಲತಃ ಆಂಧ್ರದಿಂದ ವಲಸೆ ಬಂದವರು. ಹಾಗಾಗಿ ಇವರ ಕೋಲಾಟದಲ್ಲಿ ಕನ್ನಡ-ಕೋಲುಪದಗಳಲ್ಲಿ ತೆಲುಗು ನುಡಿಗಳು ಬೆರಕೆಯಾಗುವುದು ಸಹಜ ಪ್ರಕ್ರಿಯೆಯಾಗಿದೆ. ಕನ್ನಡ ಕೋಲಾಟ ಪದಗಳಲ್ಲಿ ತೆಲುಗು ನುಡಿಯೊಂದು ಬೆರಕೆಯಾಗಿರುವ ಕೋಲಾಟ ಪದವನ್ನು ಉದಾಹರಣೆಗೆ ನೋಡಬಹುದು.

"ಟಗರು ಟಗರು ಪೋಟುಲಾಡೆ
ಗೆಜ್ಜೆ ಘಲ್ಲೆಂದವೊ
ಮಾಳಿಗೆ ಮೇಗಳ ಮಜ್ಜಿಗೆ ಸಾರು
ಗಾಳಿ ಬೋರಂದವೊ
ಕಣ್ಣಿತಾರ ಕಣ್ಣಿಯೊಂದು
ದನ ಕಟ್ಟ ಕಣ್ಣಿಯೋ
ಸರಪಣಿ ತಾರ ಸರಪಣಿಯೋ
ಸರಳೆಮ್ಮ ಕಟ್ಟ ಸರಪಣಿಯೋ"

(ವಕ್ತೃ: ಕುರಿಬೋರಯ್ಯ, ಬೋಸೇದೇವರಹಟ್ಟಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಮ್ಯಾಸಬೇಡರು ಆಂಧ್ರಪ್ರದೇಶದಿಂದ ಬಂದು ಕರ್ನಾಟಕದ ಗಡಿಪ್ರಾಂತ ಪರಿಸರದಲ್ಲಿ ನೆಲೆಸಿದರು. ಇವರು ಪಶುಪಾಲನೆ ಮಾಡುತ್ತಾ ವಲಸೆ ಬಂದಿದ್ದಾರೆ ಎಂಬುದಕ್ಕೆ ಅವರ

ಮಾತೃಭಾಷೆಯೆ ಸಾಕ್ಷಿ. ಇವರು ಕರ್ನಾಟಕದಲ್ಲಿ ನೆಲೆಸಿ ಹಲವು ದಶಕಗಳು ಅಥವಾ ಶತಮಾನಗಳು ಕಳೆದರೂ ಸಹ ತಮ್ಮ ಬಂಧು ಬಳಗದವರ ಹತ್ತಿರ ಇಂದಿಗೂ ತೆಲುಗು ಭಾಷೆಯನ್ನೇ ಬಳಸುವುದು ಕಂಡುಬರುತ್ತದೆ. ನುಡಿಬೆರಕೆ ಮತ್ತು ನುಡಿಜಿಗಿತಗಳು ಕೇವಲ ಸಂವಹನ ಸಂದರ್ಭದಲ್ಲಿ ಮಾತ್ರವಲ್ಲದೆ ಇವರು ಹಾಡುವ ಜನಪದ ಕಥೆ, ಗೀತೆ ಸೇರಿದಂತೆ ಕೋಲಾಟದಂಥ ಗೀತಸಾಹಿತ್ಯ ಪ್ರಕಾರದಲ್ಲಿಯೂ ನುಡಿಬೆರಕೆಯಾಗುವುದು ಸಾಮಾನ್ಯ ಸಂಗತಿ. ಕರ್ನಾಟಕ-ಆಂಧ್ರದ ಗಡಿ ಪ್ರಾಂತ ಪರಿಸರದ ಮ್ಯಾಸಬೇಡ ಸಮುದಾಯದ ಕೋಲುಪದಗಳಲ್ಲಿ ಕನ್ನಡದ ಜೊತೆಗೆ ತೆಲುಗಿನ ಕೋಲುಪದಗಳನ್ನು ಹಾಡುವುದು ಮತ್ತು ಪ್ರದರ್ಶನ ಮಾಡುವುದು ಕಂಡುಬರುತ್ತದೆ. ಇವರ ಕೋಲುಪದಗಳಲ್ಲಿ ಸಮಾಜದಲ್ಲಿರುವ ಓರೆ-ಕೋರೆಗಳನ್ನು ತಿದ್ದುವ ಮತ್ತು ವ್ಯಂಗ್ಯದಿಂದ ವಿಡಂಬನೆ ಮಾಡುವ ಹಾಗೂ ಗಂಡ-ಹೆಂಡತಿಯ ಸರಸ-ಸಲ್ಲಾಪ, ವಿರಸಗಳು ಗೆಳೆಯ-ಗೆಳತಿಯರ ವಿರಹ ವೇದನೆ, ಅತ್ತೆ-ಮಾವಂದಿರ, ಅಳಿಯಂದಿರ ಹಾಸ್ಯ, ದೇವರು-ಸಾಂಸ್ಕೃತಿಕ ನಾಯಕ-ನಾಯಕಿಯರ ಕುರಿತಾದ ಭಕ್ತಿ ಆರಾಧನೆಯ ವಸ್ತುವಿಷಯವನ್ನು ಒಳಗೊಂಡಿರುವ ಹಾಡುಗಳನ್ನು ಕಾಣಬಹುದು. ಇವರ ಕೋಲುಪದಗಳಲ್ಲಿ ಹೆಚ್ಚಾಗಿ ಹಾಸ್ಯ, ವಿಡಂಬನೆ, ಪ್ರಣಯಕ್ಕೆ ಸಂಬಂಧಿಸಿದ ಹಾಡುಗಳನ್ನೇ ಹೆಚ್ಚಾಗಿ ಹಾಡುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಒಬ್ಬಳು ಮದುವೆಯಾದ ಹೆಣ್ಣು ಅಥವಾ ಮಕ್ಕಳಿಲ್ಲದವಳು ಒಂದು ಕುಂಬಳಗಿಡವನ್ನು ತೋಟದಲ್ಲಿ ಅಥವಾ ಹೊಲದಲ್ಲಿ ಹೂತಾಗ ಅದು ಬೆಳೆದು ಫಲ ನೀಡದಿದ್ದಾಗ ಅವಳನ್ನು ಜನಪದರು ಕೋಲುಪದಗಳಲ್ಲಿ ಹೇಗೆ ಕಾಣುತ್ತಾರೆ ಮತ್ತು ನಡೆಸಿಕೊಳ್ಳುತ್ತಾರೆ ಎಂಬುದರ ಕುರಿತಾಗಿ ಈ ಸಮುದಾಯದಲ್ಲಿ ಕರ್ನಾಟಕಾಂಧ್ರದ ಗಡಿ ಪರಿಸರದಲ್ಲಿ ಪ್ರಚಲಿತವಿರುವ ಒಂದು ತೆಲುಗು ಗೀತೆಯನ್ನು ಉದಾಹರಣೆಯಾಗಿ ನೋಡಬಹುದು. ಈ ಹಾಡಿನಲ್ಲಿ ಅಬಲೆಯಾದ ಹೆಣ್ಣನ್ನು ವ್ಯಂಗ್ಯದಿಂದ ವಿಡಂಬಿಸಿರುವುದಿದೆ. ಕರ್ನಾಟಕ-ಆಂಧ್ರ ಗಡಿಪ್ರಾಂತ ಪರಿಸರದಲ್ಲಿ ಪ್ರಚಲಿತವಾಗಿರುವ ಒಂದು ತೆಲುಗು ಕೋಲಾಟ ಪದ.

ಗೊಡ್ಡು ಮುಂಡೇಸಿನ ಗುಮ್ಮಾಡಿರೋ
ಇದಿ ಬಂಜ ಮುಂಡೇಸಿನ ಗುಮ್ಮಾಡಿರೋ
ತ್ವಾಟಕಿ ಹಬ್ಯಾದೆ ಗುಮ್ಮಾಡಿರೋ
ತ್ವಾಟ ಮುಗಳಾಕಿ ಹಬ್ಯಾದೆ ಗುಮ್ಮಾಡಿರೋ
ಕಾಯಾನ್ನ ಕಾಯಾದು ಗುಮ್ಮಾಡಿರೋ
ಇದಿ ಪೂವನ್ನ ಕಾಯಾದು ಗುಮ್ಮಾಡಿರೋ
ಗೊಡ್ಡು ಮುಂಡೇಸಿನ ಗುಮ್ಮಾಡಿರೋ
ಇದಿ ಬಂಜ ಮುಂಡೇಸಿನ ಗುಮ್ಮಾಡಿರೋ"

(ವಕ್ತೃ: ಓಬಯ್ಯ, ದೊಣಮಂಡಲಹಟ್ಟಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಮದುವೆಯಾದ ಒಬ್ಬಾಕೆ ಹೆಣ್ಣು, ಮಕ್ಕಳ ಫಲವಿಲ್ಲದವಳು ತೋಟದಲ್ಲಿ ಅಥವಾ ಹೊಲದಲ್ಲಿ ಒಂದು ಕುಂಬಳಕಾಯಿಯ ಬೀಜವನ್ನು ಹೂತು ಅದಕ್ಕೆ ನೀರುಣಿಸಿ ಗೊಬ್ಬರ ಹಾಕಿ ಬೆಳೆಸಿದ್ದಾಳೆ.

ಕುಂಬಳ ಗಿಡವು ಬೆಳೆದು ದೊಡ್ಡದಾಗಿ ತೋಟದ ತುಂಬೆಲ್ಲ ಹರಡಿಕೊಂಡಿದೆ ಮತ್ತು ತೋಟಕ್ಕೆ ಮೆರುಗು ಕೊಡುವಂತೆ ಫಲವತ್ತತೆಯಿಂದ ಬೆಳೆದಿದೆ ಹಾಗೂ ವಿಶಾಲವಾಗಿ ಹಬ್ಬಿಕೊಂಡಿದೆ. ತೋಟದ ತುಂಬ ಹರಡಿಕೊಂಡರೂ ಒಂದು ಹೂವನ್ನಾದರೂ ಬಿಡುತ್ತಿಲ್ಲ ಮತ್ತು ಒಂದು ಕಾಯನ್ನಾದರೂ ಬಿಡುತ್ತಿಲ್ಲ. ಅದಕ್ಕೆ ಕಾರಣ ಎಂದರೆ ಮಕ್ಕಳ ಫಲವಿಲ್ಲದ ಹೆಣ್ಣು ಈ ಕುಂಬಳ ಗಿಡವನ್ನು ಹಾಕಿದ್ದಾಳೆ ಎಂಬ ದೋಷಕ್ಕೆ ಕುಂಬಳಕಾಯಿ ಹೂವು ಕಾಯುತ್ತಿಲ್ಲ ಮತ್ತು ಕಾಯಿ ಬಿಡುತ್ತಿಲ್ಲ ಎಂಬುದು ಹೆಣ್ಣಿನ ಮೇಲೆ ಆರೋಪಿಸಿರುವುದು ಈ ಕೋಲಾಟ ಪದದಿಂದ ತಿಳಿದುಬರುತ್ತದೆ.

ಮಕ್ಕಳ ಫಲವಿಲ್ಲದ ಸ್ತ್ರೀಯರನ್ನು ಕೆಲವು ಶತಮಾನಗಳ ಹಿಂದೆ ಹೇಗೆ ನಡೆಸಿಕೊಳ್ಳುತ್ತಿದ್ದರೆಂಬುದಕ್ಕೆ ಈ ಕೋಲುಪದವು ಉದಾಹರಣೆಯಂತಿದೆ. ಕುಂಬಳ ಬಳ್ಳಿಯು ಹೂವು ಮತ್ತು ಕಾಯಿಗಳನ್ನು ಬಿಡದಿರುವುದು ಆ ನೆಲದ ಗುಣದಿಂದಲೋ ಅಥವಾ ಆ ಕುಂಬಳ ಬೀಜವು ಆ ನೆಲಕ್ಕೆ ಸರಿಯಾಗಿ ಒಗ್ಗಿಕೊಳ್ಳದೇ ಫಲ ನೀಡದೆ ಹೋಗಿರಬಹುದು ಇಲ್ಲವೆ ಕುಂಬಳ ಬೀಜವು ಫಲವಂತಿಕೆಯ ಅಂಶಗಳನ್ನು ಕಳೆದುಕೊಂಡು ಹೂ ಮತ್ತು ಕಾಯಿಯನ್ನು ಬಿಡದೆ ಹೋಗಿರಬಹುದು. ಹಾಗಾಗಿ ಮಕ್ಕಳ ಫಲವಿಲ್ಲದ ಹೆಣ್ಣು ಕುಂಬಳ ಬೀಜವನ್ನು ಹಾಕಿದಳು ಎಂಬ ಒಂದೇ ಕಾರಣಕ್ಕೆ ಕುಂಬಳ ಬಳ್ಳಿಯು ಕೂಡ ಫಲ ನೀಡದೆ ಬಂಜೆಯಾಗಿದೆ ಎಂದು ಈ ಕೋಲು ಪದದಲ್ಲಿ ಪ್ರಸ್ತಾಪಿಸಿರುವುದು ಹೆಣ್ಣಿನ ಅಸ್ತಿತ್ವವನ್ನು ಕಸಿದುಕೊಳ್ಳುವ ಪ್ರಯತ್ನವಾಗಿದೆ ಎಂಬುದನ್ನು ಇಲ್ಲಿ ಮನಗಾಣಬಹುದು.

ಈ ಕೋಲುಪದವನ್ನು ಇನ್ನೊಂದು ನಿಟ್ಟಿನಲ್ಲಿ ವಿಚಾರಿಸಿ ಹೇಳುವುದಾದರೆ, ಇಲ್ಲಿ ಮಕ್ಕಳಿಲ್ಲದೆ ಬಂಜೆತನವನ್ನು ಅನುಭವಿಸುವಂತಹ ಹೆಣ್ಣಿನಲ್ಲಿ ಯಾವುದೋ ಶಾರೀರಿಕ ಲೋಪದೋಷಗಳಿರಬಹುದು ಇಲ್ಲವೆ ಬಂಜೆ ಎನಿಸಿಕೊಂಡಂತಹ ಹೆಣ್ಣಿನ ಗಂಡನಲ್ಲಿಯ ದೈಹಿಕ ಲೋಪದೋಷಗಳಿರಬಹುದು. ಹಾಗೆಯೇ ಈ ಮಹಿಳೆಯು ಹಾಕಿದ ಕುಂಬಳ ಗಿಡದಲ್ಲಿ ಫಲವಂತಿಕೆಗೆ ಬರಲು ಅಲ್ಲಿನ ಭೂಮಿ ಯೋಗ್ಯವಾಗಿಲ್ಲದಿರಬಹುದು ಅಥವಾ ಕುಂಬಳ ಬೀಜದ ಲೋಪವಿರಬಹುದು. ಹೀಗೆ ಈ ಕೋಲುಪದವು ಹಲವು ರೀತಿಯ ಆಲೋಚನೆಗಳಿಗೆ ದಾರಿ ಮಾಡಿದೆ.

ಕರ್ನಾಟಕದ ಗಡಿ ಪ್ರಾಂತ ಪರಿಸರಕ್ಕೆ ಹೊಂದಿಕೊಂಡಿರುವ ಆಂಧ್ರಪ್ರದೇಶದ ಅನಂತಪುರ ರಾಯದುರ್ಗ ಮತ್ತು ಕಲ್ಯಾಣದುರ್ಗ, ಕರ್ನೂಲು, ಆಲೂರು, ಹೊಳಗುಂದ, ಮಾರ್ಲಮಡಿಕಿ ಆಂಧ್ರ-ಕರ್ನಾಟಕ ಪ್ರಾಂತದಲ್ಲಿ ಬೇಡ ನಾಯಕರೆ ಹೆಚ್ಚಾಗಿ ನೆಲೆಸಿರುವುದು ಕಂಡುಬರುತ್ತದೆ. ಇವರು ಮೂಲತಃ ಕರ್ನಾಟಕದವರಾಗಿದ್ದರೆಂಬುದು ೯ನೇ ಶತಮಾನದ ಕವಿರಾಜಮಾರ್ಗಕಾರ-ಕಾವೇರಿಯಿಂದ ಮಾ ಗೋದಾವರಿ ವರಮಿರ್ಪ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ ಎಂಬ ಉಕ್ತಿಯಿಂದ ವಿಧಿತವಾಗಿದೆ ಮತ್ತು ೧೯೫೬ ಭಾಷಾವಾರು ಪ್ರಾಂತ ವಿಂಗಡಣೆ ಮಾಡುವುದಕ್ಕೂ ಮುಂಚೆ ಇವು ಕರ್ನಾಟಕದ ಮೈಸೂರು ರಾಜ್ಯಕ್ಕೆ ಸೇರ್ಪಡೆಗೊಂಡಿದ್ದವು. ಭಾಷಾವಾರು ಪ್ರಾಂತ ವಿಂಗಡಣೆಯಿಂದ ಕನ್ನಡ ಮಾತಾಡುವ ಅನಂತಪುರ, ಕರ್ನೂಲು,

ಆಲೂರು, ಆದೋನಿ, ರಾಯದುರ್ಗ ಮತ್ತು ಕಲ್ಯಾಣದುರ್ಗಗಳು ಆಂಧ್ರಪ್ರದೇಶದ ವ್ಯಾಪ್ತಿಗೆ ಸೇರ್ಪಡೆಯಾಗಿರುವುದು ಈಗ ಇತಿಹಾಸ.

ಆಂಧ್ರಪ್ರದೇಶದ ಗಡಿ ಪ್ರಾಂತದಲ್ಲಿ ಬೇಡನಾಯಕರ ಸಮುದಾಯದವರು ಹೆಚ್ಚಾಗಿ ನೆಲೆಸಿದ್ದಾರೆ. ಇವರು ತೆಲುಗನ್ನು ಹೇಗೆ ಮಾತನಾಡುತ್ತಾರೋ ಹಾಗೆಯೇ ಕನ್ನಡವನ್ನು ಸಹ ಸರಾಗವಾಗಿ ಮಾತನಾಡುವುದನ್ನು ಕಾಣಬಹುದು. ಇವರು ಕನ್ನಡ ಮತ್ತು ತೆಲುಗು ಎರಡೂ ಭಾಷೆಗಳನ್ನು ಸಮಾನವಾಗಿ ಬಳಸುತ್ತಿರುವುದರಿಂದ ಅಥವಾ ಮಾತನಾಡುತ್ತಿರುವುದರಿಂದ ದ್ವಿಭಾಷಿಕರು ಎನಿಸಿಕೊಳ್ಳುತ್ತಾರೆ. ಈ ಸಮುದಾಯದವರು ಕನ್ನಡ-ತೆಲುಗು ನಾಡುಗಳ ಗಡಿ ಪ್ರಾಂತಗಳಲ್ಲಿ ನೆಲೆಸಿರುವುದರಿಂದ ದ್ವಿಭಾಷಿಗಳಾಗಿದ್ದಾರೆ ಮತ್ತು ಗಡಿ ಪ್ರಾಂತಗಳಲ್ಲಿ ನೆಲೆಸಿರುವ ನಾಯಕ ಸಮುದಾಯದ ಜನಪದ ಗೀತ ಸಾಹಿತ್ಯದಲ್ಲಿ ಕಥೆ, ಗಾದೆ, ಒಗಟು, ಬಯಲಾಟ, ಸಾಮಾಜಿಕ ನಾಟಕ, ಪೌರಾಣಿಕ ನಾಟಕ, ತೊಗಲುಗೊಂಬೆಯಾಟ, ಬುರ್ರಕಥಾ ಮತ್ತು ಕೋಲಾಟ ಇತ್ಯಾದಿ ಜನಪದ ಕಲೆಗಳಲ್ಲಿನ ಸಾಹಿತ್ಯದಲ್ಲಿ ಕನ್ನಡ -ತೆಲುಗು ಅಥವಾ ತೆಲುಗು -ಕನ್ನಡ ನುಡಿಗಳು ತಳಕು ಹಾಕಿಕೊಂಡಿರುವುದು ಕಂಡುಬರುತ್ತದೆ. ಕರ್ನಾಟಕದ ಬಳ್ಳಾರಿ, ತುಮಕೂರು, ಚಿತ್ರದುರ್ಗ ಮತ್ತು ಕೋಲಾರ ಆಂಧ್ರಪ್ರದೇಶದ ಗಡಿ ಭಾಗಕ್ಕೆ ಹೊಂದಿಕೊಂಡಿರುವುದರಿಂದ ತೆಲುಗಿನ ಜನಪದ ಗೀತೆ ಮತ್ತು ಕಲೆಗಳ ಮೇಲೆ ಮತ್ತು ಸಂವಹನದ ಮೇಲೆ ಕನ್ನಡದ ಪ್ರಭಾವ ಆಗಿರುವುದು ಸಹಜವಾಗಿ ಕಂಡುಬರುತ್ತದೆ.

ಕರ್ನಾಟಕ - ಆಂಧ್ರ ಗಡಿ ಪರಿಸರದ ತೆಲುಗು ಪ್ರದೇಶಗಳಲ್ಲಿ ಕನ್ನಡ ಕೋಲಾಟ ಪದಗಳನ್ನು ಹಾಡುತ್ತಾ ಕೋಲಾಟ ಪ್ರದರ್ಶನ ಮಾಡುವುದು ಕಂಡುಬಂದಿದೆ. ತೆಲುಗು ನಾಡಿನ ಗಡಿ ಪ್ರಾಂತ ಪರಿಸರದಲ್ಲಿ ಕನ್ನಡ ಕೋಲುಪದಗಳನ್ನು ಹಾಡುವಾಗ ಅವರ ಅರಿವಿಗೆ ಬಾರದೇ ತೆಲುಗು ನುಡಿಗಳು ಬೆರಕೆಯಾಗಿರುವುದು ಕಂಡುಬಂದಿದೆ. ತೆಲುಗುನಾಡಿನ ತೆಲುಗು ಕೋಲುಪದದಲ್ಲಿ ಕನ್ನಡ ನುಡಿಗಳ ನುಸುಳಿವಿಕೆಯಾಗಿರುವುದು ಕಂಡು ಬರುತ್ತದೆ. ಉದಾಹರಣೆಗೆ,

"ರಡುಮೆ ಚೂಸ್ತಾಮು ರಾರಾ ಬೊಬ್ಬುಲ ನಾಗಿರೆಡ್ಡಿ
ಮಾಡಿ ಮೀದ ಮಾಡಿ ಕಟ್ಟಿ ಏಡು ಮಾಳ ಇಲ್ಲು ಕಟ್ಟಿ
ಯಾಟಿಕಂಟೆ ಆಟಿಕೆ ಪೊರಾಯ್ಯೆ ನಾಗಿರೆಡ್ಡಿ
ಹೇ ಮೀಸಮ್ಮೆನ ದೂಬಿನಾಡು ನಿಂಬೆಕಾಯಿ ನಿಲುಪಿನಾಡು"

(ವಕ್ತೃ:- ತಿಕ್ಕಯ್ಯ, ಹೊಳಗುಂದ, ಆಲೂರು ತಾಲ್ಲೂಕು, ಕರ್ನೂಲ್ ಜಿಲ್ಲೆ)

ಈ ತೆಲುಗು ಕೋಲು ಪದದಲ್ಲಿ 'ನಿಂಬೆಕಾಯಿ' ಎನ್ನುವ ಕನ್ನಡ ನುಡಿಯು ನುಸುಳಿ ನುಡಿಬೆರಕೆಯಾಗಿರುವುದು ಕಂಡುಬಂದಿದೆ. ಇಲ್ಲಿ ಕನ್ನಡದ 'ನಿಂಬೆಕಾಯಿ' ಪದಕ್ಕೆ ಬದಲಾಗಿ ತೆಲುಗಿನ 'ನಿಮ್ಮಕಾಯಿ' ಎಂದಾಗಬೇಕಿತ್ತು. ಆದರೆ ಈ ಪ್ರಾಂತದ ಜನರು ತೆಲುಗು ಭಾಷೆಯ ಮೇಲೆ ಕನ್ನಡದ ಪ್ರಭಾವ ಆಗಿರುವುದರಿಂದ ತೆಲುಗು ಭಾಷಿಕರ ಅರಿವಿಗೆ ಬಾರದೆ ಕನ್ನಡದ

ನಿಂಬೆಕಾಯಿ ಎನ್ನುವಂತಹ ನುಡಿಯು ಬೆರೆತು ಹೋಗಿರುವುದನ್ನು ಕಾಣಬಹುದಾಗಿದೆ. ಕೋಲಾಟ ಪದಗಳಲ್ಲಿ ಮತ್ತು ಇತರೆ ಜನಪದ ಗೀತ ಸಾಹಿತ್ಯದಲ್ಲಿ ಈ ತರಹದ ಉದಾಹರಣೆಗಳು ಗಡಿ ಪ್ರಾಂತ ಪರಿಸರದಲ್ಲಿ ಆಗುವುದು ಸರ್ವೇಸಾಮಾನ್ಯ. ಏಕೆಂದರೆ ಕನ್ನಡ-ತೆಲುಗು ಎರಡೂ ಭಾಷೆಯ ಸಂವಹನಕಾರರು ಗಡಿ ಪರಿಸರದಲ್ಲಿ ನೆಲೆಸಿರುವುದರಿಂದ ಈ ರೀತಿಯ ನುಡಿ-ನುಸುಳುವಿಕೆಗಳು ಸಹಜವಾಗಿ ಜರುಗುತ್ತವೆ.

ಹೀಗೆ ಕರ್ನಾಟಕದ ಗಡಿ ಪ್ರಾಂತಗಳಲ್ಲಿ ಮತ್ತು ಆಂಧ್ರಪ್ರದೇಶದ ಗಡಿ ಪ್ರಾಂತ ಪರಿಸರದಲ್ಲಿ ಹೆಚ್ಚಾಗಿ ಬೇಡ(ನಾಯಕರು)ರು ನೆಲೆಸಿರುವುದರಿಂದ ಕೋಲಾಟವನ್ನು ಹೆಚ್ಚಾಗಿ ಅವರೇ ಆಡುತ್ತಿರುವುದು ಕಂಡುಬರುತ್ತದೆ. ಹಾಗೆಯೇ ಇವರು ಯಾವುದೇ ಭೇದ-ಭಾವ ಎಣಿಸದೆ ಇತರೆ ಸಮುದಾಯಗಳೊಂದಿಗಿನ ಕಲೆಗಳಲ್ಲಿ ಕೊಡು-ಪಡೆ ಮಾಡಿಕೊಂಡಿರುವುದು ಕಂಡುಬರುತ್ತದೆ. ಕರ್ನಾಟಕ - ಆಂಧ್ರ ಗಡಿ ಪರಿಸರ ನಾಯಕರೊಂದಿಗೆ ಕಾಡುಗೊಲ್ಲರು, ಕುರುಬರು ಮತ್ತು ಮಾದಿಗರು ನೆಲೆಸಿದ್ದಾರೆ. ನಾಯಕರು ಕೋಲಾಟದ ವೈಶಿಷ್ಟ್ಯಗಳನ್ನು ಕಾಡುಗೊಲ್ಲರಿಂದ ಕಲಿತು ಅಭ್ಯಾಸ ಮಾಡಿದ್ದಾರೆ ಎಂದು ಈ ಗಡಿ ಪ್ರಾಂತಗಳಲ್ಲಿ ಕೋಲಾಟದಿಂದ ತಿಳಿಯುತ್ತದೆ. ಮೊಳಕಾಲ್ಮೂರು - ಕಂಪಳದೇವರಹಟ್ಟಿ, ಪೂಜಾರಿಮಲ್ಲಯ್ಯ, ಕೂಡ್ಲಿಗಿಯ ಓಬಳೇಶ ಅವರು ಹೇಳುವಂತೆ - ಕೋಲು ಕಲೆಯನ್ನು 'ಕಾಡುಗೊಲ್ಲರ ಕೋಲು ಮೇಳಗಾರರರಿಂದ ಕಲಿತೆವು" ಎಂದು ಹೇಳಿದ್ದಾರೆ. ಇವರ ಹೇಳಿಕೆಯನ್ನು ಗಮನಿಸಿದರೆ ಕೋಲಾಟದ ಗತಿ-ಹೆಜ್ಜೆಗಳಲ್ಲಿ, ವೈವಿಧ್ಯತೆಗಳಲ್ಲಿ ನಾಯಕರಿಗಿಂತ ಕಾಡುಗೊಲ್ಲರು ಹೆಚ್ಚು ನೈಪುಣ್ಯತೆಯನ್ನು ಪಡೆದವರಾಗಿದ್ದಾರೆ ಎಂದು ಹೇಳಬಹುದು. ಕೃಷ್ಣನೊಂದಿಗೆ ಗೊಲ್ಲತಿಯರು ಕೋಲಾಟ ಪ್ರದರ್ಶನ ಮಾಡಿದ್ದರು ಎನ್ನುವ ಕುರುಹುಗಳನ್ನು ಗಮನಿಸಿದರೆ ಗೊಲ್ಲರು ನಾಯಕರಿಗಿಂತ ಕೋಲಾಟದಲ್ಲಿ ಪ್ರಸಿದ್ಧಿ ಪಡೆದ ಸಮುದಾಯವಾಗಿದೆ ಎಂಬುದು ಸ್ಪಷ್ಟವಾಗಿ ಗೋಚರವಾಗುತ್ತದೆ.

ಕರ್ನಾಟಕ - ಆಂಧ್ರ ಗಡಿ ಪರಿಸರದಲ್ಲಿ ಈ ಎಲ್ಲ ಸಮುದಾಯಗಳೊಂದಿಗೆ ಬಾಂಧವ್ಯ ಬೆಳೆಸಿಕೊಂಡು ಪ್ರತಿಯೊಂದು ಕಲೆಯನ್ನು ಬೇರೆ ಬೇರೆ ಸಮುದಾಯಗಳಿಂದ ಕೊಡು-ಪಡೆ ಮಾಡುವುದು ಗಡಿ ಪ್ರಾಂತಗಳಲ್ಲಿ ನಡೆಯುತ್ತದೆ. ಹಾಗೆಯೇ ನಾಯಕ ಸಮುದಾಯ ಕೋಲಾಟದಲ್ಲಿ ಗಡಿ ಪ್ರಾಂತ ಪರಿಸರದಲ್ಲಿ ಪ್ರಸಿದ್ಧಿ ಪಡೆದ ಸಮುದಾಯವೆಂದೇ ಗುರುತಿಸಿಕೊಂಡರೆ ಈ ಸಮುದಾಯದಲ್ಲಿ ಕನ್ನಡ - ತೆಲುಗು ಎರಡು ಭಾಷೆಗಳಲ್ಲಿ ಕೋಲಾಟದ ಹಾಡುಗಳನ್ನು ಹಾಡುತ್ತಾರೆ ಮತ್ತು ಕೋಲು ಪ್ರದರ್ಶನವನ್ನು ಮಾಡುತ್ತಾರೆ. ಕರ್ನಾಟಕ ಗಡಿ ಪ್ರಾಂತ ಪರಿಸರದ ನಾಯಕ ಸಮುದಾಯದವರ ಕೋಲುಪದಗಳಲ್ಲಿ ಕನ್ನಡ ಮತ್ತು ತೆಲುಗು ಎರಡು ಪರಸ್ಪರ ಪ್ರಭಾವಿಸಿಕೊಂಡಿವೆ ಮತ್ತು ಕನ್ನಡ ಕೋಲುಪದಗಳಲ್ಲಿ ತೆಲುಗು ನುಡಿಗಳು ಸೇರಿ ಹೋಗಿವೆ. ಹಾಗೆಯೇ ಆಂಧ್ರಪ್ರದೇಶದ ಗಡಿ ಪ್ರಾಂತ ಪರಿಸರದಲ್ಲಿ ತೆಲುಗು ಮತ್ತು ಕನ್ನಡ ಹಾಡುಗಳು ಸಿಗುತ್ತವೆ. ಹಾಗೆಯೇ ತೆಲುಗಿನ ಮೇಲೆ ಕನ್ನಡದ ಪ್ರಭಾವ ಆಗಿರುವಂತೆ ತೆಲುಗು ಕೋಲುಪದಗಳಲ್ಲಿ ಕನ್ನಡ ನುಡಿಗಳು

ಬೆರಕೆಯಾಗಿರುವುದು ಕಂಡು ಬರುತ್ತದೆ. ಕರ್ನಾಟಕಾಂಧ್ರ ಗಡಿ ಪರಿಸರವು ಎರಡು ಭಾಷೆ ಅಥವಾ ಎರಡಕ್ಕಿಂತ ಹೆಚ್ಚು ಭಾಷೆ ಮತ್ತು ಸಂಸ್ಕೃತಿಗಳನ್ನು ಒಳಗೊಂಡಿರುವುದರಿಂದ ಕೋಲು ಪದಗಳಲ್ಲಿ ಕನ್ನಡ ಮತ್ತು ತೆಲುಗು ಪದಗಳು ಮತ್ತು ಎರಡೂ ಭಾಷೆಗಳೂ ಪರಸ್ಪರ ಪ್ರಭಾವಿಸಿಕೊಂಡಿರುವುದನ್ನು ಮನಗಾಣಬಹುದು.

### ೬.೧.೨. ಕಾಡುಗೊಲ್ಲ ಸಮುದಾಯದ ಕೋಲಾಟ ಪದಗಳು

"ಕಾಡುಗೊಲ್ಲ" ಎಂಬ ಪದ ಕಾಡು ಮತ್ತು ಗೊಲ್ಲ ಎಂಬೆರಡು ಪದಗಳ ಸಂಯೋಜನೆಯಿಂದ ಕಾಡುಗೊಲ್ಲ ಎಂದಾಗಿದೆ. 'ಕಾಡು' ಎಂಬ ಪದಕ್ಕೆ ಕಾನನ, ವನ, ಅಡವಿ, ಅರಣ್ಯ ಮುಂತಾದ ಸಮಾನಾರ್ಥಗಳಿವೆ. ಹಾಗೆಯೇ ಗೊಲ್ಲ ಎಂಬುದಕ್ಕೆ ಗೋವುಗಳನ್ನು ಕಾಯುವವ, ಗೋಪಾಲ, ದನಗಾಹಿ, ಗೋವಳ, ದನಕಾಯುವವನು, ಹಾಲು ಮೊಸರು ಮಾರುವವನು ಎಂಬರ್ಥಗಳಿವೆ. ಒಟ್ಟಿನಲ್ಲಿ ಕಾಡುಗೊಲ್ಲ ಎಂದರೆ ಕಾಡಿನಲ್ಲಿ ವಾಸಿಸುವ ಗೊಲ್ಲರೆಂದು ಅರ್ಥ ಬರುತ್ತದೆ. ಎಸ್.ಕೆ. ಸಣ್ಣೋಬಯ್ಯ ಅವರು ಕಾಡುಗೊಲ್ಲರ ಕುರಿತಾಗಿ ಈ ರೀತಿಯಾಗಿ ಅಭಿಪ್ರಾಯಿಸಿದ್ದಾರೆ. "ಕಾಡಾಡಿಗಳಾದ ಗೊಲ್ಲರು ಮೂಲತಃ ಬೇಟೆಗಾರರಾಗಿ ಕಾಲಾಂತರದಲ್ಲಿ ಪಶುಗಳ ಪಾಲಕರಾಗಿರುವುದರಿಂದ ಗೊಲ್ಲರೆನಿಸಿಕೊಂಡರು. ಕಾಡಾಡಿಗೊಲ್ಲರಿಗೆ ಕಾಡುಗೊಲ್ಲರು. 'ಅಡವಿಗೊಲ್ಲರು', 'ಹಟ್ಟಿಗೊಲ್ಲರು' ಎಂಬ ಹೆಸರುಗಳಿಂದಲೂ ಕರೆಯುತ್ತಾರೆ. ಕಾಡುಗೊಲ್ಲ ಎಂಬ ಪದ ಎರಡು ಭಿನ್ನ ಸಂಸ್ಕೃತಿಗಳ ಭಾಷಿಗರ ಸಂಗಮದ ಸಂಕೇತ ಇದು ಕಾಡು ಮತ್ತು ಗೊಲ್ಲ ಎಂಬೆರಡು ಶಬ್ದಗಳ ಜೋಡುನುಡಿ 'ಕಾಡು' ದ್ರಾವಿಡ ಮೂಲದ ಕನ್ನಡಿಗರ ಪದವಾದರೆ ಗೊಲ್ಲ(ಗೋವಲ) ಸಂಸ್ಕೃತ ಮೂಲದ ಆರ್ಯರ ಪದವಾಗಿದೆ. ಸಂಸ್ಕೃತ ಪದ ಗೋವ ಶಬ್ದದಿಂದ ಕನ್ನಡದ 'ಗೊಲ್ಲ' ಶಬ್ದ ರೂಪಗೊಂಡಿರುವುದು(ಸಣ್ಣೋಬಯ್ಯ.ಎಸ್.ಕೆ.; ೨೦೦೨; ಪುಟ ೨೪) ಎಂಬ ಅಭಿಪ್ರಾಯವಿದೆ.

ಕಾಡುಮೇಡುಗಳಲ್ಲಿ, ಬೆಟ್ಟ-ಗುಡ್ಡಗಳಲ್ಲಿ ಜೀವನ ಸಾಗಿಸುವ ಗೊಲ್ಲರು ಕಾಡುಗೊಲ್ಲರು, ಹಟ್ಟಿಗಳಲ್ಲಿ ಊರು, ಪಟ್ಟಣ, ನಗರ ಜೀವನಕ್ಕೆ ಹೊಂದಿಕೊಂಡು ಜೀವನ ಸಾಗಿಸುತ್ತಿರುವವರು ಊರುಗೊಲ್ಲರಾದರು. ಕಾಡುಗೊಲ್ಲರು ತಮ್ಮ ಹಟ್ಟಿಗಳ ಸುತ್ತಮುತ್ತ ಜಾಲಿಕಳ್ಳೆ, ಬಾರೆಕಳ್ಳೆ, ಸದೇರಕಳ್ಳೆ ಮುಂತಾಗಿ ಹಟ್ಟಿಯ ಸುತ್ತಮುತ್ತಲು ಕೈಗೆಟುಕುವ ಮುಳ್ಳಿನ ಗಿಡಕಂಟಿಗಳನ್ನು ಕಡಿದು ಬೇಲಿ ಹಾಕಿಕೊಂಡು ತಮ್ಮ ಹಟ್ಟಿಯ ಒಳಗೆ ಅಪರಿಚಿತರು ಪ್ರವೇಶ ಮಾಡದ ಹಾಗೆ ಜೋಪಾನ ಮಾಡಿಕೊಳ್ಳುವುದು ಇದೆ ಹಾಗೂ ಒಂದು ಕಡೆ ಮಾತ್ರ ಹಟ್ಟಿ ಹುದಿ ಅಥವಾ ಹೊಳೆ ಬಿಟ್ಟಿರುತ್ತಾರೆ. ಇದು ಇಂದಿಗೂ ಕೆಲವು ಕಾಡುಗೊಲ್ಲರು ಹಟ್ಟಿಗಳಲ್ಲಿ ಈ ರೀತಿ ಜೋಪಾನ ಮಾಡುವುದು ಅಥವಾ ಭದ್ರತೆಯನ್ನು ಮಾಡಿಕೊಳ್ಳುವುದು ಕಂಡುಬರುತ್ತದೆ.

ಎಸ್.ಕೆ. ಸಣ್ಣೋಬಯ್ಯನವರು ಕಾಡುಗೊಲ್ಲರು ತಮ್ಮನ್ನು ಹಟ್ಟಿಯೊಂದಿಗೆ ಗುರುತಿಸಿಕೊಳ್ಳುತ್ತಾರೆ ಎಂದು ಈ ರೀತಿ ಹೇಳುತ್ತಾರೆ. "ಕಾಡುಗೊಲ್ಲರು ತಮ್ಮನ್ನು ಹಟ್ಟಿಗೊಲ್ಲರು ಎಂದೇ ಹೆಚ್ಚು ಗುರುತಿಸಿಕೊಳ್ಳುತ್ತಾರೆ" (ಎಸ್.ಕೆ. ಸಣ್ಣೋಬಯ್ಯ, ೨೦೦೨, ಪು. ೨೫) ಎಂದು ಹೇಳಿರುವುದು

ಸೂಕ್ತವೆನಿಸುತ್ತದೆ. ಏಕೆಂದರೆ ಇಂದಿಗೂ ಕಾಡುಗೊಲ್ಲರು ನಗರ-ಪಟ್ಟಣಗಳಿಗೆ ಸುಮಾರು ೨೦-೨೫ ಕಿ.ಮೀ. ದೂರ ಉಳಿದು ತಾವು ಕಟ್ಟಿಕೊಂಡ ಹಟ್ಟಿಗಳಲ್ಲಿಯೇ ನೆಲೆಸಿರುವುದು ಕಂಡು ಬರುತ್ತದೆ. ಹಾಗೆಯೇ ಕಾಡುಗೊಲ್ಲರು ಹೆಚ್ಚಾಗಿ ಚಿತ್ರದುರ್ಗ, ಮೊಳಕಾಲ್ಮೂರು, ಚಳ್ಳಕೆರೆ ಮತ್ತು ಹಿರಿಯೂರು ಭಾಗಗಳಲ್ಲಿ ಹೆಚ್ಚಾಗಿ ನೆಲೆಸಿದ್ದಾರೆ.

ಕರ್ನಾಟಕದಲ್ಲಿ ಗೊಲ್ಲ ಸಮುದಾಯದ ಜನಪದಕಲೆ ಮತ್ತು ಸಾಹಿತ್ಯ ತುಂಬಾ ಶ್ರೀಮಂತವಾದುದ್ದು. ಜಾನಪದ ಕಲೆಗಳು ಮತ್ತು ರೂಢಿ ಸಂಪ್ರದಾಯಗಳು, ಆಚಾರ-ವಿಚಾರಗಳು ಇವರ ಜೀವನದ ಅವಿಭಾಜ್ಯ ಅಂಗವಾಗಿವೆ. ಗೊಲ್ಲ ಸಮುದಾಯದವರು ಅವಿದ್ಯಾವಂತರಾದರು. ತಮ್ಮ ಕಲೆ ಮತ್ತು ನಂಬಿಕೆಗಳನ್ನು ಒಂದು ಪೀಳಿಗೆಯಿಂದ ಮತ್ತೊಂದು ಪೀಳಿಗೆಗೆ ಸಾಗಿಸುತ್ತ ಬಂದಿದ್ದಾರೆ. ಗೊಲ್ಲರಲ್ಲಿ ಜಾನಪದ ಸಾಹಿತ್ಯವು ತುಂಬಾ ವಿಪುಲವಾಗಿ ಸಿಗುತ್ತದೆ. ಜಾನಪದ ಕಥೆ, ಕಾವ್ಯ, ನಾಟಕ, ಬಯಲಾಟ, ಕೋಲು, ಪೂಜಾ ಕುಣಿತ, ಗಣೆ ಊದುವುದು, ಡೋಲು ಬಾರಿಸುವುದು, ನಗಾರಿ ಬಾರಿಸುವುದು, ಸೋಬಾನೆ ಪದ ಹಾಡುವುದು, ಭಜನೆ ಪದ ಹಾಡುವುದು ಮತ್ತು ಮಣೇವು ಹಾಕುವುದು ಮುಂತಾದವು ಕಾಡುಗೊಲ್ಲರ ಜಾನಪದ ಗೀತೆ ಮತ್ತು ನೃತ್ಯಗಳೆನಿಸಿಕೊಂಡಿವೆ.

**ಕೋಲಾಟ**

ಕಾಡುಗೊಲ್ಲರ ಪ್ರದರ್ಶನ ಕಲೆಗಳಲ್ಲಿ ಅತ್ಯಂತ ಪ್ರಸಿದ್ಧಿ ಪಡೆದ ನೃತ್ಯ ಕಲೆಯೆಂದರೆ ಕೋಲಾಟ. ಗೊಲ್ಲರ ಹಟ್ಟಿಗಳಲ್ಲಿ ಕೋಲಾಟವು ಮುಖ್ಯ ಸ್ಥಾನ ಪಡೆದುಕೊಂಡಿದೆ. ಗ್ರಾಮೀಣ ಪ್ರದೇಶದ ಸಮುದಾಯಗಳಲ್ಲಿ ಕೋಲಾಟವು ಇಂದಿಗೂ ಪ್ರಾಮುಖ್ಯತೆಯನ್ನು ಉಳಿಸಿಕೊಂಡಿದೆ.

ಎಸ್.ಕೆ. ಸಣ್ಣೋಬಯ್ಯನವರು ಮ್ಯಾಸಬೇಡ ಮತ್ತು ಕಾಡುಗೊಲ್ಲರ ಕೋಲಾಟದ ಕುರಿತು ಹೀಗೆ ಅಭಿಪ್ರಾಯಿಸಿದ್ದಾರೆ. "ಕೋಲಾಟದಲ್ಲಿ ಕೋಲುಗಳೇ ಪ್ರಧಾನವಾಗಿರುವುದರಿಂದ ಹಾಡು ಮತ್ತು ನೃತ್ಯವು ಇದರಲ್ಲಿ ಸೇರುವುದರಿಂದ ಈ ಕಲೆಗೆ ಮತ್ತಷ್ಟು ಶೋಭೆ ಬಂದಿದೆ. ಹಬ್ಬ, ಜಾತ್ರೆ, ಉತ್ಸವ ಮೊದಲಾದ ಸಂದರ್ಭಗಳಲ್ಲಿ ಮ್ಯಾಸಬೇಡರು ಮತ್ತು ಕಾಡುಗೊಲ್ಲರು ಬಹಳ ಆಸಕ್ತಿಯಿಂದ ಕೋಲಾಟ ಆಡುತ್ತಾರೆ"(ಸಣ್ಣೋಬಯ್ಯ.ಎಸ್.ಕೆ.; ೨೦೦೨; ಪುಟ ೨೨೬) ಎಂದಿರುವುದು ಸೂಕ್ತವಾಗಿದೆ. ಕೋಲಾಟದಲ್ಲಿ ಶ್ರೀಮಂತವಾದ ಸಮುದಾಯವೆಂದರೆ ಗೊಲ್ಲ ಸಮುದಾಯವೆಂಬುದು ಹಲವು ವಿದ್ವಾಂಸರ ಅಭಿಪ್ರಾಯವಾಗಿದೆ. ವಿದ್ವಾಂಸರ ಅಭಿಪ್ರಾಯದಂತೆ ಕೋಲಾಟದಲ್ಲಿ ಗೊಲ್ಲ ಸಮುದಾಯ, ಇತರೆ ಸಮುದಾಯಗಳಿಗೆ ಮಾದರಿಯಾಗಿದೆ ಮತ್ತು ಗೊಲ್ಲ ಸಮುದಾಯದ ಕೋಲುಮೇಳಗಾರರು ಇತರೆ ಸಮುದಾಯಗಳಾದ ಕುರುಬ, ನಾಯಕ(ಬೇಡ) ಮತ್ತು ಮಾದಿಗ ಸಮುದಾಯಗಳಿಗೆ ಕೋಲಾಟವನ್ನು ಕಲಿಸುವುದು ಕಂಡುಬರುತ್ತದೆ.

ಕರ್ನಾಟಕದ ಪ್ರತಿಯೊಂದು ಗೊಲ್ಲರ ಹಟ್ಟಿಯಲ್ಲಿ ಕೋಲಾಟ ಆಡುವುದು ರೂಢಿಯಲ್ಲಿದೆ. ಇವರು ಮನೋರಂಜನೆಗಾಗಿ ಮತ್ತು ಬಿಡುವಿನ ಸಮಯದ ಸದುಪಯೋಗಕ್ಕಾಗಿ ಕೋಲಾಟವನ್ನು

ಪ್ರದರ್ಶನ ಮಾಡುತ್ತಾರೆ. ಗುರುಲಿಂಗಯ್ಯ ವಿ. ನಾಗಪ್ಪ ಅವರು ಗೊಲ್ಲರ ಕೋಲಾಟದ ಕುರಿತಾಗಿ ಈ ರೀತಿ ಹೇಳುತ್ತಾರೆ. "ದಿನವಿಡೀ ಕುರಿ ಸಾಕಾಣಿಕೆ ಮತ್ತು ಪಶುಪಾಲನೆ ಅಥವಾ ಕೃಷಿ ಕಾರ್ಯದಲ್ಲಿ ತೊಡಗಿ ದುಡಿದು ಸಂಜೆಯ ವೇಳೆ ಹಟ್ಟಿಯ ಜನರು ಮನರಂಜನೆಗೋಸ್ಕರ ಕೋಲಾಟವಾಡುತ್ತಾರೆ. ಇವರು ಹಬ್ಬ, ಜಾತ್ರೆ ಮತ್ತು ದೇವರ ಉತ್ಸವಗಳ ದಿನದಂದು ಕೋಲಾಟ ಆಡುತ್ತಾರೆ"(ಗುರುಲಿಂಗಯ್ಯ ಎಂ., ನಾಗಪ್ಪ.ವಿ.; ೨೦೦೮; ಪುಟ ೧೩೭) ಎಂದು ಅಭಿಪ್ರಾಯಿಸಿರುವುದು ಸೂಕ್ತವೆನಿಸುತ್ತದೆ.

ಇವರು ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಕೈಯಲ್ಲಿ ಕೋಲು ಹಿಡಿದುಕೊಂಡು ಕೋಲು ಪದವನ್ನು ಹಾಡುತ್ತ, ಹಾಡಿನ ಲಯ, ತಾಳಕ್ಕೆ ಅನುಗುಣವಾಗಿ ಕೋಲುಗಳನ್ನು ಕೋಲುಗಳಿಗೆ ತಾಕಿಸುತ್ತ ಮಂಡಲಾಕಾರವಾಗಿ ಸುತ್ತುತ್ತಾ ಹಾಡಿಗೆ ತಕ್ಕಂತೆ ನಿಧಾನವಾಗಿ ಹೆಜ್ಜೆ ಹಾಕುತ್ತಾ ಕೊನೆ ಕ್ಷಣದಲ್ಲಿ ರಭಸದಿಂದ ಸುತ್ತುತ್ತಾ ಕೊನೆ ಕೊನೆಗೆ ನಿಧಾನಗತಿಯಲ್ಲಿ ಕೋಲಾಟವಾಡುವುದು ಕಂಡುಬರುತ್ತದೆ. ಕೋಲಾಟ ಆಡುವವರು ಮೊದಲು ಗಣಸ್ತುತಿಯೊಂದಿಗೆ ಅಥವಾ ಕೃಷ್ಣ, ಈಶ್ವರ ಮುಂತಾದ ದೇವರುಗಳ ಪ್ರಾರ್ಥನೆಯೊಂದಿಗೆ ಪ್ರಾರಂಭ ಮಾಡಿ ಹಿಮ್ಮೇಳ ಮತ್ತು ಮುಮ್ಮೇಳದೊಂದಿಗೆ ಮುಗಿಸುತ್ತಾರೆ. ಕೋಲಾಟ ಪ್ರದರ್ಶನದ ಒಂದು ಸುತ್ತನ್ನು ಪೂರ್ಣಗೊಳಿಸಿದಾಗ ಇಲ್ಲವೆ ಕುಣಿದು ದಣಿವಾದಾಗ ಥೈಯ್ ಅದ್ದೈ ಡುರ್ ಅದ್ದೈ ಎಂದು ಮುಗಿಸುವುದು ಕಂಡುಬರುತ್ತದೆ. ಕಾಡುಗೊಲ್ಲರ ಕೋಲುಪದಗಳಲ್ಲಿ ಹಲವು ತೆರನಾದ ವಸ್ತುವೈವಿಧ್ಯತೆ ಒಳಗೊಂಡಿರುವುದು ಕಾಣಸಿಗುತ್ತದೆ. ಇವರ ಕೋಲು ಪದಗಳಲ್ಲಿ ಗಂಡ-ಹೆಂಡತಿಯರ ಸರಸ-ಸಲ್ಲಾಪಗಳು, ಗೆಳೆಯ-ಗೆಳತಿಯರ ಪ್ರೇಮ, ಮಾವ, ಸೊಸೆ, ಅತ್ತೆ-ಅಳಿಯರ ಹಾಸ್ಯ, ಕರುಣೆ, ಭಕ್ತಿ, ಶೃಂಗಾರ ಮೊದಲಾದ ರಸ ಪ್ರಕರಣಗಳು ಸ್ವಾರಸ್ಯಕರವಾಗಿರುತ್ತದೆ. ಹಾಗೆಯೇ ಕೋಲಾಟದಲ್ಲಿ ಹಲವು ರೀತಿಯ ಪ್ರಕಾರಗಳನ್ನು ಕಾಡುಗೊಲ್ಲರು ಪ್ರದರ್ಶನ ಮಾಡುತ್ತಾರೆ. ಒಂಟಿಕಡ್ಡಿ, ತಾಳಗಡ್ಡಿ, ಜೋಡು ಕಡ್ಡಿ, ಜಡೆಕೋಲು, ಕೊರವಂಜಿಕೋಲು ಇವರ ಕೋಲಾಟ ಪ್ರದರ್ಶನದಲ್ಲಿ ಅತ್ಯಂತ ಹೆಚ್ಚು ಪ್ರಮುಖವಾದ ಪ್ರದರ್ಶನವು ಕೊರವಂಜಿಯ ಕೋಲು ಆಗಿದೆ. ಕಾಡುಗೊಲ್ಲರು ಹಬ್ಬ, ಹುಣ್ಣಿಮೆ, ಜಾತ್ರೆ, ಉತ್ಸವಗಳಲ್ಲಿ ಕೋಲಾಟ ಪ್ರದರ್ಶನ ಮಾಡುವುದು ಸಾಮಾನ್ಯ. ಇಲ್ಲಿ ವೇಷಭೂಷಣಗಳಾಗಿ ಚಡ್ಡಿ ಚಲ್ಲಣ ಅಥವಾ ಕಚ್ಚೆಪಂಚೆಗಳನ್ನು ಕಲಾವಿದರು ತೊಟ್ಟಿರುತ್ತಾರೆ.

ಕಾಡುಗೊಲ್ಲರು ಮ್ಯಾಸಬೇಡರಂತೆ ಕರ್ನಾಟಕ ಆಂಧ್ರ ಗಡಿ ಗ್ರಾಮೀಣ ಪರಿಸರದಲ್ಲಿ ಹೆಚ್ಚಾಗಿ ನೆಲೆಸಿರುವುದು ಕಂಡುಬರುತ್ತದೆ. ಚಿತ್ರದುರ್ಗದ ಚಳ್ಳಕೆರೆ, ಮೊಳಕಾಲ್ಮೂರು, ಹಿರಿಯೂರು ಮಧ್ಯ ಕರ್ನಾಟಕಕ್ಕೆ ಸೇರಿದರೂ ಕೂಡ ಆಂಧ್ರ ಗಡಿ ಭಾಗಕ್ಕೆ ಹೊಂದಿಕೊಂಡಿದ್ದರೂ ಮ್ಯಾಸಬೇಡರಂತೆ ಇವರಿಗೆ ತೆಲುಗು ಬಾರದು. ಮ್ಯಾಸಬೇಡರ ಮನೆ ಮಾತು ತೆಲುಗು, ಗೊಲ್ಲರ ಮನೆಮಾತು ಕನ್ನಡ ಮತ್ತು ತುಮಕೂರು ಜಿಲ್ಲೆಯ ಆಂಧ್ರ ಗಡಿ ಭಾಗಕ್ಕೆ ಸೇರಿರುವ ಮಧುಗಿರಿ, ತುಮಕೂರು, ಕೊರಟಗೆರೆ ಮುಂತಾದ ಭಾಗಗಳಲ್ಲಿ ಕಂಡು ಬರುವ ಗೊಲ್ಲರು ಕನ್ನಡ ಮಾತೃಭಾಷೆಯಾದರೂ ತೆಲುಗು ಭಾಷೆಯನ್ನು ಮಾತನಾಡುತ್ತಾರೆ. ಕಾಡುಗೊಲ್ಲರು ಮ್ಯಾಸಬೇಡರಂತೆ ಆಂಧ್ರ - ಕರ್ನಾಟಕ

ಗಡಿ ಪ್ರಾಂತಗಳಲ್ಲಿ ನೆಲೆಸಿದ್ದರು ಮ್ಯಾಸಬೇಡರಂತೆ ಕೋಲು ಪದಗಳಲ್ಲಿ ತೆಲುಗು ಭಾಷೆಯ ಹಾಡುಗಳನ್ನು ಬಳಸುವುದು ಕಾಡುಗೊಲ್ಲರಲ್ಲಿ ಬಾರದು. ಇವರು ಕನ್ನಡದ ಹಾಡುಗಳಿಗೆ ಮಾತ್ರ ಕೋಲು ಪ್ರದರ್ಶನ ಮಾಡುವುದು ಕಂಡುಬರುತ್ತದೆ.

ಮಧ್ಯಕರ್ನಾಟಕಕ್ಕೆ ಹೊಂದಿಕೊಂಡಿರುವ ಆಂಧ್ರ ಗಡಿ ಪ್ರಾಂತ ಪರಿಸರದಲ್ಲಿ ನೆಲೆಸಿರುವ ಕಾಡುಗೊಲ್ಲರಲ್ಲಿ ಕನ್ನಡವು ಮಾತೃಭಾಷೆಯಾಗಿದೆ. ಕನ್ನಡ ಹೊರತುಪಡಿಸಿ ಬೇರಾವ ಭಾಷೆಯು ಅವರಿಗೆ ಬರುವುದಿಲ್ಲ. ಹಾಗೆಯೆ ಅವರ ಕೋಲು ಪದಗಳಲ್ಲಿ ಕನ್ನಡ ಹೊರತುಪಡಿಸಿ ತೆಲುಗು ಭಾಷೆಯನ್ನು ಬಳಸದಿರುವುದು ಕಂಡುಬರುತ್ತದೆ. ಚಳ್ಳಕೆರೆ, ಮೊಳಕಾಲ್ಮೂರು ಆಂಧ್ರ ಗಡಿಭಾಗಕ್ಕೆ ಹೊಂದಿಕೊಂಡ ಪ್ರಾಂತಗಳಾದರೂ, ಇವರು ಮಾತನಾಡುವ ಕನ್ನಡ ಭಾಷೆಯ ಮೇಲೆ ತೆಲುಗು ಭಾಷೆಯು ಯಾವುದೇ ರೀತಿಯ ಪ್ರಭಾವ ಬೀರಿಲ್ಲ ಎಂದೇ ಹೇಳಬಹುದು. ಕಾಡುಗೊಲ್ಲರ ಒಂದು ಕನ್ನಡ ಕೋಲುಪದವನ್ನು ಉದಾಹರಿಸಿ ನೋಡುವುದಾದರೆ ಇದು ಕೋಲಾಟದ ಪ್ರದರ್ಶನ ಮಾಡುವ ಕಾಲಕ್ಕೆ ಕೊರವಂಜಿಯ ಕೋಲಾಟದ ಪ್ರಕಾರಕ್ಕೆ ಬರುತ್ತದೆ.

"ಅತ್ತೇಯ ಮಗಳೆ ಅತ್ತಿರದ ತಾವರೆ
ಹೊತ್ತೋಗಿ ಬಂದೆ ನೀರ ಕೊಡೊಂದುಡುಗಿ
ಅಯ್ಯ ನೀರ ಕೋಡೊಕೆ ನಾನ್ಯಾರೇ ನೀನ್ಯಾರೇ
ಹೋಗಯ್ಯ ಅರಿಯೋ ಜಲರಿಗಾಂದುಡುಗ".

ಅರಿಯಾ ನೀರಾಚಗೆ ಕೆರೆನೀರು ಕೆಂಪಾಗೆ
ನೀ ಕೊಟ್ಟ ನೀರೊಂದು ಸವಿರುಚಿ ಹುಡುಗಿ
ನಾ ಕೊಟ್ಟ ನೀರು ಸವಿರುಚಿ ಆದರೆ
ಅರಿವೀಯ ತಕ್ಕೊಂಡು ನೀರಿಗೋಯ್ತಿನುಡುಗ"

(ಮೋಹನ್‌ಕುಮಾರ್.ಎನ್.; ೨೦೧೩; ಪುಟ ೮೦)

ಇದು ಕಾಡುಗೊಲ್ಲರ ಕೋಲಾಟ ಪದವಾಗಿದೆ. ಈ ಗೀತೆಯಲ್ಲಿ ಒಂದು ಹುಡುಗ ಅತ್ತೆಯ ಮಗಳನ್ನು ನೀರು ಕೇಳುತ್ತಾ ಅವಳನ್ನು ಪರಿಪರಿಯಾಗಿ ಕಾಡುವುದು ತೋರಿಬಂದಿದೆ. ಅತ್ತೆಯ ಮಗಳಿಗೋಸ್ಕರ ಬಂದ ಹುಡುಗ ಅವಳ ಸೌಂದರ್ಯಕ್ಕೆ ಮಾರುಹೋಗಿ ಅವಳ ಮೇಲೆ ಮನಸಾಗಿ ಅವಳೊಡನೆ ಸರಸದಿಂದ ಸಂಭಾಷಣೆ ನಡೆಸಿರುವುದು ಕಂಡುಬರುತ್ತದೆ. ನೀರು ಕೊಡೆಂದು ಅವನು ತನ್ನ ಸೊಸೆಗೆ ಕೇಳಿದಾಗ ಅವಳು ಹರಿಯ ಜಲಧಿಗೆ ಹೋಗು ಅಲ್ಲಿ ನೀರು ಸಿಗುತ್ತದೆ ಎಂದು ಹೇಳುತ್ತಾಳೆ. ಹುಡುಗ, ಸೊಸೆಯ ಮಾತು ಕೇಳದೆ ಹರಿಯೋ ನೀರು ಊರಿಂದಾಚೆಗೆ ತುಂಬಾ ದೂರವಿದೆ ಮತ್ತು ಕೆರೆ ನೀರು ಕೆಂಪು ಇದೆ. ಹೊಂಡ ನೀರು ಕೆಸರು ತುಂಬಿಕೊಂಡಿದೆ, ನೀನು ಕೊಟ್ಟ ನೀರು ಕುಡಿಯುವುದಕ್ಕೆ ತುಂಬಾ ಚೆನ್ನಾಗಿರುತ್ತದೆ ಎಂದು ಹೇಳುತ್ತಾನೆ. ನಾನು ಕೊಟ್ಟ ನೀರು ತುಂಬಾ ರುಚಿಯಾಗಿದ್ದರೆ ಅರಿವಿಯ ತೆಗೆದುಕೊಂಡು ನೀರಿಗೆ ಹೋಗಿ ಬರ್ತೀನಿ ಎಂದು ಹೇಳುತ್ತಾಳೆ. ಹಾಗೆ ಮಾವ-ಸೊಸೆಯ ನಡುವೆ ಪ್ರಣಯದ

ಮಾದರಿಯಲ್ಲಿ ಸಂಭಾಷಣೆ ನಡೆಯುತ್ತದೆ. ಇಲ್ಲಿ ನೀರು ಕೇಳುವುದು, ಮರದ ಕೆಳಗೆ ವಿಶ್ರಾಂತಿ ಪಡೆಯುವುದು ಇವೆಲ್ಲ ಪ್ರೇಮ ಮತ್ತು ಕಾಮದ ಸಂಕೇತವೆಂದೇ ಹೇಳಬಹುದು. ಇಲ್ಲಿ ತನ್ನ ಸೊಸೆಯನ್ನು ನೀರು ಕೇಳುವ ನೆವ ಮಾಡಿ ಬಂದ ಮಾವನು ಅವಳ ಪ್ರೇಮದ ಬಲೆಯಲ್ಲಿ ಸಿಲುಕಿರುವುದು ಗೋಚರಿಸುತ್ತದೆ. ಬಾವಿಯ ನೀರು ಹರಿಯುವ ನೀರು ಮತ್ತು ಕೆರೆಯ ನೀರು ಅಥವಾ ನದಿಯ ನೀರು ಸ್ತ್ರೀಯರಲ್ಲಿನ ಗರತಿಯ ಪಾವಿತ್ರ್ಯತೆಯನ್ನು ಸೂಚಿಸುತ್ತದೆ. ಹಾಗೆಯೆ ಬಾವಿಯ ನೀರನ್ನು ಮದುವೆಯಾಗದ ಹೆಣ್ಣಿಗೆ, ಕೆರೆಯ ನೀರನ್ನು ಮದುವೆಯಾದ ಹೆಣ್ಣಿಗೆ ಹೋಲಿಸಿದರೆ, ಹರಿಯುವ ನೀರನ್ನು ಸೂಳೆಗೆ ಹೋಲಿಸಿರುವುದಾಗಿದೆ. ಇದೆಲ್ಲ ವಿದ್ವಾಂಸರ ಅಭಿಪ್ರಾಯವಾಗಿದೆ ಎಂದು ಹೇಳಬಹುದು. ಈ ಕೋಲು ಪದದಲ್ಲಿ ಅತ್ತೆಯ ಮಗಳ ಮೇಲೆ ಮೋಹಿತನಾದ ಹುಡುಗನು ತನ್ನ ವಿರಹವೇದನೆಯನ್ನು ಪರೋಕ್ಷವಾಗಿ ಅವಳ ಹತ್ತಿರ ನುಡಿದರೂ ಅವಳಿಗೆ ಅದು ಅರಿವಾಗದೆ ಇರದು. ಹಾಗಾಗಿಯೇ ಅವಳು ಅದನ್ನು ತಿಳಿದೇ ಮನೆಯಿಂದ ಬಿಂದಿಗೆ ತೆಗೆದುಕೊಂಡು ನೀರಿಗೆ ಹೋಗ್ತಿನಿ ಎಂದು ಹೇಳಿ ನುಣುಚಿಕೊಳ್ಳಲು ಬಯಸಿರುವುದು ಇಲ್ಲಿ ಕಂಡುಬರುತ್ತದೆ. ಈ ಕೋಲುಪದವು ಶೃಂಗಾರ ರಸವನ್ನೊಳಗೊಂಡಿದ್ದು ಮಾವ ಮತ್ತು ಸೊಸೆಯ ನಡುವೆ ಸರಸ ಸಲ್ಲಾಪದ ವಸ್ತುವೈವಿಧ್ಯತೆಯನ್ನು ಒಳಗೊಂಡಿದೆ.

ಹೀಗೆ ಕಾಡುಗೊಲ್ಲರ ಕೋಲುಪದಗಳಲ್ಲಿ ಶೃಂಗಾರ ಹಾಸ್ಯ ಅಥವಾ ತಮಾಷೆ, ಐತಿಹಾಸಿಕ ಮತ್ತು ಭಕ್ತಿ, ಸಾಮಾಜಿಕ ವಿಡಂಬನೆ, ಗಂಡ-ಹೆಂಡತಿಯರ ವಿರಹ ವೇದನೆ, ಮಾವ-ಸೊಸೆಯರ ಸರಸ ಸಂಭಾಷಣೆ, ಗೆಳೆಯ-ಗೆಳತಿಯರ, ಸರಸ-ವಿರಸಗಳು, ಸಾಂಸ್ಕೃತಿಕ ನಾಯಕ-ನಾಯಕಿಯರ ಜೀವನ ಗಾಥೆಗಳು ಮುಂತಾದ ವಸ್ತುವೈವಿಧ್ಯತೆಗಳನ್ನು ಕಾಣಬಹುದು.

**೬.೧.೩. ಕಾಡುಗೊಲ್ಲ ಮತ್ತು ಮ್ಯಾಸಬೇಡರ ಕೋಲುಪದಗಳಲ್ಲಿ ಸಾಮ್ಯತೆಗಳು**

ಕಾಡುಗೊಲ್ಲರು ಮತ್ತು ಮ್ಯಾಸಬೇಡರ ಕೋಲುಪದಗಳಲ್ಲಿ ಸಮಾನಾಂಶಗಳನ್ನು ಕಾಣಬಹುದಾಗಿದೆ. ಕರ್ನಾಟಕ - ಆಂಧ್ರ ಗಡಿ ಪರಿಸರದಲ್ಲಿ ನೆಲೆಸಿರುವ ಈ ಎರಡು ಸಮುದಾಯಗಳು ಹಟ್ಟಿಗಳಲ್ಲಿ ಕೋಲಾಟದ ಕಲಾವಿದರು ಇರುವುದು ಕಂಡುಬರುತ್ತದೆ. ಎಸ್.ಕೆ. ಸಣ್ಣೋಬಯ್ಯ ಅವರು ಕಾಡುಗೊಲ್ಲ ಮತ್ತು ಮ್ಯಾಸಬೇಡರ ಸಾಮ್ಯತೆ ಮತ್ತು ಸಮಾನಾಂಶಗಳನ್ನು ಈ ರೀತಿಯಾಗಿ ಹೇಳಿದ್ದಾರೆ. "ಮ್ಯಾಸಬೇಡ ಮತ್ತು ಕಾಡುಗೊಲ್ಲರು ಮೂಲತಃ ಉತ್ತರ ಭಾರತದಿಂದ ದಕ್ಷಿಣ ಭಾರತಕ್ಕೆ ವಲಸೆ ಬಂದು ಪಶುಪಾಲನೆ ವೃತ್ತಿಯನ್ನು ಕೈಗೊಂಡವರು. ಕರ್ನಾಟಕದ ಚಿತ್ರದುರ್ಗ ಜಿಲ್ಲೆಯನ್ನೇ ಕೇಂದ್ರವಾಗಿಟ್ಟುಕೊಂಡು ಅನೇಕ ಧಾರ್ಮಿಕ ಕೇಂದ್ರಗಳು ಗುಡಿಕಟ್ಟೆ ಮತ್ತು ಕಟ್ಟೆಮನೆಗಳನ್ನು ಈ ಪ್ರದೇಶದಲ್ಲಿ ಸ್ಥಾಪಿಸಿದರು. ಆದ್ದರಿಂದ ಪುರಾತನ ಕಾಲದಿಂದಲೂ ಈ ಪ್ರದೇಶದ ಮ್ಯಾಸಬೇಡ ಮತ್ತು ಕಾಡುಗೊಲ್ಲರ ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿ ಪರಸ್ಪರ ಸಾಮ್ಯತೆಗಳು ಬೆಳೆದುಬಂದವು"(ಸಣ್ಣೋಬಯ್ಯ.ಎಸ್.ಕೆ.; ೨೦೦೨; ಪುಟ ೩೬).

ರೂಢಿ-ಸಂಪ್ರದಾಯಗಳಲ್ಲಿ ಏಕವಾದ ಸಂಸ್ಕೃತಿಯನ್ನು ಒಳಗೊಂಡಿವೆ ಎಂದು ಸಣ್ಣೋಬಯ್ಯ ಅವರು ಅಭಿಪ್ರಾಯಿಸಿರುವುದು ಸೂಕ್ತವೆನಿಸುತ್ತದೆ. ಏಕೆಂದರೆ ಮ್ಯಾಸಬೇಡ ಮತ್ತು ಕಾಡುಗೊಲ್ಲರ

ಉಡುಗೆ-ತೊಡುಗೆ, ದಿನನಿತ್ಯದ ಆಹಾರಕ್ರಮ, ಹಟ್ಟಿಯ ಪರಿಕಲ್ಪನೆ, ವೃತ್ತಿ, ಜೀವನಾವರ್ತನಾ ಆಚರಣೆಗಳು ಮುಂತಾದ ಸಾಂಸ್ಕೃತಿಕ ವಿಚಾರಗಳಲ್ಲಿ ಪರಸ್ಪರ ಸಾಮ್ಯತೆಗಳು ಕಂಡುಬರುತ್ತವೆ. ಹಾಗೆಯೇ ಧಾರ್ಮಿಕತೆ ಮತ್ತು ಆಚರಣೆಗಳಲ್ಲಿ ಎರಡು ಸಮುದಾಯದವರು ಪ್ರಕೃತಿ ಆರಾಧಕರು ಸೂರ್ಯ, ಚಂದ್ರ, ಭೂತಾರಾಧನೆ, ಸಾಂಸ್ಕೃತಿಕ ನಾಯಕ ನಾಯಕಿಯರನ್ನು ಇವರು ಪೂಜಿಸುವ ದೇವಾಲಯಗಳಲ್ಲಿ ಪರಸ್ಪರ ಸಮಾನವಾದ ಪದ್ಧತಿ ಕ್ರಮಗಳಿವೆ. ಮ್ಯಾಸಬೇಡರು ಪೂಜಿಸುವ ಆರಾಧಿಸುವ ಹನ್ನೆರಡು ಪೆಟ್ಟಿಗೆ ದೇವರುಗಳಲ್ಲಿ ಕಾಡುಗೊಲ್ಲರು ಆರಾಧಿಸುವ ದೇವರುಗಳನ್ನು ಕಾಣಬಹುದಾಗಿದೆ. ಅದೇ ರೀತಿಯಾಗಿ ಕಾಡುಗೊಲ್ಲರು ಆರಾಧಿಸುವ ಪಂಚಲಿಂಗಗಳಲ್ಲಿ ಮ್ಯಾಸಬೇಡರು ಆರಾಧಿಸುವ ದೈವಗಳನ್ನು ಸಹ ಕಾಣಬಹುದು. ಹೀಗೆ ಮ್ಯಾಸಬೇಡ ಮತ್ತು ಕಾಡುಗೊಲ್ಲರ ಜೀವನ ವಿಧಾನ ರೂಢಿ-ಸಂಪ್ರದಾಯ ಮುಂತಾದ ಆಚರಣೆ ಸಂಸ್ಕೃತಿ ಜನಪದ ಕಲೆಗಳಲ್ಲಿಯೂ ಸಾಮ್ಯತೆಗಳು ಕಂಡುಬರುತ್ತವೆ.

ಮ್ಯಾಸಬೇಡ ಮತ್ತು ಕಾಡುಗೊಲ್ಲ ಈ ಎರಡು ಸಮುದಾಯಗಳಲ್ಲಿ ಜನಪದ ಗೀತ ಸಾಹಿತ್ಯವೂ ಕರ್ನಾಟಕ-ಆಂಧ್ರ ಗಡಿಪ್ರಾಂತ ಪರಿಸರದಲ್ಲಿ ವಿಪುಲವಾಗಿ ಹರಿದಾಡುತ್ತದೆ. ಕಾಡುಗೊಲ್ಲ ಜಾನಪದ ಸಾಹಿತ್ಯವೂ ಶ್ರೀಮಂತಿಕೆಯಿಂದ ಕೂಡಿದೆ. ಜನಪದ ಪದ್ಯ ಸಾಹಿತ್ಯದ ಒಂದು ಪ್ರಕಾರವಾದ ಕೋಲಾಟದಲ್ಲಿ ಎರಡು ಸಮುದಾಯಗಳಲ್ಲಿ ವಿಪುಲವಾದ ಸಾಹಿತ್ಯ ಹರಿದಾಡುತ್ತಿರುವುದು ಗೋಚರಿಸುತ್ತದೆ. ಈ ಸಮುದಾಯಗಳಲ್ಲಿ ಕೋಲಾಟವು ಪ್ರಧಾನ ಕಲೆಯಾಗಿದೆ. ಕೋಲಾಟದಲ್ಲಿ ಭಿನ್ನತೆಗಳು ತೋರಿಬಂದರೂ ಕೂಡ ಕೋಲುಪದಗಳಲ್ಲಿ ಕೆಲವೊಂದು ಸಮಾನಾಂಶ ಹಾಗೂ ಸಾಮ್ಯತೆಯನ್ನು ನೋಡಬಹುದಾಗಿದೆ.

ಕರ್ನಾಟಕ - ಆಂಧ್ರ ಗಡಿ ಪರಿಸರದ ಕೋಲಾಟ ಪದಗಳಲ್ಲಿ ಕೊಡು-ಕೊಳ್ಳುವಿಕೆ ಆಗುತ್ತಿರುವುದು ಸಹಜವಾದ ಪ್ರಕ್ರಿಯೆ ಹಾಗೆಯೇ ಕರ್ನಾಟಕ - ಆಂಧ್ರ ಗಡಿ ಪರಿಸರ ಹೊರತುಪಡಿಸಿ ಆಂಧ್ರಕ್ಕೆ ಹೊಂದಿಕೊಂಡಿರುವ ಕರ್ನಾಟಕದ ಗಡಿ ಪ್ರಾಂತಗಳಲ್ಲಿ ಮಾತ್ರವೇ ಮ್ಯಾಸಬೇಡ ಮತ್ತು ಕಾಡುಗೊಲ್ಲ ಸಮುದಾಯಗಳ ಕೋಲುಪದಗಳಲ್ಲಿ ಕೊಡು-ಕೊಳ್ಳುವಿಕೆ ನಡೆದಿದೆ ಮತ್ತು ಇಂದಿಗೂ ನಡೆಯುತ್ತಿರುವುದು ಕಂಡುಬಂದಿದೆ. ಚಳ್ಳಕೆರೆಯ ನಾಯಕನಹಟ್ಟಿ ತಿಪ್ಪೇಸ್ವಾಮಿ ಜಾತ್ರೆಯ ಸಂದರ್ಭದಲ್ಲಿ ಈ ಎರಡು ಸಮುದಾಯದ ಕೋಲಾಟ ತಂಡಗಳು ಭಾಗವಹಿಸುವುದು ಕಂಡುಬರುತ್ತದೆ. ಆಗ ಕೋಲುಪದಗಳಲ್ಲಿ ಕೊಡು-ಪಡೆ ನಡೆದಿರುವಂತಹ ಸಾಧ್ಯತೆಗಳು ಇರುತ್ತವೆ. ಹಾಗೆಯೇ ಮೊಳಕಾಲ್ಮೂರು ತಾಲೂಕಿನ ನುಂಕೆಮಲೆಸಿದ್ಧನ ಜಾತ್ರೆ ನಡೆಯುವ ಸಂದರ್ಭಗಳಲ್ಲಿ ಮ್ಯಾಸಬೇಡ ಮತ್ತು ಕಾಡುಗೊಲ್ಲ ಸಮುದಾಯದವರ ಕೋಲು ತಂಡಗಳು ಭಾಗವಹಿಸಿ ಪ್ರದರ್ಶನ ಮಾಡುತ್ತಾ ಕೋಲುಪದಗಳನ್ನು ಹಾಡುವುದು ಕಂಡುಬರುತ್ತದೆ. ಮೊಳಕಾಲ್ಮೂರು ತಾಲೂಕಿನ ಮ್ಯಾಸಬೇಡರ ದೈವದ ನೆಲೆಯಾಗಿರುವ ಕಂಪಳದೇವರ ಹಟ್ಟಿಯಲ್ಲಿ ದಡ್ಡಿ ಸೂರನಾಯಕ ಮತ್ತು ಪಾಪನಾಯಕರ ಜಾತ್ರೆ ಪ್ರತಿವರ್ಷ ದೀಪಾವಳಿ ಅಮವಾಸ್ಯೆಯ ಸಂದರ್ಭದಲ್ಲಿ ನಡೆಯುತ್ತದೆ. ಈ ಜಾತ್ರಾ ಸಂದರ್ಭಗಳಲ್ಲಿ ಮ್ಯಾಸಬೇಡ ಮತ್ತು ಕಾಡುಗೊಲ್ಲರು ಕೋಲು ಪ್ರದರ್ಶನ ಮಾಡುತ್ತಾರೆ. ಹೀಗೆ ಜಾತ್ರಾ ವಿಶೇಷಗಳಲ್ಲಿ

ಸಾಂಸ್ಕೃತಿಕ - ನಾಯಕರ ಉತ್ಸವಗಳು ನಡೆಯುವ ಕಾಲಕ್ಕೆ ಈ ಎರಡು ಸಮುದಾಯಗಳ ಕೋಲು ಕಲಾವಿದರು ಭಾಗವಹಿಸುತ್ತಿರುವುದರಿಂದ ಪರಸ್ಪರ ಕೋಲುಪದ ಪ್ರದರ್ಶನದಲ್ಲಿ ಮತ್ತು ಕೋಲಾಟ ಪದಗಳಲ್ಲಿ ಕೊಡು-ಪಡೆ ನಡೆದಿರಬಹುದು ಎಂಬ ಅನುಮಾನಗಳಿಗೆ ದಾರಿ ಮಾಡಿಕೊಟ್ಟಿದೆ. ಕರ್ನಾಟಕಾಂಧ್ರ ಗಡಿ ಪ್ರದೇಶಗಳಲ್ಲಿಯೂ ಅಲ್ಲದೆ ಕರ್ನಾಟಕದ ಒಳಗಡೆಯೂ ಕೆಲವು ಜಾತಿ ಸಮುದಾಯಗಳಲ್ಲಿ ಕೋಲಾಟಕ್ಕೆ ಸಂಬಂಧಿಸಿ ಕೊಡುಕೊಳ್ಳುವಿಕೆ ನಡೆಯುವುದು ಕಂಡುಬಂದಿದೆ. ಮ್ಯಾಸಬೇಡ ಬುಡಕಟ್ಟಿನಲ್ಲಿ ಆಡುವ ಕೋಲಾಟಕ್ಕೂ, ಕಾಡುಗೊಲ್ಲರು ಪ್ರದರ್ಶನ ಮಾಡುವ ಕೋಲಾಟಕ್ಕೂ ತೀರ ಭಿನ್ನವಾದ ವ್ಯತ್ಯಾಸಗಳೇನೂ ಕಾಣಸಿಗದು. ಮ್ಯಾಸಬೇಡರು ಹಾಡುವ ಕೋಲುಪದಗಳನ್ನು ಕಾಡುಗೊಲ್ಲರು, ಕಾಡುಗೊಲ್ಲರು ಹಾಡುವ ಪದಗಳನ್ನು ಮ್ಯಾಸಬೇಡರು ಕೋಲಾಟ ಆಡುವಾಗ ಬಳಸುತ್ತಾರೆ. ತುಮಕೂರಿನ ಶಿರಾ, ಮಧುಗಿರಿ, ಕೊರಟಗೆರೆ, ಪಾವಗಡ ಹಾಗೂ ಚಿತ್ರದುರ್ಗ, ಚಳ್ಳಕೆರೆ, ಹಿರಿಯೂರು ಮತ್ತು ಮೊಳಕಾಲ್ಮೂರು ಪ್ರದೇಶಗಳಲ್ಲಿ ಎರಡೂ ಬುಡಕಟ್ಟು ಸಮುದಾಯದವರ ಸಮಾನ ರೀತಿಯ ಆಚರಣೆಗಳಲ್ಲಿ ಕೋಲಾಟವು ಒಂದಾಗಿರುವುದು ವಿಶೇಷವೆನಿಸುತ್ತದೆ.

ಮ್ಯಾಸಬೇಡ ಮತ್ತು ಕಾಡುಗೊಲ್ಲ ಸಮುದಾಯಗಳ ಕೋಲಾಟ ಪದಗಳಲ್ಲಿ ಕೆಲವೊಂದು ಸಾಮ್ಯತೆಗಳು ಮತ್ತು ಸಮಾನಾಂಶಗಳನ್ನು ಕಾಣಬಹುದಾಗಿದೆ. ಕಾಡುಗೊಲ್ಲ ಸಮುದಾಯದ ಒಂದು ಕೋಲುಪದವನ್ನು ಉದಾಹರಣೆಯಾಗಿ ನೋಡಬಹುದು.

ಹಾಲು ಮಾರುತ ಬಂದಾಳಮ್ಮ
ಗೆಜ್ಜೆ ಕಡಗದ ಗೊಲ್ಲಾರೆಣ್ಣು
ಹಾಲು ಮಾರಿದ ಸುಂಕ ಕೇಳಿದರೆ
ಅವುಳು ಗೆಜ್ಜೆ ಕಡಗ ತೋರ್‍ಯಾಳು
ಮೊಸರು ಮಾರುತ ಬಂದಾಳಮ್ಮ
ಗೆಜ್ಜೆ ಕಡಗದ ಗೊಲ್ಲಾರೆಣ್ಣು
ಮೊಸರು ಮಾರಿದ ಸುಂಕ ಕೇಳಿದುರೆ
ಗೊಲ್ಲ ಕಡಗ ತೋರ್‍ಯಾಳು
ಹೇ ಮಜ್ಜಿಗೆ ಮಾರುತ ಬಂದಾಳಮ್ಮ
ನೀಲಿ ನಾಮದ ಗೊಲ್ಲಾರೆಣ್ಣು
ಮಜ್ಜಿಗೆ ಮಾರಿದ ಸುಂಕ ಕೇಳಿದುರೆ
ನೀಲಿ ನಾಮ ತೋರ್‍ಯಾಳು
ಮುಕ್ತಾಯ:- ಈ ಡೈಯಕ್ಕು ತದ್ದಿಮಿ ತಾ.

(ಮೋಹನ್‌ಕುಮಾರ್.ಎನ್.; ೨೦೦೩; ಪುಟ ೧೧೫-೧೧೬)

ಈ ಕೋಲುಪದವು ಕಾಡುಗೊಲ್ಲ ಸಮುದಾಯದ ಕಲಾವಿದರು ಕೋಲಾಟವಾಡುವ ಕಾಲಕ್ಕೆ ಈ ಗೀತೆಯನ್ನು ಹಾಡುವುದು ಮತ್ತು ಪ್ರದರ್ಶನ ಮಾಡುವುದು ಕಂಡು ಬರುತ್ತದೆ. ಇದೇ

ಮಾದರಿಯ ಕೋಲು ಪದವೊಂದು ಮ್ಯಾಸಬೇಡ ಸಮುದಾಯದ ಕೋಲುಪದಗಳಲ್ಲಿಯೂ ಹರಿದಾಡುತ್ತಿದೆ. ಕಾಡುಗೊಲ್ಲರ ಕೋಲುಪದಕ್ಕೂ ಮ್ಯಾಸಬೇಡರ ಕೋಲುಪದಕ್ಕೂ ಭಿನ್ನತೆಗಳು ಕಂಡು ಬರುವುದಕ್ಕಿಂತ ಸಮಾನಾಂಶಗಳೇ ಹೆಚ್ಚಾಗಿ ಕಂಡುಬಂದಿದೆ. ಕಾಡುಗೊಲ್ಲರ ಕೋಲಾಟ ಪದದ ಮಾದರಿಯಲ್ಲಿರುವ ಮ್ಯಾಸಬೇಡರ ಕೋಲುಪದವೊಂದನ್ನು ಇಲ್ಲಿ ಉದಾಹರಿಸಿ ನೋಡೋಣ.

*** ಮ್ಯಾಸಬೇಡರ ಕೋಲಾಟ ಪದ**

ಹಾಲು ಮಾರುತ ಬಂದಳಣ್ಣ
ಲೀಲೆ ನಾಮದ ಗೊಲ್ಲತಿ
ಮೊಸರು ಮಾರುತ ಬಂದಳಣ್ಣ
ಹಸಿರು ನಾಮದ ಗೊಲ್ಲತಿ
ತುಪ್ಪ ಮಾರುತ ಬಂದಳಣ್ಣ ಒಪ್ಪುವುಳ್ಳ ಗರತಿ
ಹಾಲಿಗೆ ಸುಂಕ ಬೇಡಿದರೆ ಲೀಲೆ ನಾಮ ತೋರಳು
ರಂಗನೇ ರಾಯನೇ ಗೋಪಿ ನನ ಮಗ ಲೋಲನೆ
ತೈಯಸ್ತ ತಡಗಿಡಿತಾ
ಕಲ್ಲದಾಟಿ ಮುಳ್ಳು ದಾಟಿ ಘೋರವನಮುಲು ವನಮು ದಾಟಿ
ಪೂವಲೆಕ್ಕ ನೇನಿ ಬೋಯ ದುಮ್ಮಲಾಲ

(ಮುತ್ತಯ್ಯ.ಎಸ್.ಎಂ.; ೨೦೧೨; ಪುಟ ೧೧೯)

ಇದು ಮ್ಯಾಸಬೇಡರ ಕೋಲಾಟದ ಪದವಾಗಿದೆ. ಕಾಡುಗೊಲ್ಲ ಮತ್ತು ಮ್ಯಾಸಬೇಡರ ಪದಗಳಲ್ಲಿ ಇದು ಸಮಾನ ಅಂಶವನ್ನು ಸೂಚಿಸುವ ಪದವಾಗಿದೆ. ಹಾಗೆಯೇ ಸಮಾನಾಂಶವಿರುವ ಕೋಲುಪದದ ಜೊತೆ ತೆಲುಗು ಸಾಲುಗಳು ಮ್ಯಾಸಬೇಡರ ಕೋಲುಪದಗಳಲ್ಲಿ ಸೇರ್ಪಡೆ ಯಾಗಿರುವುದು ಕಾಣಸಿಗುತ್ತದೆ. ಮ್ಯಾಸಬೇಡ ಸಮುದಾಯದ ಮನೆಮಾತು ತೆಲುಗು ಆಗಿರುವುದರಿಂದ ಅವರ ಕನ್ನಡದ ಕೋಲುಪದಗಳಲ್ಲಿಯೂ ತೆಲುಗು ಪದದ ಸಾಲುಗಳು ಸೇರುವುದನ್ನು ಕಾಣಬಹುದಾಗಿದೆ ಮತ್ತು ಆಂಧ್ರ ಗಡಿ ಭಾಗ ಪರಿಸರದಲ್ಲಿ ತೆಲುಗು ಭಾಷೆಯ ಪ್ರಭಾವ ಇವರ ಮೇಲೆ ಆಗಿರುವುದು ಸ್ಪಷ್ಟವಾಗಿ ಕಾಣುತ್ತದೆ. ಜಾನಪದ ಸಾಹಿತ್ಯದ ಒಂದು ಕಲೆಯಾದ ಕೋಲುಪದಗಳು ಪರಸ್ಪರರ ಮೇಲೆ ಪ್ರಭಾವವಾಗಿರುವುದು ಕಾಣಬಹುದಾಗಿದೆ.

ಇದೇ ಮಾದರಿಯ ಗೀತೆಯನ್ನು ಮೊಳಕಾಲ್ಮೂರು ತಾಲೂಕಿನಲ್ಲಿ ಬರುವ ಕಂಪಳದೇವರ ಹಟ್ಟಿಯ ಜಾತ್ರೆಯಲ್ಲಿ ಸಂಗ್ರಹಿಸಿಕೊಳ್ಳಲಾಗಿದೆ. ಈ ಹಾಡಿನ ತಾಳ, ಲಯ, ದಾಟಿಗಳು ಸಮಾನಾಂಶಗಳಿಂದ ಕೂಡಿವೆ. ಈ ಗೀತೆಯನ್ನು ಮ್ಯಾಸಬೇಡ ಸಮುದಾಯದವರು ಹಾಡಿದ್ದಾರೆ. ಈ ಸಮುದಾಯದವರು ಕೋಲು ಪ್ರದರ್ಶನ ಮಾಡುವ ಕಾಲಕ್ಕೆ ಈ ಗೀತೆಯನ್ನು ಸಂಗ್ರಹಿಸಿಕೊಳ್ಳಲಾಗಿದೆ. ಈ ಗೀತೆಯಲ್ಲಿ ಮ್ಯಾಸಬೇಡ ಸಮುದಾಯದ ಮಾತೃಭಾಷೆಯಾದ ತೆಲುಗು ಭಾಷೆಯ ಚಹರೆಗಳು ಕಾಣಿಸಿಕೊಂಡಿರುವುದನ್ನು ಗಮನಿಸಬಹುದಾಗಿದೆ. ಹಿಂದೆ ನೋಡಿದ ಎರಡೂ ಹಾಡುಗಳ ಮಾದರಿಯಲ್ಲಿ ಈ ಹಾಡು ಇರುವುದು ಕಂಡು ಬರುತ್ತದೆ.

ಹಾಲೇ ಮಾರುತ ಬಂದಾವುಳಮ್ಮ
ನೀಲೆ ನಾಮುದಿ ಗೊಲ್ಲದಿ
ಹಾಲಿಗೆ ಸುಂಕ ತೋರುಂದಾರೆ
ನೀಲೆ ನಾಮುದಿ ಗೊಲ್ಲದಿ
ನೀಲೆ ನಾಮುದ ಗೊಲ್ಲದಿ ||೨||

ಮೊಸರೆ ಮಾರುತ ಬಂದಾವುಳಮ್ಮ
ಕೆಸರೆ ನಾಮುದ ಗೊಲ್ಲದಿ
ಮೊಸರಿಗೆ ಸುಂಕ ತೋರುಂದಾರೆ
ನೀಲೆ ನಾಮದ ಗೊಲ್ಲದಿ
ನೀಲೆ ನಾಮದ ಗೊಲ್ಲದಿ
ನೀಲೆ ನಾಮುದ ಗೊಲ್ಲದಿ ||೨||

ಮಜ್ಜಿಗೆ ಮಾರುತ ಬಂದಾವುಳಮ್ಮ
ಗೆಜ್ಜೆ ಕಾಲಿನ ಗೊಲ್ಲದಿ
ಗೆಜ್ಜಿಗೆ ಸುಂಕ ತೋರುಂದಾರೆ
ನೀಲೆ ನಾಮದ ಗೊಲ್ಲದಿ
ನೀಲೆ ನಾಮದ ಗೊಲ್ಲದಿ ||೨||

ತುಪ್ಪ ಮಾರುತ ಬಂದಾವುಳಮ್ಮ
ನೀಲೆ ನಾಮದ ಗೊಲ್ಲದಿ
ತುಪ್ಪಗೆ ಸುಂಕ ತೋರುಂದಾರೆ
ನೀಲೆ ನಾಮದ ಗೊಲ್ಲದಿ
ನೀಲೆ ನಾಮದ ಗೊಲ್ಲದಿ ||೨||

(ವಕ್ತೃ: ಸಣ್ಣಮಲ್ಲಯ್ಯ, ಕಂಪಳದೇವರಹಟ್ಟಿ, ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಕಂಪಳದೇವರ ಹಟ್ಟಿ ಮೊಳಕಾಲ್ಮೂರು ತಾಲ್ಲೂಕು ಮ್ಯಾಸಬೇಡರ ಸಮುದಾಯದ ಕೋಲು ಮೇಳಗಾರ.

ಇಲ್ಲಿ ಪ್ರಸ್ತುತವೆನಿಸಿರುವ ಮೂರು ಕೋಲುಪದಗಳು ಒಂದೇ ಮಾದರಿಯಲ್ಲಿದ್ದು ಒಂದೇ ರೀತಿಯ ಸಮಾನಾಂಶಗಳನ್ನು ಒಳಗೊಂಡಿರುವುದು ಕಂಡುಬರುತ್ತದೆ. ಕಾಡುಗೊಲ್ಲರ ಕೋಲುಪದಲ್ಲಿಯೂ ಮತ್ತು ಮ್ಯಾಸಬೇಡರ ಕೋಲುಪದಗಳಲ್ಲಿಯೂ ಹಾಲು, ಮೊಸರು, ಮಜ್ಜಿಗೆ ಮತ್ತು ತುಪ್ಪವನ್ನು ಮಾರುತ್ತಾ ಊರೂರುಗಳಿಗೆ ಅಲೆದಾಡುವ ಗೊಲ್ಲತಿ ಅಥವಾ ಗೊಲ್ಲರ ಹೆಣ್ಣಿನ ಕುರಿತಾಗಿ ಮಾಹಿತಿಯನ್ನು ನೀಡುತ್ತದೆ. ಈ ಕೋಲುಪದವು ಕಾಡುಗೊಲ್ಲರ ಮೂಲ ವೃತ್ತಿಯಾದ ಪಶುಪಾಲಕ ಅಥವಾ ಪಶುಪಾಲನೆ ವೃತ್ತಿಯನ್ನು ಎತ್ತಿ ತೋರಿಸುತ್ತದೆ. ಪಶುಗಳನ್ನು ಕಾಯುವ ಇವರು ದನಗಳು ನೀಡುವ ಹಾಲಿನಿಂದ ಮೊಸರು, ತುಪ್ಪವನ್ನಾಗಿ ಮಾಡಿ ಮಾರುತ್ತಿದ್ದರು

ಎಂಬುದನ್ನು ಅರಿಯಬಹುದು. ಹಾಗೆಯೇ ಈ ಕೋಲುಪದವನ್ನು ಮೊದಲು ಹೆಸರಿಸಿದವರು ಯಾರು? ಮ್ಯಾಸಬೇಡರೇ ಅಥವಾ ಕಾಡುಗೊಲ್ಲರೇ ಎಂಬುದು ಯಕ್ಷ ಪ್ರಶ್ನೆಯಾಗಿ ಉಳಿದಿದೆ.

ಕಾಡುಗೊಲ್ಲರು ಈ ಹಾಡನ್ನು ಹೊಸೆದಿದ್ದರೆ ತಮ್ಮ ವೃತ್ತಿಯ ಕುರಿತಾದ ಹಾಲು, ಮೊಸರು, ಮಜ್ಜಿಗೆ, ತುಪ್ಪ ಮಾರುವುದರ ಕುರಿತಾಗಿ ಪ್ರಸ್ತಾಪ ಮಾಡುತ್ತಿರಲಿಲ್ಲವೇನೋ. ಹಾಗಾಗಿ ಈ ಗೀತೆಯನ್ನು ಮ್ಯಾಸಬೇಡರು ಹೊಸೆದು ಊರೂರಿಗೆ ಹಾಲು, ಮೊಸರು ಮಾರುತ್ತಾ ಬರುವ ಗೊಲ್ಲ ಹೆಣ್ಣಿನ ಕುರಿತಾಗಿ ಹಾಡನ್ನು ಕಟ್ಟಿ ಕೋಲಾಟದಲ್ಲಿ ಪ್ರದರ್ಶನ ಮಾಡಿರುವ ಸಾಧ್ಯತೆ ಇರುತ್ತದೆ ಅಥವಾ ಜಾತ್ರೆ, ಉತ್ಸವ, ಸಾಂಸ್ಕೃತಿಕ ನಾಯಕ-ನಾಯಕಿಯರ ಜಾತ್ರೆಗಳಲ್ಲಿ ಎರಡು ಸಮುದಾಯಗಳ ಕೋಲು ಕಲಾವಿದರು ಒಂದೆಡೆ ಸೇರಿ ಕೋಲು ಪ್ರದರ್ಶನ ಮಾಡುವ ಕಾಲಕ್ಕೆ ಕಾಡುಗೊಲ್ಲರ ಕೋಲುಪದವನ್ನು ಮ್ಯಾಸಬೇಡ ಸಮುದಾಯವು ತಮ್ಮ ಕೋಲಾಟಕ್ಕೆ ಬಳಕೆ ಮಾಡಿಕೊಂಡಿರುವ ಸಾಧ್ಯತೆಗಳಿರುತ್ತವೆ. ಒಟ್ಟಿನಲ್ಲಿ ಮ್ಯಾಸಬೇಡ ಮತ್ತು ಕಾಡುಗೊಲ್ಲರು ಬರೀ ಕೋಲು ಪದಗಳಲ್ಲಿ ಮಾತ್ರವಲ್ಲದೆ ಇತರೆ ಜಾನಪದ ಕಲೆಗಳಾದ ಬಯಲಾಟ, ಸೋಬಾನೆ, ಭಜನೆ, ದಾಸರಾಟ, ದೊಡ್ಡಾಟಗಳಂಥ ಕಲೆಗಳಲ್ಲಿಯೂ ಕೊಡು-ಪಡೆ ನಡೆದಿರುವುದಿದೆ. ಒಟ್ಟಾರೆ ತನ್ನ ಸಹಜತೆ ಮತ್ತು ಸರಳತೆಯಿಂದಾಗಿ ಮ್ಯಾಸಬೇಡ ಮತ್ತು ಕಾಡುಗೊಲ್ಲ ಬುಡಕಟ್ಟು ಸಮುದಾಯಗಳು ಆಡಿದ ನುಡಿ ಮಾತುಗಳೆಲ್ಲವೂ ಸಾಹಿತ್ಯವೇ ಆಗಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಮ್ಯಾಸಬೇಡರು ಮತ್ತು ಕಾಡುಗೊಲ್ಲರು ತಮ್ಮದೇ ಆದ ಜನಪದ ಸಾಹಿತ್ಯ ನಿರ್ಮಾಣ ಮಾಡಿದ್ದಾರೆ. ಈ ಎರಡೂ ಜನಾಂಗದ ಜನಪದ ಸಾಹಿತ್ಯವೂ ಹಲವಾರು ಶಾಖೆಗಳಲ್ಲಿ ಹರಡಿಕೊಂಡಿದೆ.

### ೬.೨. ಭಾಷಿಕ ಅನನ್ಯತೆ

ಮಾನವರು ಪ್ರಾಣಿಗಳಿಗಿಂತ ವಿಶಿಷ್ಟತೆಯನ್ನು ಗಳಿಸಿ ಬೆಳೆದಿರುವುದು ಭಾಷೆಯಿಂದ. ಒಬ್ಬರ ಅನಿಸಿಕೆಗಳನ್ನು ಭಾವನೆಗಳನ್ನು ಇತರರಿಗೆ ಅರ್ಥವತ್ತಾಗಿ ತಿಳಿಸುವ ಮಾಧ್ಯಮ ಭಾಷೆ. ಭಾಷೆಯ ಮೂಲಕವೇ ಪ್ರತಿಯೊಬ್ಬನೂ ತನ್ನ ವಿಚಾರವನ್ನು ಅನಿಸಿಕೆಗಳನ್ನು ವಿನಿಮಯ ಮಾಡಿಕೊಳ್ಳುವುದು ಇದೆ. ಒಬ್ಬನು ಮಾತಾಡುವುದನ್ನು ಇನ್ನೊಬ್ಬ ತಿಳಿಯಬಲ್ಲ ಮತ್ತು ಅದಕ್ಕೆ ಸರಿಯಾದ ರೀತಿಯಲ್ಲಿ ಪ್ರತಿಕ್ರಿಯಿಸಬಲ್ಲವನಾಗಿರುತ್ತಾನೆ. ಭಾಷೆ ಮತ್ತು ಯೋಚನೆಯಿಂದ ಮಾನವನು ಇತರ ಪ್ರಾಣಿಗಳಿಗಿಂತ ಭಿನ್ನವಾಗಿ ನಿಲ್ಲುತ್ತಾನೆ. "ಊಟ ಬಲ್ಲವನಿಗೆ ರೋಗವಿಲ್ಲ, ಮಾತು ಬಲ್ಲವನಿಗೆ ಜಗಳವಿಲ್ಲ" ಎಂಬ ನಾಣ್ನುಡಿ ಮತ್ತು ಅಲ್ಲಮಪ್ರಭುವಿನ "ಮಾತೆಂಬುದು ಜ್ಯೋತಿರ್ಲಿಂಗ" ಎಂಬಿವುಗಳನ್ನು ಗಮನಿಸಿದಾಗ ಸಮಾಜದಲ್ಲಿ ಬದುಕಲು, ಜೀವನ ಸಾಗಿಸಲು ಭಾಷೆ ಒಂದು ಪ್ರಮುಖ ಅಸ್ತ್ರ ಎಂಬುದು ತಿಳಿಯುತ್ತದೆ. ಭಾಷೆಯ ಕುರಿತಾಗಿ ಪ್ರಮುಖ ಭಾಷಾತಜ್ಞರಾದ ಹೆಸ್ಪ್ರಿಟ್ ಈ ರೀತಿಯಾಗಿ ವ್ಯಾಖ್ಯಾನಿಸಿದ್ದಾರೆ. "ಪದಗಳ ಮೂಲಕ ಮಾನವ ತನ್ನ ವಿಚಾರಗಳನ್ನು ವಿನಿಮಯ ಮಾಡಿಕೊಳ್ಳುವುದೇ ಭಾಷೆ" ಎಂದು ಹೇಳಿದ್ದಾರೆ(ಕೆಂಪೇಗೌಡ.ಕೆ.; ೨೦೦೫; ಪುಟ ೧).

ಮಾನವ ತನ್ನ ಭಾವನೆಗಳನ್ನು, ಅನಿಸಿಕೆಗಳನ್ನು ಭಾಷೆಯ ಮೂಲಕ ಸಂವಹನ ನಡೆಸುವುದರ ಮೂಲಕ ಹಂಚಿಕೊಳ್ಳುತ್ತಾನೆ. ಒಂದು ಸಾಮಾಜಿಕ ಸಂಬಂಧವನ್ನು ನಿಶ್ಚಿತಗೊಳಿಸಿಕೊಳ್ಳಲು ಮಾತು ಬೆಳೆಸುತ್ತಾನೆ. "ಮಾತು ಬೆಳ್ಳಿ ಮೌನ ಬಂಗಾರ" ಎಂಬ ನಾಣ್ನುಡಿಯೊಂದು ಇದೆ. ಇದರಿಂದಲೇ ಮಾತಿನ ಪ್ರಾಮುಖ್ಯತೆಯನ್ನು ಅರಿಯಬೇಕಿದೆ. ನಾಲಗೆಯನ್ನು ಹೇಗೆ ಬೇಕೋ ಹಾಗೆ ಹರಿಯ ಬಿಟ್ಟರೆ ಅದರಿಂದಾಗುವ ಅಪಾಯಗಳೇ ಜಾಸ್ತಿ. ಹಾಗಾಗಿ ಮಾತನ್ನು ಯಾವಾಗಲೂ ಮಿತವಾಗಿ ಬಳಸಿದಾಗ ಅದರ ಮೌಲ್ಯ ಮತ್ತಷ್ಟು ಹೆಚ್ಚುತ್ತದೆ ಎಂಬುದನ್ನು ಇದು ಸೂಚಿಸುತ್ತದೆ. ಮಾನವ ಸಮೂಹಜೀವಿ, ಸಮಾಜಜೀವಿ. ಅವನಾಡುವ ಮಾತು, ರೀತಿ ನೀತಿಗಳನ್ನು ಅಧ್ಯಯನಕ್ಕೆ ಒಳಪಡಿಸಬೇಕಾದರೆ ಅವನಿಂದಲೇ ಅದಕ್ಕೆ ಬೇಕಾದ ಮಾಹಿತಿಯನ್ನು ಸಂಗ್ರಹ ಮಾಡಿಕೊಳ್ಳ ಬೇಕಾಗುತ್ತದೆ. ಸಂಗ್ರಹಿಸಿದ ಮಾಹಿತಿಯ ಸಹಾಯದಿಂದ ಮಾನವನ ಭಾಷೆ, ಅದರ ಬೆಳವಣಿಗೆ, ಅದರ ಸುತ್ತಮುತ್ತಲಿನ ಪರಿಸರ ಹಾಗೂ ಪರಿಸ್ಥಿತಿ ಮುಂತಾದವುಗಳಿಗೆ ಸಂಬಂಧಿಸಿದಂತೆ ವಿಚಾರಗಳನ್ನು ಮಾನವ ಭಾಷಾಶಾಸ್ತ್ರದಲ್ಲಿ ವಿವೇಚಿಸಬಹುದಾಗಿದೆ. ಧರ್ಮ, ಜಾತಿ, ಜನಾಂಗ, ಸಮುದಾಯ, ಸಮಾಜ, ಸಂಸ್ಕೃತಿ, ಆಚಾರ, ವಿಚಾರ, ಜನಜೀವನ, ಭಾಷೆ ಮುಂತಾದವುಗಳಲ್ಲಿ ಭಾಷೆಗಿರುವ ಸಂಬಂಧವನ್ನು ಇಲ್ಲಿ ಅಭ್ಯಾಸಿಸಲು ಸಾಧ್ಯವಿದೆ.

ಭಾಷೆಯಿಂದ ಮಾನವರ ನಡುವೆ ಪರಸ್ಪರ ಭಾವನೆಗಳ ವಿನಿಮಯ ಕಾರ್ಯ ನಡೆಯುತ್ತದೆ. ಹಾಗಾಗಿ ವ್ಯಕ್ತಿ, ಸಮಾಜ, ಸಂಸ್ಕೃತಿಗಳಿಗೆ ಭಾಷೆಯೊಂದಿಗೆ ನೇರವಾದ ಸಂಬಂಧವಿದೆ ಎಂದು ಹೇಳಬಹುದು. ಭಾಷೆಯ ಕುರಿತು ವಿದ್ವಾಂಸರಾದ ಎಸ್.ಎಸ್. ಅಂಗಡಿ ಅವರು ಈ ರೀತಿಯಾಗಿ ಅಭಿಪ್ರಾಯಿಸಿದ್ದಾರೆ. "ಭಾಷೆಯ ಮೂಲಕವೇ ಭಾಷಿಕರ ನಡೆ-ನುಡಿ, ಆಚಾರ-ವಿಚಾರಗಳು, ಮನಸ್ಸಿನ ಭಾವನೆಗಳು ಪೀಳಿಗೆಯಿಂದ ಪೀಳಿಗೆಗೆ ಸಾಗಿಸಲ್ಪಡುತ್ತಾರೆ. ಭಾಷೆ ಕೇವಲ ಪದಗಳನ್ನಷ್ಟೇ ಒಳಗೊಳ್ಳದೆ ಆ ಪದಗಳ ಹಿಂದೆ ಆ ಭಾಷೆಯನ್ನಾಡುವ ಜನಗಳ ಬದುಕು ಜೀವನ ಕ್ರಮದ ಅನೇಕ ಅಂಶಗಳನ್ನು ಒಳಗೊಂಡಿರುತ್ತದೆ. ಯಾವುದೇ ಪದಗಳು ಮೇಲುನೋಟಕ್ಕೆ ಸ್ವತಂತ್ರ್ಯ ಎಂದು ಕಂಡುಬಂದರೂ ಅದರ ಹಿಂದೆ ಒಂದು ಜನಾಂಗದ ಸಂಸ್ಕೃತಿಯ ಗಾಢವಾದ ಸಂಬಂಧ ಇರುತ್ತದೆ"(ಅಂಗಡಿ.ಎಸ್.ಎಸ್.; ೨೦೦೮; ಪುಟ ೮)ಎಂದು ಹೇಳಿರುವುದನ್ನು ಗಮನಿಸಿದರೆ ಭಾಷೆಯು ಮಾನವರ ಅವಿಭಾಜ್ಯ ಅಂಗವಾಗಿರುವ ಸಂಸ್ಕೃತಿಯನ್ನು ರೂಪಿಸುವ ಫಲವಾಗಿ ಭಾಷೆ ಕಾರ್ಯನಿರ್ವಹಿಸುತ್ತದೆ. ಭಾಷೆಯಿಂದ ಪ್ರತಿಯೊಂದು ಸಮುದಾಯದ ಸಂಸ್ಕೃತಿಯು ಅನಾವರಣಗೊಳ್ಳುತ್ತದೆ ಎಂದು ಹೇಳಬಹುದು. ಹೀಗೆ ಭಾಷೆಗೂ ಮಾನವರಿಗೂ ಮತ್ತು ಸಂಸ್ಕೃತಿಗೂ ಬಿಟ್ಟೂ ಬಿಡದ ಅವಿನಾಭಾವ ಸಂಬಂಧವಿದೆ. ಭಾಷೆ ಮನುಷ್ಯನ ಜೀವನಾಡಿಯಾಗಿದೆ. ಪ್ರತಿಯೊಂದು ವಿಚಾರ, ಅನಿಸಿಕೆ, ಭಾವನೆ, ದ್ವೇಷ, ತುಮುಲ, ಅಸಹ್ಯ ಇತ್ಯಾದಿಗಳನ್ನು ವ್ಯಕ್ತಪಡಿಸಬೇಕಾದರೆ ಭಾಷೆಯೆನಿಸಿಕೊಂಡಿರುವ ಮಾತಿನ ಅವಶ್ಯಕತೆ ತುಂಬಾ ಇದೆ.

ಭಾರತವು ಬಹುಭಾಷಿಕರಿರುವ ದೇಶ ಪ್ರಪಂಚದಲ್ಲಿ ಎಲ್ಲಿಯೂ ಕಾಣದ ಬಹುಭಾಷಿಕ ಪರಿಸರ ಇಲ್ಲಿದೆ. ಒಂದೇ ಪ್ರದೇಶದಲ್ಲಿ ಹಲವಾರು ಧರ್ಮಗಳು, ಜಾತಿಗಳು, ಉಪಜಾತಿಗಳು

ಒಟ್ಟಿಗೆ ಜೀವನ ಸಾಗಿಸುತ್ತವೆ. ಈ ಎಲ್ಲ ಧರ್ಮದವರು, ಭಾಷಿಕರು, ಜಾತಿ-ಉಪಜಾತಿಯವರು ಒಂದೇ ಕಡೆ ನೆಲೆಸಿ ಬದುಕು ಸವೆಸುತ್ತಿರುವುದರಿಂದ ಪರಸ್ಪರ ಕೊಡು-ಕೊಳ್ಳುವಿಕೆಯಿಂದ ಸಾಮುದಾಯಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ಭಾಷಿಕವಾಗಿ ಒಂದು ಭಾಷೆಯ ಮೇಲೆ ಮತ್ತೊಂದು ಭಾಷೆಯು ಪ್ರಭಾವ ಬೀರುವ ಮತ್ತು ಸ್ವೀಕರಿಸುವ ಪ್ರಕ್ರಿಯೆ ಸಹಜವಾಗಿ ನೂರಾರು ವರ್ಷಗಳಿಂದ ನಡೆದುಬಂದಿದೆ. ಹೀಗೆ ಪರಸ್ಪರವಾಗಿ ಪ್ರತಿಯೊಂದು ಭಾಷೆಯು ಪ್ರತಿಯೊಂದು ಸಮುದಾಯದ ನಡುವಿನ ಸಂಪರ್ಕ ಭಾಷೆಯಲ್ಲಿ ಮತ್ತು ಸಂಸ್ಕೃತಿಯಲ್ಲಿ ಮಹತ್ವದ ಪರಿವರ್ತನೆಗಳಿಗೆ ಕಾರಣವಾಗಿ ಭಾಷೆ ಕೇವಲ ಸಂವಹನ ನಡೆಸುವ ಮಾಧ್ಯಮವಾಗಿದೆ. ಅದು ಆ ಭಾಷಿಕರ ಎಲ್ಲ ಆಯಾಮಗಳ ಪ್ರತಿಬಿಂಬವೂ ಆಗಿರುವುದರಿಂದ ಅಂತಹ ಭಾಷೆಯ ಮೂಲಕ ಆ ಜನಾಂಗದ ಅಥವಾ ಸಮುದಾಯದ ಮೂಲ ಮತ್ತು ಬೆಳವಣಿಗೆಯ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ.

ಒಂದು ಪ್ರದೇಶದಲ್ಲಿ ಅಥವಾ ಒಂದು ಸಮುದಾಯದಲ್ಲಿ ಎರಡು ಬೇರೆ ಬೇರೆ ಭಾಷೆಗಳನ್ನು ಮಾತನಾಡುವ ದ್ವಿಭಾಷಿಕ ಸಂದರ್ಭಗಳು ಕಾಣಿಸಿಕೊಳ್ಳುವುದಿದೆ. ಹಾಗೆಯೇ ಗಡಿಪ್ರಾಂತ ಪರಿಸರದಲ್ಲಿ ಮತ್ತೊಂದು ಬಗೆಯ ದ್ವಿಭಾಷಿಕ ಪರಿಸರವು ಕಾಣಸಿಗುತ್ತದೆ. ಇವುಗಳಲ್ಲಿ ಕೆಲವು ಈಗಾಗಲೇ ಗೊತ್ತಾದ ಪ್ರದೇಶಕ್ಕೆ ಮಾತ್ರ ಸೀಮಿತವಾಗಿರದೆ ಮತ್ತೆ ಕೆಲವು ರಾಜ್ಯಾದ್ಯಂತ ವಿಶಾಲವಾಗಿ ಹರಡಿಕೊಂಡಿರುವುದು ಕಾಣಬರುತ್ತದೆ. ಧಾರವಾಡ, ಬೆಳಗಾವಿ ಭಾಗದಲ್ಲಿ ಕನ್ನಡ- ಮರಾಠಿ, ಕರಾವಳಿಯಲ್ಲಿ ಕನ್ನಡ-ಕೊಂಕಣಿ ಮತ್ತು ಕನ್ನಡ-ತಮಿಳು - ಹೈದರಾಬಾದ್ ಕರ್ನಾಟಕದಲ್ಲಿ ಕನ್ನಡ-ಉರ್ದು-ತೆಲುಗು, ಕೊಡಗಿನಲ್ಲಿ ಕನ್ನಡ-ಕೊಡಗು ದ್ವಿಭಾಷಿಕ ಪ್ರದೇಶಗಳು ಕಂಡು ಬರುತ್ತವೆ. ಬಳ್ಳಾರಿ, ಚಿತ್ರದುರ್ಗ, ತುಮಕೂರು ಮತ್ತು ಕೋಲಾರಗಳ ಪೂರ್ವ ಗಡಿಗಳಲ್ಲಿ ಕನ್ನಡ-ತೆಲುಗು ದ್ವಿಭಾಷಿಕ ನೆಲೆಗಳನ್ನು ಕಾಣಬಹುದಾಗಿದೆ.

ಕರ್ನಾಟಕ-ಆಂಧ್ರಪ್ರದೇಶದ ಗಡಿ ಪ್ರಾಂತ ಪರಿಸರಕ್ಕೆ ಹೊಂದಿಕೊಂಡಿರುವ ಚಿತ್ರದುರ್ಗ, ಬಳ್ಳಾರಿ, ತುಮಕೂರು ಮತ್ತು ಕೋಲಾರಗಳು ಕನ್ನಡ ನಾಡಿನ ಪ್ರಾಂತಗಳಲ್ಲಿ ತೆಲುಗು ಮಾತನಾಡುತ್ತಾ ಕನ್ನಡ-ತೆಲುಗು ಎರಡೂ ಭಾಷೆಗಳನ್ನು ಏಕಕಾಲದಲ್ಲಿ ಬಳಸುತ್ತ ಸಂವಹನ ನಡೆಸುವುದು ಇದೆ. ಹಾಗಾಗಿ ಈ ಪ್ರಾಂತ ಪರಿಸರದ ಜನರು ದ್ವಿಭಾಷಿಕರಾಗಿದ್ದಾರೆ. ಹಾಗೆಯೇ ಕೆಲವು ಪ್ರಾಂತಗಳು ಕರ್ನಾಟಕದ ಗಡಿಗೆ ಹೊಂದಿಕೊಂಡಿರುವ ಕರ್ನೂಲು ಜಿಲ್ಲೆಯ ಆಲೂರು, ಹೊಳಗುಂದ, ಮಾರ್ಲಮಡಿಕಿ, ಅನಂತಪುರ, ಕಲ್ಯಾಣದುರ್ಗ, ರಾಯದುರ್ಗ, ಓಬಳಾಪುರಂ ಈ ಪ್ರಾಂತಗಳು ಆಂಧ್ರದ ಪ್ರಾಂತಗಳು. ಇಲ್ಲಿ ತೆಲುಗು ಮಾತೃಭಾಷೆ, ಆದರೂ ತೆಲುಗು ಜೊತೆ ಕನ್ನಡ ಮಾತನಾಡುವವರು ಕಾಣಸಿಗುತ್ತಾರೆ ಹಾಗೂ ಕನ್ನಡ-ತೆಲುಗು ಎರಡೂ ಭಾಷೆಗಳನ್ನು ಏಕಕಾಲದಲ್ಲಿ ಬಳಸಿ ದ್ವಿಭಾಷಿಕರಾಗಿರುವುದು ಕಂಡುಬರುತ್ತದೆ.

ಒಂದು ಭಾಷೆಯ ಪ್ರಭಾವ ಇನ್ನೊಂದು ಭಾಷೆಯ ಮೇಲೆ ಆದಾಗ ಅದರ ಛಾಪು ಒಂದೇ ರೀತಿ ಆಗಿರುವುದಿಲ್ಲ. ಕಾಲದಿಂದ ಕಾಲಕ್ಕೆ ಪ್ರಾಂತದಿಂದ ಪ್ರಾಂತಕ್ಕೆ ಸಮುದಾಯದಿಂದ

ಸಮುದಾಯಕ್ಕೆ ಬದಲಾವಣೆಯಾಗುತ್ತಾ ಹೋಗುತ್ತದೆ. ಹಾಗೆಯೇ ದ್ವಿಭಾಷಿಕ ಪರಿಸರದಲ್ಲಿ ಒಂದು ಭಾಷೆಯನ್ನು ಮಾತನಾಡುವಾಗ ಬೇರೊಂದು ಭಾಷೆಯ ನುಡಿಗಳನ್ನು, ನುಡಿಗಟ್ಟುಗಳನ್ನು ಸೇರಿಸಿ ಮಾತನಾಡುವುದು ಸಹಜ ಮತ್ತು ಸಾಮಾನ್ಯ ಪ್ರಕ್ರಿಯೆ. ಹೀಗೆಯೇ ಮಾತನಾಡುವುದರಿಂದ ಭಾಷೆ ವಿನಾಶದಂಚಿಗೆ ಹೋಗುತ್ತದೆ ಎಂಬುದು ಕೆಲವರ ಅಭಿಮತ. ಇದು ಭಾಷಾ ಬೆಳವಣಿಗೆಗೆ ತೊಂದರೆಯಾಗುತ್ತದೆ ಎಂದು ಹೇಳುವವರೂ ಇದ್ದಾರೆ. ಕೆಲವೊಂದು ಸಮಯದಲ್ಲಿ ಭಾಷಾ ಬಳಕೆ ಮಾಡುವಾಗ ಇಂಗ್ಲಿಷ್ ಅಥವಾ ಬೇರೊಂದು ಭಾಷೆಯ ನುಡಿಗಳನ್ನು ಉಪಯೋಗಿಸುವುದು ಪಾಂಡಿತ್ಯ ಪ್ರದರ್ಶನವೆಂದೂ, ಆಡಂಬರದ ಮಾತುಗಾರಿಕೆಯೆಂದೂ ಭಾವಿಸುವವರಿದ್ದಾರೆ. ಈ ರೀತಿಯ ನುಡಿ ಬೆರಕೆಯ ಬಗ್ಗೆ ಕೆಳಮಟ್ಟದ ಅನಿಸಿಕೆ ಮತ್ತು ಭಾವನೆಗಳು ಮೂಡುತ್ತವೆ. ನುಡಿಬೆರಕೆ ಯಾರೇ ಅವಿದ್ಯಾವಂತರ, ಅಲಕ್ಷಿತರ, ಅಜ್ಞಾನಿಗಳ ಸಮುದಾಯಗಳಿಗೆ ಸೀಮಿತವಾಗಿಲ್ಲ. ದ್ವಿಭಾಷಿಕ ಅಥವಾ ಬಹುಭಾಷಿಕ ವಲಯದ ಸಂಬಂಧವಿರುವ ಎಲ್ಲಾ ಸಮುದಾಯಗಳಲ್ಲಿ ವಿದ್ಯಾವಂತ, ಅವಿದ್ಯಾವಂತ, ನಾಗರಿಕ, ಅನಾಗರಿಕ, ತಿಳಿದವ, ತಿಳಿಯದವ ಇತರೆ ಎಲ್ಲಾ ವರ್ಗಗಳಲ್ಲಿ ಈ ರೀತಿಯ ಸಾಮಾನ್ಯ ಪ್ರಕ್ರಿಯೆ ಸಹಜವಾಗಿ ಕಾಣಿಸಿಕೊಳ್ಳುತ್ತವೆ.

ಕರ್ನಾಟಕ-ಆಂಧ್ರ ಗಡಿ ಪ್ರಾಂತ ಪರಿಸರದಲ್ಲಿ ನಡೆಯುವ ದ್ವಿಭಾಷಿಕತೆ ಅಥವಾ ಬಹುಭಾಷಿಕತೆ ಅಥವಾ ಬೇರೆ ಯಾವುದೇ ರಾಜ್ಯಗಳ ಗಡಿ ಪ್ರಾಂತಗಳಲ್ಲಿ ನಡೆಯುವ ದ್ವಿಭಾಷಿಕತೆ ದ್ವಿಭಾಷಿಗಳ ಭಾಷಾಬಳಕೆಯ ಕುರಿತಾಗಿ ಬಹುಭಾಷಿಕರು ಹಾಗೂ ವಿದ್ವಾಂಸರಾದ ಗೋಪಾಲಕೃಷ್ಣ ಅವರು ಈ ರೀತಿಯಾಗಿ ಅಭಿಪ್ರಾಯಿಸಿದ್ದಾರೆ. "ದ್ವಿಭಾಷಿಗಳ ಭಾಷಾ ಬಳಕೆಯಲ್ಲಿ ತಮ್ಮ ಮಾತೃಭಾಷೆಯಲ್ಲಿಯ ಬೇರೊಂದು ಭಾಷೆ ಪ್ರಯೋಗವಾಗುತ್ತದೆ. ಹೀಗೆ ಪ್ರಯೋಗಿಸುವಾಗ ದ್ವಿಭಾಷಿಗಳಿಗೆ ಕೆಲವೊಮ್ಮೆ ಇಂತಹ ಕ್ರಮ ನಡೆಯುತ್ತದೆ ಎಂಬ ಅರಿವು ಇರುವುದಿಲ್ಲ. ಕೆಲವು ಸಂದರ್ಭದಲ್ಲಿ ಬೇರೆ ಭಾಷೆಯನ್ನು ನಾವು ಬಳಸುತ್ತಿದ್ದೇವೆ ಅಥವಾ ಬೆರಕೆ ಮಾಡುತ್ತಿದ್ದೇವೆ ಎಂಬ ಅರಿವು ಸ್ಪಷ್ಟವಾಗಿರುತ್ತದೆ. ಹೀಗೆ ಸ್ಪಷ್ಟವಾಗಿ ತಿಳಿದಿರುವ ಭಾಷೆಯ ಬಳಕೆಯನ್ನು Switching ಎಂದು ಭಾಷಾಶಾಸ್ತ್ರಜ್ಞರು ಹೇಳುತ್ತಾರೆ ಎಂದು ದ್ವಿಭಾಷಿಕತೆ ಮತ್ತು ದ್ವಿಭಾಷಿಕರ ಕುರಿತಾಗಿ ಗೋಪಾಲಕೃಷ್ಣ ಅವರು ವಿಭಜಿಸಿರುವುದು ಸೂಕ್ತವೆನಿಸುತ್ತದೆ. ಏಕೆಂದರೆ ಕನ್ನಡ ನಾಡಿನ ಗಡಿಪ್ರಾಂತ ಪರಿಸರದಲ್ಲಿ ಕನ್ನಡದಲ್ಲಿ ತೆಲುಗು ಸೇರಿ ಹೋಗುವುದು, ಅದೇ ರೀತಿಯಾಗಿ ತೆಲುಗುನಾಡಿನ ಗಡಿಪ್ರಾಂತಗಳಲ್ಲಿ ತೆಲುಗು ಭಾಷೆಯೊಳಗೆ ಕನ್ನಡ ನುಡಿಗಳು ಸೇರಿ ಎರಡು ಭಾಷೆಗಳ ನುಡಿಗಳು ಸೇರಿ ಒಂದು ಅತ್ಯುತ್ತಮ ನುಡಿಯಾಗುತ್ತದೆ. ಆ ನುಡಿ ಮುಂದಿನ ದಿನಮಾನಗಳಲ್ಲಿ ನುಡಿಬೆರಕೆ ಆಗಿ ದ್ವಿಭಾಷಿಕತೆಯನ್ನು ರೂಪಿಸುತ್ತದೆ. ಉದಾಹರಣೆಗೆ ಕನ್ನಡ ನಾಡಿನ ಗಡಿಪ್ರಾಂತ ಪರಿಸರದಲ್ಲಿ ನೆಲೆಸಿರುವ ಕೆಲವು ಸಮುದಾಯಗಳಾದ ಬೇಡರು, ಬೋವಿ, ಮಾದಿಗ, ರೆಡ್ಡಿ, ಕಮ್ಮ ಮುಂತಾದ ಸಮುದಾಯಗಳ ಮಾತೃಭಾಷೆ ತೆಲುಗು ಇವರಾಡುವ ತೆಲುಗಿನಲ್ಲಿ ಕನ್ನಡ ನುಡಿಗಳು ಸೇರಿ ಹೋಗಿ ದ್ವಿಭಾಷಿಕ ಪರಿಸರದ ವಾತಾವರಣವನ್ನು ಸೃಷ್ಟಿ ಮಾಡಿರುವುದು ಕಂಡುಬರುತ್ತದೆ.

ಉದಾಹರಣೆಗೆ:-

ಗಡಿಪ್ರಾಂತದಲ್ಲಿ ನೆಲೆಸಿರುವ ತೆಲುಗು ಮಾತನಾಡುವವರಲ್ಲಿ ಕನ್ನಡ ನುಡಿಗಳು ಬೆರಕೆಯಾಗಿರುವುದು.

**ಗಡಿನಾಡ ತೆಲುಗು**

* ಆಡು-ತೆಲುಗು - ಬಾಳೆಪೊಂಡು ತೀಸ್ಕೋನಿ ದಾ
* ಶಿಷ್ಟ-ತೆಲುಗು - ಅರಿಟಿಪಂಡು ತೀಸ್ಕೋನಿ ರಾ
* ಆಡು-ತೆಲುಗು - ಏಂಟಿ ತಮ್ಮುಡು ಮೀ ಇಂಟ್ಲೋ ಮೀನ್ಲುಕೂರಾಕು ಚೇಸಿನಾರ
* ಶಿಷ್ಟ-ತೆಲುಗು - ಏಂಟಿ ತಮ್ಮುಡು ಮೀ ಇಂಟ್ಲೋ ಚಾಪಲಕೂರಾಕು ಚೇಸಿನಾರ

ಹೀಗೆ ಕರ್ನಾಟಕ ಗಡಿ ಪ್ರಾಂತ ಪರಿಸರದಲ್ಲಿ ನೆಲೆಸಿದ ಕೆಲವರ ಮಾತೃಭಾಷೆ ತೆಲುಗು ಆಗಿರುವುದರಿಂದ ಹಾಗೂ ಅವರು ಕನ್ನಡ ನಾಡಿನಲ್ಲಿ ನೆಲೆಸಿರುವುದರಿಂದ ಅವರ ಸಂವಹನ ತೆಲುಗು ಭಾಷೆಯಲ್ಲಿ ಕನ್ನಡ ನುಡಿಗಳು ಸೇರಿ ನುಡಿಬೆರಕೆ ಅಥವಾ 'Code Switching' ಆಗಿರುವುದು ಕಂಡುಬರುತ್ತದೆ. ಈ Code Switching ಅಥವಾ ನುಡಿಬೆರಕೆಯ ಒಂದು ವಿಷಯವನ್ನು ಸರಿಯಾಗಿ ನಿರೂಪಿಸಬೇಕು ಎಂದು ಆ ವಿಷಯ ಅಥವಾ ಘಟನೆಯನ್ನು ಹೇಳುವಾಗ ಬೇರೆಯವರು ನಿರೂಪಿಸುವ ನುಡಿಗಳನ್ನು ಅಥವಾ ಮಾತುಗಳನ್ನು ಅವರ ಮಾತಿನಲ್ಲಿಯೇ ನಾವು ವ್ಯಕ್ತಪಡಿಸಲು ಇಷ್ಟ ಪಡುತ್ತೇವೆ. ಹೀಗಾಗಿ ಈ ರೀತಿಯ ದ್ವಿಭಾಷೆ ಗಡಿಪ್ರಾಂತ ಪರಿಸರದ ಆಡುಭಾಷೆಗಳಲ್ಲಿ ಕನ್ನಡದೊಂದಿಗೆ ತೆಲುಗು, ತೆಲುಗಿನೊಂದಿಗೆ ಕನ್ನಡ ನುಡಿ ಸೇರಿ ಹೋಗಿ Code Switching ಅಥವಾ ನುಡಿಬೆರಕೆ ಆಗುವುದು ಗಡಿಪ್ರಾಂತ ಪರಿಸರದಲ್ಲಿ ಸಹಜ ಪ್ರಕ್ರಿಯೆಯಾಗಿದೆ.

ಉದಾಹರಣೆಗೆ:- ಇದೇನು ಹನುಮಪ್ಪ ಇನ್ನೂ ಬರಲ್ಲೀನೋ ಮಡಕೆ ಕಟ್ಟಿಕೊಂಡು ಇಲ್ಲಿ ಅವನು ಇವತ್ತು ಬರಾದಿಲ್ವಂತೆನೇನು ರಾಯದುರ್ಗಕಿ ಪೋವಲ್ಲ ವಚ್ಚೇಕಯ್ಯೇಲೇದು ಅಂದ". ಹೀಗೆ ಯಾವುದೇ ಒಂದು ಸಂದರ್ಭದಲ್ಲಿ ನಡೆದ ಸನ್ನಿವೇಶ ಘಟನೆಗಳಲ್ಲಿ ಒಂದು ಭಾಷೆಯನ್ನು ಬಲ್ಲಂಥ ವ್ಯಕ್ತಿ ಬೇರೊಂದು ಭಾಷೆಯ ವ್ಯಕ್ತಿ ನಿರೂಪಿಸಿದ ಹಾಗೆಯೇ ತಾನು ಹೇಳಬೇಕೆಂಬ ಆಸೆಯಿಂದಲೇ ಕುತೂಹಲದಿಂದಲೇ ನುಡಿದಾಗ ಅನಿವಾರ್ಯವಾಗಿ ಆ ಭಾಷೆ ಹಾಗೆ ಉಳಿದುಕೊಳ್ಳುತ್ತವೆ. ಆಗ ಈ ರೀತಿಯ Code Switching ಅಥವಾ ನುಡಿಬೆರಕೆಗಳು ಆಗುವುದು ಕಂಡುಬರುತ್ತದೆ.

ಭಾಷೆ ಮತ್ತು ದ್ವಿಭಾಷಿಕತೆಯನ್ನು ಕುರಿತು ಭಾಗ್ಯಲಕ್ಷ್ಮಿ ಅವರು ಹೀಗೆ ಅಭಿಪ್ರಾಯಿಸಿದ್ದಾರೆ. "೧೯೫೬ರ ನಂತರದಲ್ಲಿ ಭಾಷಾವಾರು ಜಿಲ್ಲೆಗಳ ಪುನರ್‌ವಿಂಗಡಣೆಯಾಗಿ ಅಖಂಡ ಕರ್ನಾಟಕಕ್ಕೂ ಗಡಿಯನ್ನು ಹಾಕಲಾಯಿತಷ್ಟೇ ಭಾಷಿಕ ಗಡಿಯನ್ನು ಹಾಕಲು ಮಾತ್ರ ಸಾಧ್ಯವಾಗಲಿಲ್ಲ. ಏಕೆಂದರೆ

ಕರ್ನಾಟಕ ಕೇವಲ ಕನ್ನಡಿಗರಿಂದಷ್ಟೇ ಕಂಡಿಲ್ಲ ರಾಜಕೀಯ ಕಾರಣಗಳಿಗಾಗಿ ಹಲವು ಭಾಷೆಗಳ ಭಾಷಿಕರು ಆಯಾಯಾ ಭಾಷಾ ಪ್ರದೇಶಗಳಿಗೆ ಹರಿದು ಹಂಚಿ ಹೋಗಿದ್ದಾರಷ್ಟೇ ಹಲವಾರು ಭಾಷೆಗಳ ಅವಶ್ಯಕತೆಗಳ ಪೂರೈಕೆಗಾಗಿ ಅನ್ಯಭಾಷಿಕರು ಅನಿವಾರ್ಯವಾಗಿ ಕನ್ನಡಿಗರೊಂದಿಗೆ ಕನ್ನಡಿಗರು ಅನ್ಯಭಾಷಿಕರೊಂದಿಗೆ ಸಂಪರ್ಕಿಸಬೇಕಿದೆ. ಅಲ್ಲದೆ ಕರ್ನಾಟಕ ಬಹಳ ಉದ್ದದ ಅನ್ಯಭಾಷಿಕರ ಗಡಿಗಳನ್ನು ಹೊಂದಿರುವುದರಿಂದ ಗಡಿ ಪ್ರದೇಶದಲ್ಲಿ ಏರ್ಪಡುವ ದ್ವಿಭಾಷಾ ಸನ್ನಿವೇಶಗಳು ಪರಿಣಾಮದಲ್ಲಿ ಒಂದಕ್ಕಿಂತ ಒಂದು ಭಿನ್ನವಾಗಿದೆ. ಅಲ್ಲದೆ ಕನ್ನಡ ಭಾಷೆಯ ರಚನೆ ಮತ್ತು ಬಳಕೆ ಮೇಲೆ ಹಲವು ರೀತಿಯ ಬದಲಾವಣೆಯನ್ನುಂಟುಮಾಡಿದೆ"(ಭಾಗ್ಯಲಕ್ಷ್ಮಿ.ಎಂ.; ೨೦೦೨; ಪುಟ ೫೮) ಎಂದಿದ್ದಾರೆ. ೧೯೫೬ರ ಭಾಷಾವಾರು ರಾಜ್ಯ ವಿಂಗಡಣೆಗೂ ಮೊದಲು ಕರ್ನಾಟಕ ವಿಶಾಲವಾದ ಗಡಿ ವಿಸ್ತಾರವನ್ನು ಹೊಂದಿತ್ತು. ಅದು ಆಂಧ್ರಪ್ರದೇಶ ಮಹಾರಾಷ್ಟ್ರ, ತಮಿಳುನಾಡು, ಕೇರಳ ರಾಜ್ಯಗಳ ಹಲವು ಪ್ರಾಂತಗಳನ್ನು ತನ್ನ ವ್ಯಾಪ್ತಿಯಲ್ಲಿ ಸೇರಿಸಿಕೊಂಡಿತ್ತು. ರಾಜಕೀಯ ಕಾರಣಗಳಿಂದ ಗಡಿ ವಿಸ್ತಾರಗೊಂಡು ಕರ್ನಾಟಕದ ಪ್ರಾಂತಗಳ ಇತರೆ ರಾಜ್ಯಗಳೊಂದಿಗೆ ಹಂಚಿಹೋಗಿದೆ. ಹಾಗಾಗಿ ಕರ್ನಾಟಕದ ಗಡಿ ವಿಚಾರದಲ್ಲಿ ವ್ಯತ್ಯಾಸವಾಗಿದೆಯೇ ಹೊರತು ಗಡಿ ಪ್ರಾಂತಗಳಲ್ಲಿ ಭಾಷಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಅಕ್ಕಪಕ್ಕದ ರಾಜ್ಯಗಳ ಗಡಿ ಭಾಗದ ಜನಗಳ ಭಾಷೆ, ಕಲೆ, ಸಾಹಿತ್ಯಗಳ ಕೊಡು-ಕೊಳ್ಳುವಿಕೆಯಿಂದ ಮತ್ತಷ್ಟು ಶ್ರೀಮಂತ ರಾಜ್ಯವಾಗಿದೆ ಎಂದು ಹೇಳಬಹುದು.

ಕರ್ನಾಟಕ-ಆಂಧ್ರಪ್ರದೇಶ ಇವೆರಡು ನೆರೆಯ ರಾಜ್ಯಗಳು ಭಿನ್ನ ಭಾಷೆ ಮತ್ತು ಭಿನ್ನ ಸಂಸ್ಕೃತಿಯನ್ನು ಹೊಂದಿವೆ. ಈ ಎರಡು ರಾಜ್ಯಗಳನ್ನು ಕೂಡಿಸುವ ಗಡಿ ಪ್ರಾಂತಗಳು ಮಾತ್ರ ಭಿನ್ನ ಸಂಸ್ಕೃತಿ ಮತ್ತು ಭಿನ್ನ ಭಾಷೆಗಳನ್ನು ಸೇರಿಸಿಕೊಂಡು ಅಭಿನ್ನತೆಯ ನಡೆ-ತೋರಿರುವುದು ಕಂಡುಬಂದಿದೆ. ಎರಡು ರಾಜ್ಯಗಳನ್ನು ಸಂಧಿಸುವ ಅನಂತಪುರಂ, ರಾಯದುರ್ಗ, ಕಲ್ಯಾಣದುರ್ಗ, ಒಬಳಾಪುರಂ, ಕರ್ನೂಲು, ಆಲೂರು, ಹೊಳಗುಂದ ಹಾಗೂ ಬಳ್ಳಾರಿ, ಚಿತ್ರದುರ್ಗ, ತುಮಕೂರು ಮತ್ತು ಕೋಲಾರ ಪೂರ್ವದಂಚಿನ ಗಡಿ ಪ್ರಾಂತಗಳು ಕರ್ನಾಟಕ - ಆಂಧ್ರ ಗಡಿಪ್ರಾಂತ ಪರಿಸರವನ್ನು ಸೃಷ್ಟಿಸಿಕೊಂಡಿವೆ. ಈ ಪ್ರಾಂತಗಳಲ್ಲಿ ಕನ್ನಡ-ತೆಲುಗು, ತೆಲುಗು-ಕನ್ನಡ ಹಾಗೆಯೇ ತೆಲುಗನ್ನಡ, ಕಂದೆಲುಗು ಮಾತಾನಾಡುವುದು ಸಹಜವಾದ ಪ್ರಕ್ರಿಯೆಯಾಗಿದೆ.

ಆಂಧ್ರ ಮತ್ತು ಕರ್ನಾಟಕ ಗಡಿಪ್ರಾಂತ ಪರಿಸರದಲ್ಲಿ ಕನ್ನಡದ ಮೇಲೆ ತೆಲುಗು ಮತ್ತು ತೆಲುಗಿನ ಮೇಲೆ ಕನ್ನಡದ ಪ್ರಭಾವ ಆಗಿರುವುದರಿಂದ ಕಂದೆಲುಗು ಎನ್ನುವಂತಹ ಭಾಷೆಯೊಂದು ಸೃಷ್ಟಿಯಾಗಿದೆ ಎಂದು ಹಲವು ಭಾಷಾತಜ್ಞರ ಅಭಿಮತವಾಗಿದೆ. ಕರ್ನಾಟಕ-ಆಂಧ್ರ ಪ್ರಾಂತಗಳಲ್ಲಿ ಕನ್ನಡ - ತೆಲುಗು ಭಾಷೆಗಳು ಪರಸ್ಪರ ಪ್ರಭಾವಿಸಿಕೊಂಡಿರುವುದನ್ನು ಅಲ್ಲಿ ನೆಲೆಸಿರುವ ಜನರ ಸಂವಹನದಲ್ಲಿ ನೋಡಬಹುದು. ಆಂಧ್ರಗಡಿ ಪ್ರಾಂತದಲ್ಲಿ ನೆಲೆಸಿರುವ ಸಮುದಾಯಗಳ ಕನ್ನಡದಲ್ಲಿ ತೆಲುಗು ಭಾಷಿಕ ನುಡಿಗಳು ಸೇರಿ ಹೋಗಿವೆ.

**೬.೨.೧. ಗಡಿಪ್ರಾಂತ ಜನರ ತೆಲುಗಿನಲ್ಲಿ ಕನ್ನಡ ನುಡಿ ಪ್ರವೇಶ**

೧. ಗಡಿಭಾಗದ ಜನರ ತೆಲುಗಿನಲ್ಲಿ ಕನ್ನಡ - ನಾ ಬೆನ್ನುಮೀದ ನಾ ಚಿನ್ನ ಕೊಡುಕು ಕೂರ್ಚುಕೊನ್ನಾಡು

ಶಿಷ್ಟ ತೆಲುಗಿನಲ್ಲಿ - ನಾ ವೀಪು ಮೀದ ನಾ ಚಿನ್ನಕೊಡುಕು ಕೂರ್ಚುಕೊನ್ನಾಡು ಎಂದು ಆಗ ಬೇಕಿತ್ತು. ಆದರೆ ಗಡಿ ಪ್ರಾಂತದಲ್ಲಿ ನೆಲೆಸಿರುವುದರಿಂದ ಕನ್ನಡದ ಪ್ರಭಾವದಿಂದ ಕನ್ನಡದ ಪದವಾದ 'ಬೆನ್ನು' ಎನ್ನುವಂಥ ನುಡಿ ಹಾಗೆ ಉಳಿದಿರುವುದಿದೆ.

೨. ಗಡಿಭಾಗದ ಜನರ ತೆಲುಗು - ರೆಂಡು ಡಜನ್ಲು ಬಾಳೆಪೊಂಡ್ಲು ತೀಸ್ಕೋನಿ ರಾ? ಇದು ಶಿಷ್ಟ ತೆಲುಗಿನಲ್ಲಿ "ರೆಂಡು ಡಜನ್ಲು ಅರಿಟಿಪಂಡ್ಲು ತೀಸ್ಕೋನಿ ರಾ" ಎಂದಾಗುತ್ತದೆ. ಆದರೆ ಇಲ್ಲಿ ತೆಲುಗಿನ ಅರಿಟಿ ಪಂಡು ಎನ್ನುವ ಪದದ ಬದಲು ಗಡಿ ಭಾಗದ ಜನರು ತೆಲುಗಿನಲ್ಲಿ ಬಾಳೆಪೊಂಡ್ಲು ಎಂಬ ಪದ ಬಳಕೆ ಮಾಡಿದ್ದಾರೆ. ಬಾಳೆ ಎನ್ನುವ ಕನ್ನಡ ಪದಕ್ಕೆ  ಪಂಡು-ಪೊಂಡು" ಎನ್ನುವ ತೆಲುಗು ಪದ ಸೇರಿಕೊಂಡು ಬಾಳೆಪೊಂಡ್ಲು ಅಥವಾ ಬಾಳೆಪಂಡು ಎಂದು ಗಡಿಭಾಗದ ಜನರ ತೆಲುಗಿನಲ್ಲಿ ಕನ್ನಡದ ಬಾಳೆ ಎನ್ನುವ ಪದ ಸೇರಿ ಹೋಗಿ ನುಡಿಬೆರಕೆಯಾಗಿದೆ.

**ಆಂಧ್ರ ಗಡಿಭಾಗದ ಜನರ ಆಡು ಭಾಷೆಯ ತೆಲುಗು**

**ಗಡಿ ಭಾಗದ ಜನರ ತೆಲುಗು** - ಮಾ ನಾನ್ನ ಊರಿನಿಂಚಿ ವಚ್ಚಾಡು ಅಲ್ಸಪಂಡು ಕಂಡೆಚ್ಚಾಡೆ, **ಶಿಷ್ಟ ತೆಲುಗಿನಲ್ಲಿ** - "ಮಾ ನಾನ್ನ ಊರಿನಿಂಚಿ ವಚ್ಚಾಡು ಪನಸು ಪಂಡ್ಲು ಕಂಡೆಚ್ಚಾಡೆ" ಎಂದಾಗಬೇಕಿತ್ತು. ಗಡಿ ಪ್ರಾಂತ ಜನರ ತೆಲುಗಿನಲ್ಲಿ ಪನಸು-ಅಲ್ಸು ಆಗಿರುವುದು ಕಂಡುಬರುತ್ತದೆ. ಹೀಗೆ ಕರ್ನಾಟಕದ ಗಡಿಭಾಗದಲ್ಲಿ ನೆಲೆಸಿರುವ ಜನರ ತೆಲುಗು ಭಾಷೆಯಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಕನ್ನಡದ ನುಡಿಗಳು ಸೇರಿರುವುದನ್ನು ಅವಲೋಕಿಸಬಹುದು. ಹಾಗೆಯೇ ಇವರಾಡುವ ಕನ್ನಡದ ನುಡಿಗಳಲ್ಲಿಯೂ ತೆಲುಗಿನ ನುಡಿಗಳು ಸೇರಿ ಹೋಗಿ ಕನ್ನಡದ ಮೇಲೆ ತೆಲುಗಿನ ಪ್ರಭಾವ ಆಗಿರುವುದನ್ನು ಕಾಣಬಹುದು.

**೬.೨.೨. ಗಡಿನಾಡ ಕನ್ನಡದ ಮೇಲೆ ತೆಲುಗಿನ ಪ್ರಭಾವ**

ಕರ್ನಾಟಕದ ಗಡಿಭಾಗದಲ್ಲಿ ನೆಲೆಸಿರುವ ಜನರ ತೆಲುಗಿನ ಮೇಲೆ ಕನ್ನಡ ಪ್ರಭಾವ ಬೀರಿದಂತೆ ಕನ್ನಡ ಭಾಷೆಯ ಮೇಲೂ ತೆಲುಗಿನ ನುಡಿಗಳು ಸೇರಿ ತೆಲುಗು ಭಾಷೆಯು ಪ್ರಭಾವಿಸಿರುವುದು ಕಂಡುಬರುತ್ತದೆ.

**ಗಡಿನಾಡ ಕನ್ನಡಿಗರ ಭಾಷೆಯಲ್ಲಿ ತೆಲುಗಿನ ನುಡಿಗಳು ಪ್ರವೇಶ** : ಗಡಿನಾಡು ಕನ್ನಡ ಬಾಪ್ನಾರ ಹುಡುಗಿ ಇದ್ದಂಗೆ ಇದ್ದಿಯಾ. ಶಿಷ್ಟ ಕನ್ನಡದಲ್ಲಿ - ಬ್ರಾಹ್ಮಣರ ಹುಡುಗಿ ಇರುವ ಹಾಗೆ ಇದ್ದಿಯಾ ಎಂದಾಗಬೇಕಿತ್ತು. ಆದರೆ ಗಡಿನಾಡ ಕನ್ನಡಿಗರ ನುಡಿಗಳಲ್ಲಿ ತೆಲುಗಿನ ಬಾಪನವಾರು (ಬಾಪ್ನಯ್ಯ) ಎನ್ನುವ ಪದ ಸೇರಿ ಹೋಗಿದೆ. ತೆಲುಗಿನಲ್ಲಿ ಬಾಪನಾವಾರು ಎಂದರೆ ಬ್ರಾಹ್ಮಣರು ಎಂದರ್ಥ. ಅದು ಕನ್ನಡ ನುಡಿಗಳಲ್ಲಿ ಯಥಾರ್ಥವಾಗಿ ಸೇರಿ ಹೋಗಿರುವುದು ಕಂಡುಬರುತ್ತದೆ.

**೨. ಗಡಿನಾಡ ಕನ್ನಡ** - ನಾಳೆ ಗೌಸಂದ್ರ ಮಾರಮ್ಮಗೆ ಸಾಕಿದ ಪಟ್ಲಿ ಕಡಿತೀವಿ.

**ಶಿಷ್ಟ ಕನ್ನಡ** - ನಾಳೆ ಗೌಸಂದ್ರ ಮಾರಮ್ಮನಿಗೆ ಸಾಕಿದ ಟಗರು ಕಡಿತೀವಿ. ಗಡಿನಾಡಿನ ಕನ್ನಡಿಗರ ಕನ್ನಡದಲ್ಲಿ ಕನ್ನಡದ ಟಗರು ಎನ್ನುವುದಕ್ಕೆ ಬದಲಾಗಿ ತೆಲುಗಿನ ಪಟ್ಲಿ ಎನ್ನುವ ಪದ ಸೇರಿ ನುಡಿಬೆರಕೆಯಾಗಿದೆ. ಇದು ಶಿಷ್ಟ ತೆಲುಗಿನ ಪೊಟೇಲು ಪದದಿಂದ ರೂಪಾಂತರ ಹೊಂದಿ ಗಡಿ ಪರಿಸರದಲ್ಲಿ ಪಟ್ಲಿ ಎಂದಾಗಿರುವುದು ಕಂಡುಬರುತ್ತದೆ.

**೩. ಗಡಿನಾಡ ಕನ್ನಡ** - ಹುಣಸೇ ಮರದ ಮೇಲೆ ಕಾಕಿ ಕುಂತೈತೆ.

**ಶಿಷ್ಟ ಕನ್ನಡ** - ಹುಣಸೇ ಮರದ ಮೇಲೆ ಕಾಗೆ ಕುಳಿತಿದೆ. ಇಲ್ಲಿ ಗಡಿನಾಡ ಕನ್ನಡಿಗರ ಕನ್ನಡದಲ್ಲಿ ಕಾಕಿ ಎನ್ನುವ ತೆಲುಗು ತೂರಿ ಬಂದಿರುವುದನ್ನು ಗಮನಿಸಬಹುದು. ಇಲ್ಲಿ 'ಕಾಕಿ' ಪದಕ್ಕೆ ಬದಲಾಗಿ ಶಿಷ್ಟ ಕನ್ನಡದ 'ಕಾಗೆ' ಎಂದು ಆಗಬೇಕಿತ್ತು.

ಹೀಗೆ ಕನ್ನಡದ ಮೇಲೆ ತೆಲುಗು, ತೆಲುಗಿನ ಮೇಲೆ ಕನ್ನಡದ ಪ್ರಭಾವವು ಪರಸ್ಪರ ಆಗಿರುವುದು ಕಂಡುಬರುತ್ತದೆ. ಹಾಗೆಯೇ ಗಡಿ ಭಾಗದ ಜನರ ತೆಲುಗಿನಲ್ಲಿ ಕನ್ನಡ ನುಡಿಯು ಸೇರಿ ಆ ನುಡಿಯೊಂದಿಗೆ ತೆಲುಗಿನ ವಿಶೇಷಣಗಳು ಅಥವಾ ಪ್ರತ್ಯಯಗಳು ಸೇರಿ ನುಡಿಬೆರಕೆ ಆಗುವುದು ಕಂಡು ಬರುತ್ತದೆ. ಗಡಿ ಪ್ರಾಂತದ ತೆಲುಗಿನಲ್ಲಿ ಕನ್ನಡ ನುಡಿಯೊಂದಿಗೆ ತೆಲುಗಿನ ಪ್ರತ್ಯಯವೂ ಸೇರಿ ನುಡಿಬೆರಕೆಯಾಗಿರುವುದು ಉದಾಹರಣೆಯಾಗಿ ನೋಡಬಹುದು.

ಗಡಿನಾಡ ತೆಲುಗು - ಮಾ ಇಂಟ್ಲೋ ಮೀನ್ಲು ಕೂರಾಕು ಚೇಸಿನಾರು

ಶಿಷ್ಟ ತೆಲುಗು - ಮಾ ಇಂಟ್ಲೋ ಚಾಪಲ ಕೂರಾಕು ಚೇಸಿನಾರು - ಗಡಿನಾಡ ತೆಲುಗಿನ ವಿಶೇಷತೆ ಕನ್ನಡದ ಮೀನು ಎನ್ನುವ ಪದದೊಂದಿಗೆ ತೆಲುಗು ಭಾಷೆಯ ಪ್ರತ್ಯಯ 'ಲು' ಎನ್ನುವ ಅಕ್ಷರ ಸೇರಿ ಮೀನು ಪದವು ಸಹ ತೆಲುಗಿನ ಪದವೆಂಬಂತೆ ತೋರಿಬರುವ ಹಾಗೆ ಸೇರಿ ಹೋಗುವುದನ್ನು ಗಮನಿಸಬಹುದಾಗಿದೆ. ಗಡಿಪ್ರಾಂತಗಳಲ್ಲಿ ಕನ್ನಡ, ತೆಲುಗು ಸಂಸ್ಕೃತಿಗಳ ಪೂರಕವಾಗಿ ಹಾಗೆಯೇ ಗಡಿ ಭಾಗಗಳು ಕನಿಷ್ಠ ಎರಡು ಭಾಷೆ ಮತ್ತು ಎರಡು ಸಂಸ್ಕೃತಿಗಳನ್ನು ರೂಪಿಸಿಕೊಂಡಿರುತ್ತವೆ.

ದ್ವಿಭಾಷಿಕತೆ ಮತ್ತು ನುಡಿಬೆರಕೆಗಳು ಗಡಿಪ್ರಾಂತ ಜನರ ಸಂವಹನದಲ್ಲಿ ಮಾತ್ರವಲ್ಲದೆ ಅವರಾಡುವ ಜನಪದ ಗೀತೆ, ಸಾಹಿತ್ಯ, ಕಲೆ, ಕ್ರೀಡೆ, ಪ್ರದರ್ಶನ ಕಲೆ ಮತ್ತು ರಂಗಕಲೆಗಳಲ್ಲೂ ಕಂಡುಬರುತ್ತದೆ. ಕರ್ನಾಟಕಾಂಧ್ರ ಗಡಿಪ್ರಾಂತದ ಕೋಲಾಟ, ತೊಗಲುಗೊಂಬೆ ಆಟ, ಬುರ್ರಕಥಾ, ವ್ಯಕ್ತಿನಾಮಗಳು, ಸ್ಥಳನಾಮಗಳು, ದಾಸರಾಟ, ಕೋಲೆಬಸವನಾಟ, ಬಯಲಾಟ ಇತ್ಯಾದಿ ಜನಪದ ಕಲೆಗಳಲ್ಲಿ ಕನ್ನಡ-ತೆಲುಗು ಎರಡು ಭಿನ್ನ ಸಂಸ್ಕೃತಿಗಳು ಏಕವಾಗುವುದರೊಂದಿಗೆ ಭಾಷಿಕವಾಗಿಯೂ ದ್ವಿಭಾಷಿಕತೆಯನ್ನು ಒಳಗೊಂಡಿರುವುದು ಕಂಡುಬರುತ್ತದೆ.

ಕನ್ನಡ ಮತ್ತು ತೆಲುಗು ಗಡಿ ಪ್ರಾಂತಗಳಲ್ಲಿ ಕೋಲಾಟವನ್ನು ಪ್ರತಿಯೊಂದು ಹಳ್ಳಿ-ಹಟ್ಟಿಗಳಲ್ಲಿ ಆಡುವುದು ಕಾಣಸಿಗುತ್ತದೆ. ಈ ಗಡಿಭಾಗದಲ್ಲಿ ಕನ್ನಡ ನಾಡಿನಲ್ಲಿ ಕನ್ನಡ - ತೆಲುಗು ಎರಡು

ಭಾಷೆಯ ಹಾಡುಗಳು ಕಂಡುಬರುತ್ತವೆ ಮತ್ತು ಎರಡು ಭಾಷೆಯ ಹಾಡುಗಳಿಗೆ ಕೋಲಾಟ ಪ್ರದರ್ಶನ ಮಾಡುವುದು ಇದೆ. ಹಾಗೆಯೇ ಕನ್ನಡ ನಾಡಿನ ಕನ್ನಡದ ಹಾಡುಗಳಲ್ಲಿ ತೆಲುಗು ನುಡಿಗಳು ಸೇರಿ ಹೋಗಿ ನುಡಿಬೆರಕೆಯಾಗಿರುವುದು ಕಂಡುಬಂದಿದೆ. ಜೊತೆಗೆ ಕೋಲು ಕಲಾವಿದರು ಕೋಲಾಟವನ್ನು ಪ್ರದರ್ಶನ ಮಾಡುವ ಕಾಲಕ್ಕೆ ಕನ್ನಡ ಪದ ಹಾಡುತ್ತಾ ಇರುತ್ತಾರೆ, ಕನ್ನಡದ ಹಾಡು ಮುಗಿಯುವ ಹೊತ್ತಿಗೆ ತೆಲುಗಿನ ಮತ್ತೊಂದು ಗೀತೆಗೆ ಕೋಲು ಪ್ರದರ್ಶನ ಮಾಡುವುದು ಕಂಡು ಬರುತ್ತದೆ. ಈ ಪ್ರಕ್ರಿಯೆ ಆಂಧ್ರಪ್ರದೇಶ ಮತ್ತು ಕರ್ನಾಟಕದ ಗಡಿಭಾಗಗಳಲ್ಲಿ ಎರಡು ಕಡೆಯೂ ಸಹಜವಾಗಿ ಕಂಡುಬರುತ್ತದೆ. ಕನ್ನಡ-ತೆಲುಗು ಎರಡು ಗಡಿನಾಡಿನ ಪರಿಸರದಲ್ಲಿ ಕನ್ನಡದಲ್ಲಿ ತೆಲುಗು-ತೆಲುಗಿನಲ್ಲಿ ಕನ್ನಡದ ನುಡಿಗಳು ಸೇರಿ ಹೋಗುತ್ತವೆ.

ಗಡಿನಾಡ ಕೋಲು ಪದಗಳು ವಸ್ತುವೈವಿಧ್ಯತೆಯಲ್ಲಿ ಸಮಾನಾಂಶಗಳು ಹೊಂದಿರುವುದರೊಂದಿಗೆ ಭಾಷೆಯಲ್ಲಿ ಕೂಡ ಕನ್ನಡ-ತೆಲುಗು ಎರಡೂ ಭಾಷೆಯ ಹಾಡುಗಳು ಕಂಡು ಬರುತ್ತವೆ. ದ್ವಿಭಾಷಿಕತೆಯನ್ನು ಒಳಗೊಂಡಿರುವ ಅಂದರೆ ನುಡಿಬೆರಕೆಯಾಗಿರುವ ಕೋಲುಪದಗಳು ಗಡಿ ಪ್ರಾಂತ ಪರಿಸರದಲ್ಲಿ ಕಂಡುಬರುತ್ತವೆ. ಆಂಧ್ರಪ್ರದೇಶದ ಗಡಿಪ್ರಾಂತಗಳಾದ ಕರ್ನೂಲಿನ, ಆಲೂರು, ಹೊಳಗುಂದ, ಮಾರ್ಲಮಡಿಕಿ, ಗುಡಿಬಂಡೆ, ನಲ್ಲಬಂಡ ಮತ್ತು ಅನಂತಪುರಂ, ರಾಯದುರ್ಗ, ಕಲ್ಯಾಣದುರ್ಗ, ನಾಗಲಾಪುರ, ಗೊಲ್ಲಹಳ್ಳಿ, ಹೊಸೂರು ಮುಂತಾದ ಕಡೆ ಕೋಲುಪದಗಳ ಸಂಗ್ರಹ ಮಾಡಲಾಯಿತು. ಈ ಪ್ರಾಂತಗಳ ಜನರ ಮಾತೃಭಾಷೆ ತೆಲುಗು. ಆದರೂ ತೆಲುಗನ್ನು ಎಷ್ಟು ಪ್ರಮಾಣದಲ್ಲಿ ಮಾತನಾಡುತ್ತಾರೋ ಅಷ್ಟೇ ಪ್ರಮಾಣದಲ್ಲಿ ಕನ್ನಡವನ್ನು ಸಹ ಮಾತನಾಡುವುದು ಕಂಡುಬರುತ್ತದೆ. ೧೯೫೬ರಲ್ಲಿ ಭಾಷಾವಾರು ರಾಜ್ಯ ವಿಂಗಡಣೆಗೂ ಮೊದಲು ಈ ಪ್ರಾಂತಗಳು ಕರ್ನಾಟಕದ ಪ್ರಾಂತಗಳಾಗಿದ್ದವು ಎಂಬುದನ್ನು ಅವರು ಮಾತಾಡುವ ಕನ್ನಡದಿಂದಲೇ ತಿಳಿಯಬಹುದು. ಹಾಗೆಯೇ ಕರ್ನಾಟಕಾಂಧ್ರ ಗಡಿಭಾಗಗಳಲ್ಲಿ ಬೇಡರು, ಮಾದಿಗರು, ಗೊಲ್ಲರು, ವೈಶ್ಯರು, ಬೋವಿಗಳು, ಕುರುಬರು ಮತ್ತು ಕೊರಚರು ಮುಂತಾದ ಸಮುದಾಯಗಳು ನೆಲೆಸಿದ್ದಾರೆ. ಈ ಸಮುದಾಯದವರಲ್ಲಿ ಕನ್ನಡ-ತೆಲುಗು ಎರಡು ಭಾಷೆಗಳನ್ನು ಮಾತಾಡುವವರು ಕಾಣಸಿಗುತ್ತಾರೆ ಹಾಗೂ ಕೋಲಾಟವನ್ನು ಎರಡೂ ಭಾಷೆಗಳಲ್ಲಿ ಪದಗಳನ್ನು ಹಾಡುತ್ತಾ ಪ್ರದರ್ಶನ ಮಾಡುವುದಿದೆ.

ಕರ್ನಾಟಕಾಂಧ್ರ ಗಡಿಭಾಗದಲ್ಲಿ ಬೇಡರು ಅಥವಾ ನಾಯಕರು, ಮಾದಿಗರು, ಗೊಲ್ಲರು, ಕೊರಚರು ಕೋಲುಪದಗಳನ್ನು ಹಾಡುತ್ತಾರೆ. ಮಾದಿಗರು, ಬೇಡರು ಮತ್ತು ಊರುಗೊಲ್ಲರು ಕನ್ನಡ-ತೆಲುಗು ಎರಡೂ ಭಾಷೆಯ ಕೋಲುಪದಗಳನ್ನು ಹಾಡುವುದು ಕಂಡುಬರುತ್ತದೆ. ಹಾಗೆಯೇ ಇವರಾಡುವ ಪದಗಳಲ್ಲಿ ನುಡಿಬೆರಕೆ ಮತ್ತು ನುಡಿಜಿಗಿತಗಳು ಸರ್ವೇಸಾಮಾನ್ಯವಾಗಿ ಕಾಣಸಿಗುತ್ತವೆ.

ಆಂಧ್ರಪ್ರದೇಶ ಗಡಿ ಪ್ರಾಂತ ಪರಿಸರದಲ್ಲಿ ಸಂಗ್ರಹಿಸಿದ ಕನ್ನಡ ಕೋಲುಪದದಲ್ಲಿ ತೆಲುಗಿನ ನುಡಿಗಳು ನುಸುಳಿ ನುಡಿಬೆರಕೆ ಆಗಿದೆ. ಹಾಗೆಯೇ ಕನ್ನಡ-ತೆಲುಗು ಎರಡೂ ಭಾಷೆಯ ಸಮ್ಮಿಶ್ರದಿಂದ ಹೊಸತೊಂದು ನುಡಿಯ ಹುಟ್ಟಿಗೂ ಕೋಲುಪದಗಳು ಕಾರಣೀಭೂತವಾಗಿವೆ.

### ೬.೨.೩. ಕನ್ನಡ ಕೋಲುಪದಗಳಲ್ಲಿ ತೆಲುಗು ನುಡಿಬೆರಕೆ

ಸಣ್ಣಾಕಿ ಇರಲಿಕ್ಕೆ ಮಾಡಿಕೊಟ್ಟರವ್ವ ದೂರಲ ದೇಶಕ್ಕೆ
ಸಣ್ಣಾಕಿ ಇರಲಿಕ್ಕೆ ಮಾಡಿಕೊಟ್ಟಿರುವ ದೂರಲ ದೇಶಕ್ಕೆ
ಮದುವೆ ಆಗಿದ್ದು ಜನರು ಉಂಡಿದ್ದು ಗೊತ್ತಿಲ್ಲೊ ಎನಗೆ ||ಪ||

ಸೋಮವಾರ ಸಂತೆ ಮಾವ ಬರುತಾನವ್ವ ಸೊಸೆಯನ ಕರೆಯದುಕೆ
ಸೋಮವಾರ ಸಂತೆ ಮನೆಯವಳವರು ತಂದರು ಸೀರೆಯನಾ
ನೆನಕ್ಕಿ ನೆಲಗಡ್ಲೆ ಎಳ್ಳು ಕರ್ಜಿಕಾಯಿ ಮಾಡರೆ ಮನಿವೊಳಗೆ ||೨||
ನೆನಕ್ಕಿ ನೆಲಗಡ್ಲೆ ಎಳ್ಳು ಕರ್ಜಿಕಾಯಿ ಮಾಡರೆ ಮನಿವೊಳಗೆ ||೨||

ಅಂಗನೂಲು ಒಡಲಾಕಿಟ್ಟು ಮಾಡ್ಯರು ಅವರು ಪ್ರಯಣ
ಹೇಳಿ ಬರುತಿನಂತ ಕೇಳಿ ಹೊಂಟಳವ್ವಾ ಗೆಳೆಯನ ಒಣ್ಯಾಕೆ ||೨||
ಗೆಳೆಯನ ಮನೆ ಮುಂದು ಹಠ ಮಾಡಿ ಬಾಳ ಹೊತ್ತು ನಿಂತಳಲ್ಲಿ ||೨||
ಮೂರು ದಿವಸದೊಳಗೆ ಬರುತೀನಿ ನಾರಿ ಯಸನವು ಯಾತಕ್ಕೆ ||೨||

ಗಂಟೆ ಜೋಳಿಗೆ ಸಿಗರೇಷಮುಲು ವಿಡಿದನು ಬಗಲಾಗೆ ||೨||
ಆ ಮನೆ ಈ ಮನೆ ಭಿಕ್ಷೆ ಬೇಡುತಾ ಹೊಂಟನು ಗತಿ ಮನೆಗೆ ||೨||
ಧಾನ್ಯವು ತಾಗಂಡು ನೀಡಲಿಕ್ಕೆ ಬಂದು ಹಿಡಿ ಹಿಡಿದ್ರೆ ಅವ್ನು ಖೂನ ||೨||
ಇದು ಎಂಥಾ ಚೇಳು ಏ ಹೆಚ್ಚವ್ವ ಹೊಟ್ಟ್ಯಾಗೆ ಉರುಪ ||೨||

ಚೇಳು ಕಡಿಯಿತೆಂದು ನೆವನಾ ಮಾಡಿ ಮಲಗ್ಯಾಳೆ ಕೋಣೊಳಗೆ
ಹೇ ಇದು ಎಂಥಾ ಚೇಳು ಏ ಹೆಚ್ಚವ್ವ ಹೊಟ್ಯಾಗೆ ಉರುಪ
ನಮ್ಮೂರು ಭಾವ ಶಾಣೆ ಭಾವ ಬಂದನಾ ಮಠದಾಗೆ
ಸೊಸೆ ಮಾತು ಕೇಳಿ ಬರು ಹೊಂಟರವ್ವ ಭಾವನ ಮಠದಾಕೆ
ಕೈಯ್ಯನಿಡಿದು ನೋಡ್ತನೆ ಭಾವ ತಿಳಕೋ ಮನದಾಕೆ ||೨||

ನಾಲ್ಕು ಬಾಕಿಲಿ ಗಟ್ಟಿಗಿ ಹಾಕುರವ್ವಾ ಗಾಳಿಯು ಬರದಂತೆ
ಆರು ಗವುಂಚುಲಿ ಗಟ್ಟಿಗ ಮುಚ್ಚಿರವ್ವ ಗಾಳಿಯು ತೂರದಂತೆ
ಒಂದೇ ಗಳಿಗೆಗೆ ಗೆಳೆಯ ಗೆಳೆತನ ತೀರಿತು ಮೋಹವು.

(ವಕ್ತೃ: ಗಾದಿಲಂಗಪ್ಪ, ಮಾರ್ಲಮಡಿಕಿ, ಆಲೂರು(ತಾ))

ಈ ಹಾಡಿನಲ್ಲಿ ಬರುವ 'ನಾಲ್ಕು ಬಾಕಿಲಿ ಗಟ್ಟಿಗಿ ಹಾಕುರವ್ವ ಗಾಳಿಯು ಬರದಂತೆ' ಎನ್ನುವಂತಹ ಸಾಲಿನಲ್ಲಿ 'ಬಾಕಿಲಿ' ಎನ್ನುವ ಪದ ತೆಲುಗಿನ 'ವಾಕಿಲಿ' ಪದದಿಂದ ಪ್ರಭಾವಿಸಲ್ಪಟ್ಟಿ ರುವುದನ್ನು ಕಾಣಬಹುದು. ಕರ್ನೂಲು ಜಿಲ್ಲೆಯ ಆಲೂರು, ಹೊಳಗುಂದ, ಮಾರ್ಲಮಡಿಕಿ ಈ ಗಡಿ ಪ್ರಾಂತಗಳ ಜನರು ಕನ್ನಡ-ತೆಲುಗು ಎರಡೂ ಭಾಷೆಗಳನ್ನು ಸಮಾನವಾಗಿ ಬಳಸುವುದರಿಂದ, ಅವರಾಡುವ ಮಾತಿನ ಧಾಟಿಯಲ್ಲಿಯೇ ಕೋಲಾಟದ ಪದಗಳಲ್ಲಿಯೂ ನುಡಿಬೆರಕೆಗಳು ಆಗುವುದು

ಸಹಜ. ಈ ಕೋಲು ಪದದಲ್ಲಿ 'ಬಾಕಿಲಿ' ಪದಕ್ಕೆ ಬದಲಾಗಿ ಶಿಷ್ಟ ಕನ್ನಡದ ಬಾಗಿಲು ಎಂದಾಗಬೇಕಿತ್ತು. ಬದಲಾಗಿ ಬಾಕಿಲಿ ಎಂದಾಗಿದೆ. ಇಲ್ಲಿ ಬಾಕಿಲಿಯಲ್ಲಿ ತೆಲುಗಿನ 'ವ' ಕಾರ ಲೋಪವಾಗಿ ತೆಲುಗಿನ 'ಕಿಲಿ'ಯ ಜೊತೆ ಕನ್ನಡದ 'ಬ' ಕಾರದ ಪ್ರಯೋಗ ನಡೆದಿದೆ. ಹಾಗಾಗಿ 'ಬಾಗಿಲು' ಬದಲಾಗಿ 'ಬಾಕಿಲಿ' ಎಂದಾಗಿದೆ.

ಕನ್ನಡದ ಬಾಗಿಲು, ತೆಲುಗಿನ ಬಾಕಿಲಿ ಎರಡು ಭಾಷೆಗಳನ್ನು ಬಳಸುವ ಜನರು ದ್ವಿಭಾಷಿಕರು ಮಾತಾಡುವಾಗ ಅಥವಾ ಕೋಲುಪದಗಳನ್ನು ಹಾಡುವಾಗ ಅಥವಾ ಬೇರೆ ಪದಗಳನ್ನು ಹಾಡುವಾಗ ಅರಿವಿಗೆ ಬಂದೋ ಅಥವಾ ಅರಿವಿಗೆ ಬಾರದೆಯೇ ಮಾಡಿರುವ ಹೊಸ ಪ್ರಯೋಗವೇ ಈ 'ಬಾಕಿಲಿ' ಪದವೆಂದು ಹೇಳಬಹುದು. ತೆಲುಗಿನ 'ವ' ಕಾರ ಲೋಪವಾಗಿ ಕನ್ನಡದ 'ಬ' ಕಾರವು ಬಂದು ಸೇರಿರುವುದನ್ನು ಗಮನಿಸಬಹುದು. ಹಾಗೆಯೇ ಇದೇ ಕೋಲುಪದದಲ್ಲಿ ಮತ್ತೊಂದು ತೆಲುಗಿನ ನುಡಿ ನುಸುಳಿರುವುದನ್ನು ಕಾಣಬಹುದು. ಗಂಟೆ ಜೋಳಿಗೆ ಸಿಗರೇಷಮುಲು ವಿಡಿದನು ಬಗಲಾಗೆ ಈ ಸಾಲಿನಲ್ಲಿ 'ಸಿಗರೇಷಮುಲು' ಎನ್ನುವಂಥ ಪದ ತೆಲುಗಿನ ಪದವಾಗಿದ್ದು ಇದು ವೇಷ ಮರೆಸಿ ತಿರುಗಾಡುವ ಅಥವಾ ಸುತ್ತಾಡುವ ವ್ಯಕ್ತಿಗಳಿಗೆ ಈ ರೀತಿ ಕರೆಯುವುದು ರೂಢಿಯಲ್ಲಿದೆ.

### ೬.೨.೪. ತೆಲುಗು ಕೋಲುಪದಗಳಲ್ಲಿ ಕನ್ನಡ ನುಡಿಬೆರಕೆ

ರೆಡುಮೆ ಚೂಸ್ತಾಮು ರಾ ರಾ ಬೊಬ್ಬಾಲ ನಾಗಿರೆಡ್ಡಿ
ಮಾಡಿಮೀದ ಮಾಡಿಕಟ್ಟಿ ಏಡುಮಾಳ ಇಲ್ಲುಕಟ್ಟಿ
ಯಾಟಿಕಂಟಿ ಆಟಿಕೆ ಪೇರಾಯ್ಯ ನಾಗಿರೆಡ್ಡಿ
ಸುತ್ತಮುತ್ತಾ ಪೆಲ್ಲಿಲಿಕಂಟೆ ದೇವುಡಂಟಿ ಭೀಮಲಿಂಗಡು
ಸಂಖಲೋನ ಸರಾಯಿಸೀಸ ಜೋಬಿಲೋನಾ ರಿವಾಲ್ವಾರು |೨|

ನೋಟಿಲೋನ ಸೀಕರೇಟು ಸೇತುಲೋನ ಅಗ್ಗಿಪಟ್ಟಿ
ಮೇಸ್ತ್ರೇಸ್ ಕಾರುಲೋನ ಸೀಕರೇಟು ತಾಗಿನಾಡು
ರೋಸಮೈನ ಚಚ್ಚಿನಾಡು ಮೀಸಮೈನ ದೂಬಿನಾಡು
ಮೀಸಮೈನ ದೂಬಿನಾಡು ನಿಂಬೆಕಾಯಿ ನಿಲುಪಿನಾಡು

ರೆಡುಮೆ ಸೂಸ್ತಾಮು ರಾ ರಾ ಬೊಬ್ಬಲ ನಾಗರೆಡ್ಡಿ
ನಾಗರೆಡ್ಡಿ ಎಲ್ಲಿ ಪೋಯೆ ಮಿದ್ದಲನ್ನಿ ಕಾಲಿಪೋಯೆ
ರೆಡುಮೆ ಸೂಸ್ತಾಮು ರಾ ರಾ ಬೊಬ್ಬಲ ನಾಗರೆಡ್ಡಿ.

(ವಕ್ತೃ: ಶಿವಣ್ಣ, ಹೊಳಗುಂದ, ಆಲೂರು ತಾಲ್ಲೂಕು, ಕರ್ನೂಲ್ ಜಿಲ್ಲೆ)

ಈ ತೆಲುಗು ಕೋಲಾಟ ಪದವು ತೆಲುಗು ನಾಡಿನಲ್ಲಿ ಸಂಗ್ರಹಿಸಿದ್ದರೂ ಸಹ ಕನ್ನಡದ ಪದವಾದ ಅಥವಾ ನುಡಿಯಾದ ನಿಂಬೆಕಾಯಿ ಎನ್ನುವ ನುಡಿಯು ನುಸುಳಿ ನುಡಿಬೆರಕೆ ಯಾಗಿರುವುದು ಕಂಡುಬರುತ್ತದೆ. ಈ ಗೀತೆ ತೆಲುಗು ಪದವಾದ್ದರಿಂದ ನಿಂಬೆಕಾಯಿ ಪದಕ್ಕೆ

ಬದಲಾಗಿ ತೆಲುಗು ಭಾಷೆಯದೇ ಆದ ನಿಮ್ಮಕಾಯಿ ಎಂದಾಗಬೇಕಿತ್ತು. ಕನ್ನಡ ಭಾಷೆಯ ಪ್ರಭಾವದಿಂದ ತೆಲುಗು ಹಾಡಿನಲ್ಲಿ ಕನ್ನಡ ನುಡಿ, ನಿಂಬೆಕಾಯಿ ಸೇರಿ ನುಡಿಬೆರಕೆ ಆಗಿರುವುದಿದೆ. ತೆಲುಗಿನ 'ಮ' ಕಾರವನ್ನು ಬಿಟ್ಟು ಕನ್ನಡದ 'ಬ' ಕಾರವು ಆಗಮವಾಗಿರುವುದು ಕಂಡುಬರುತ್ತದೆ. ಗಡಿಪ್ರಾಂತ ಪರಿಸರದಲ್ಲಿ ತೆಲುಗು-ಕನ್ನಡ, ಕನ್ನಡ-ತೆಲುಗು ಎರಡೂ ಭಾಷಿಕ ಸಂವಹನಕಾರರು ನೆಲೆಸಿದ್ದಾರೆ. ಹಾಗಾಗಿ ಅವರು ಹಾಡುವ ಕೋಲುಪದಗಳಲ್ಲಿ ಕನ್ನಡ-ತೆಲುಗಿನ ನುಡಿಗಳು ಸೇರಿ ನುಡಿಬೆರಕೆಯಾಗುತ್ತದೆ.

ಗಡಿಭಾಗದ ಕೋಲಾಟ ಪದಗಳಲ್ಲಿ ನುಡಿಬೆರಕೆ ಮತ್ತು ನುಡಿಜಿಗಿತಗಳು ಸಹಜವಾಗಿ ನಡೆಯುತ್ತವೆ. ಆಂಧ್ರಪ್ರದೇಶದ ಕರ್ನೂಲು, ಆಲೂರು, ಹೊಳಗುಂದ ಗಡಿ ಪ್ರಾಂತಗಳ ಸುತ್ತಮುತ್ತಲ ಪ್ರಾಂತಗಳಲ್ಲಿ ಕನ್ನಡ ಕೋಲುಪದ (ಹಾಡು) ಮುಗಿದ ಮರುಕ್ಷಣವೇ ತೆಲುಗು ಪದವನ್ನು ಹಾಡುತ್ತ ಕೋಲಾಟ ಪ್ರದರ್ಶನ ಮಾಡುವುದಿದೆ. ಒಂದು ಭಾಷೆಯ ಹಾಡು ಮುಗಿದ ತಕ್ಷಣ ಮತ್ತೊಂದು ಭಾಷೆಯ ಹಾಡನ್ನು ಹಾಡುವುದು ಆಂಧ್ರಪ್ರದೇಶದ ಗಡಿ ಪ್ರದೇಶಗಳಲ್ಲಿ ಸಹಜವಾಗಿ ಕಂಡುಬರುತ್ತದೆ. ಕನ್ನಡದ ಹಾಡು ಮುಗಿದ ತಕ್ಷಣ ತೆಲುಗು ಅಥವಾ ತೆಲುಗು ಹಾಡು ಮುಗಿದ ತಕ್ಷಣ ಕನ್ನಡ ಹಾಡು ಬರುವುದನ್ನು ಗಮನಿಸಿದಾಗ ಇದು ನುಡಿ ಜಿಗಿತ ಮಾದರಿಯಲ್ಲಿ ಬರುವಂತೆ ಪದಗಳ ಜಿಗಿತವಿರಬಹುದು ಎಂದೆನಿಸುತ್ತದೆ. ಕನ್ನಡದ ಕೋಲುಪದ ಮುಗಿದ ತಕ್ಷಣ ತೆಲುಗು ಕೋಲುಪದ ಆರಂಭವಾಗುವುದು.

**ಕನ್ನಡ ಕೋಲುಪದ**

ಎರೆಯನ ಹೊಲದಲಿ ಎಳೆಯ ಸೌತೆಕಾಯಿ
ಹರಿ ಅಂದರ್ಯಾಗ ಹರಿಯಲಿ ಅಣ್ಣಯ್ಯ
ಹರಿ ಅಂದರ್ಯಾಗ ಹರಿಯಲಿ
ಹರಿ ಅಂದರ್ಯಾಗ ಹರಿಯಲಿ ಅಣ್ಣಯ್ಯ
ಮರಿ ಅಂದರ್ಯಾಗ ಮರಿಯಾಲಿ ||೨||

ಕರಿಯ ಗಡ್ಡೆಯ ಮೇಲೆ ಬರಿಯ ನವಣೆಯ
ಬಿತ್ತಿ ಹಾಲು ತುಂಬುತಲೆ ಗಿಳಿಮುಟ್ಟಿ
ಗಿಳಿರಾಯ ಹಾಲು ತುಂಬತಲೆ ಗಿಳಿಮುಟ್ಟಿ
ಹಾಲು ತುಂಬುತಲೆ ಗಿಳಿಮುಟ್ಟಿ ಗಿಳಿರಾಯ
ಪ್ರಾಯ ತುಂಬುತಲೆ ಶಿವ ಹೊಯ್ದಾ ||೨||

(ವಕ್ತೃ: ಗಾದಲಿಂಗಪ್ಪ, ಮಾರ್ಲಮಡಿಕಿ, ಆಲೂರು ತಾಲ್ಲೂಕು, ಕರ್ನೂಲ್ ಜಿಲ್ಲೆ)

ಕನ್ನಡ ಕೋಲುಪದ ಮುಗಿದ ತಕ್ಷಣ ನಿಲುಗಡೆ ಇಲ್ಲದೆ ತೆಲುಗಿನ ಪದವನ್ನು ಹಾಡುತ್ತಾ ಕೋಲಾಟ ಪ್ರದರ್ಶನವನ್ನು ಮುಂದುವರೆಸುವುದು ಕಂಡುಬರುತ್ತದೆ. ಕನ್ನಡದ ಹಾಡು ಮುಗಿದ ತಕ್ಷಣ ಹಾಡುವ ತೆಲುಗು ಕೋಲುಪದ.

ನಲ್ಲ ಬಂಡ ಶೆರುವುಲೋನ ನಕ್ಕ
ಉನ್ನದೆ ಗುರುಡ ನಕ್ಕ ಉನ್ನದೆ
ನಕ್ಕ ನೆತ್ತಿ ಮೀದ ಬಗಲ ಸುಕ್ಕ ಉನ್ನದೆ
ಆಕು ಲೇಕ ಮಾನುಮೀದ
ಕಾಕಿ ಉನ್ನದೆ ಗುರುಡ ಕಾಕಿ ಉನ್ನದೆ
ಕಾಕಿ ಕಡುಪುಲೋನ ಮಂಚಿ ಲೋಕಂ ಉನ್ನದೆ ||೨||

ಎಕ್ಕಲೇಕ ಗುಂಡು ಮೀದ ಕೋತಿ
ಉನ್ನದೆ ಗುರುಡ ಕೋತಿ ಉನ್ನದೆ
ಕೋತಿ ಕಡುಪುಲೋನ ಮಂಚಿ ವಿದ್ಯೆ ಉನ್ನದೆ ||೨||

ದಾಳಿದೊಡ ಮಠುಮುಲೋನ ಹದ್ದುಲು
ಉನ್ನವೆ ಗುರುಡ ಹದ್ದುಲು ಉನ್ನವೆ
ಹದ್ದು ಕಡುಪುಲೋನ ಪೆದ್ದ ಬುದ್ದಿಲು ಉನ್ನವೆ ||೨||

(ವಕ್ತೃ: ಮಲ್ಲಯ್ಯ ಹೊಳಗುಂದ, ಆಲೂರು ತಾಲ್ಲೂಕು, ಕರ್ನೂಲ್ ಜಿಲ್ಲೆ)

ಆಂಧ್ರಪ್ರದೇಶದ ಗಡಿ ಪ್ರಾಂತ ಪರಿಸರದಲ್ಲಿ ಕನ್ನಡದ ಕೋಲುಪದ ಮುಗಿದ ತಕ್ಷಣ ತೆಲುಗು ಪದಗಳನ್ನು ಹಾಡುವುದು ಕಂಡುಬರುತ್ತದೆ. ಹಾಗೆಯೇ ಗಡಿ ಪರಿಸರವು ದ್ವಿಭಾಷಿಕ ನೆಲೆಯಾಗಿರುವುದರಿಂದ ಹಾಗೂ ಅವರ ಮಾತೃಭಾಷೆ ತೆಲುಗು ಆಗಿರುವುದರಿಂದ ಕನ್ನಡ ಗೀತೆಯ ನಂತರ ತೆಲುಗು ಗೀತೆ ಹಾಡುವುದಿದೆ ಹಾಗೂ ಇಲ್ಲಿ ನೆಲೆಸಿರುವ ಜನರು ಕನ್ನಡ-ತೆಲುಗು ಎರಡು ಭಾಷೆಗಳನ್ನು ಬಲ್ಲವರಾದ್ದರಿಂದ ಕನ್ನಡದ ಹಾಡುಗಳ ನಂತರ ತೆಲುಗು ಹಾಡುಗಳನ್ನು ಹಾಡುವುದು ಕಂಡುಬರುತ್ತದೆ.

ನಲ್ಲ ಬಂಡ ಶೆರುವುಲೋನ ನಕ್ಕ
ಉನ್ನದೆ ಗುರುಡು ನಕ್ಕ ಉನ್ನದೆ
ನಕ್ಕ ನೆತ್ತಿ ಮೀದ ಬಗಲ ಸುಕ್ಕ ಉನ್ನದೆ ||

ಈ ತೆಲುಗು ಕೋಲುಪದವು ಕೋಲಾಟದಲ್ಲಿ 'ತಿಪರಿ' ಎನ್ನುವ ಪ್ರಕಾರಕ್ಕೆ ಬರುತ್ತದೆ. ಈ ಪ್ರಕಾರವು ಇತರೆ ಕೋಲಾಟದ ವಿಧಗಳಾದ ಜೋಡುಗಡ್ಡಿ, ತಾಳಗಡ್ಡಿ, ಒಂಟಿಗಡ್ಡಿ ಇವುಗಳ ನಂತರ ಆಡುವ ಪ್ರಕಾರ ತಿಪರಿ. ತಿಪರಿ ಪ್ರಕಾರಕ್ಕೆ ಸೇರಿದ ಹಾಡುಗಳನ್ನು ಪುನಃ ಹಾಡಿಸುವುದು ಮತ್ತು ಹೊಸದಾಗಿ ಪದಗಳನ್ನು ಹೊಸೆದು ಅಥವಾ ರಚಿಸಿ ಹಾಡುವುದು ಇದೆ.

ಕೋಲುಪದಗಳಲ್ಲಿ ಕನ್ನಡ ಹಾಡು ಮುಗಿದ ತಕ್ಷಣ ತೆಲುಗು ಅಥವಾ ತೆಲುಗು ಪದ ಮುಗಿದ ನಂತರ ಕನ್ನಡದ ಹಾಡುಗಳು ಗಡಿ ಪರಿಸರದಲ್ಲಿ ಸಹಜವಾಗಿ ಕಾಣಸಿಗುತ್ತದೆ. ಈ ರೀತಿ ಕೋಲಾಟದಲ್ಲಿ ಒಂದೇ ಹಾಡಿಗೆ ನಿಲುಗಡೆ ನೀಡದೆ ಎರಡು ಅಥವಾ ಮೂರು ಹಾಡುಗಳವರೆಗೂ ಕೋಲು ಹುಯ್ಯುವುದನ್ನು ಕಾಯ್ದುಕೊಳ್ಳುವುದು ಕಾಣಬರುತ್ತದೆ. ಹಾಗೆಯೇ

ನಿರಂತರತೆಯನ್ನು ಒಳಗೊಂಡಿರುತ್ತದೆ. ಈ ರೀತಿ ಎರಡು - ಮೂರು ಹಾಡುಗಳವರೆಗೂ ನಿಲ್ಲಿಸದೆ ಕೋಲು ಹುಯ್ಯುವುದರಿಂದ ಕೋಲುಕಲಾವಿದರ ದೈಹಿಕ ಕ್ಷಮತೆ ಆರೋಗ್ಯವನ್ನು ಸಮತೋಲನದಿಂದಿರಿಸಲು ಈ ರೀತಿ ಎರಡು - ಮೂರು ಹಾಡುಗಳವರೆಗೂ ಪ್ರದರ್ಶನ ಮಾಡುವ ಮುಖಾಂತರ ನಿರಂತರತೆಯನ್ನು ತಂದುಕೊಂಡಿರಬೇಕು ಅಥವಾ ಉತ್ಸಾಹ ಹುಮ್ಮಸ್ಸು, ಆಸಕ್ತಿಗಳನ್ನು ಇಮ್ಮಡಿಗೊಳಿಸಿಕೊಳ್ಳಲು ಕೋಲಾಟದಲ್ಲಿ ಎರಡು - ಮೂರು ಹಾಡುಗಳವರೆಗೂ ನಿಲುಗಡೆ ಇಲ್ಲದೆ ಕೋಲು ಹುಯ್ಯುವುದನ್ನು ರೂಢಿಸಿಕೊಂಡು ಬಂದಿರುವುದನ್ನು ನೋಡ ಬಹುದಾಗಿದೆ. ತೆಲುಗಿನ ಮತ್ತೊಂದು ಕೋಲುಪದದಲ್ಲಿ ಕನ್ನಡದ ನುಡಿ ಬೆರೆತು ನುಡಿಬೆರಕೆ ಆಗಿರುವುದು ಇದೆ. ಈ ಹಾಡು ತೆಲುಗು ನಾಡಿನಲ್ಲಿ ಸಿಕ್ಕಿದರೂ ಕನ್ನಡದ ಪ್ರಭಾವ ಆಗಿರುವುದು ಕಂಡುಬರುತ್ತದೆ. ತೆಲುಗು ಗಡಿ ಪ್ರಾಂತವು ಕನ್ನಡ ಭಾಷಿಕರನ್ನು ಹೊಂದಿರುವುದರಿಂದ ಈ ತರಹದ ಉದಾಹರಣೆಗಳು ಸಹಜವಾಗಿ ನಡೆಯುತ್ತವೆ.

### ತೆಲುಗು ಗೀತೆಯಲ್ಲಿ ಕನ್ನಡ ನುಡಿ ಪ್ರವೇಶ

ಭಾಮ ನನ್ನು ಇಡನಾಡಿ
ಪೋಮಾ ನನ್ನು ಇಡನಾಡಿ
ಪೋತಾವು ಮೊಗನಿಂಟ ಎನ್ನಾಳ್ಳು
ಪಗಲಿಂಟಿತಿವೀ ಓ ಚಲುವೆ
ಪಾಪಿಷ್ಟು ಬ್ರಾಹ್ಮಣನೇ ಪಾಪಿಷ್ಟು ಬ್ರಾಹ್ಮಣನೇ
ಪಂಚಾಂಗು ನಡಿವೀತೇ ಪದ್ದುನ್ನೆ ಪ್ರಯಾಣಮ
ಅಯ್ಯನೇ ಓ ಚಲುವೆ.

(ವಕ್ತೃ: ಸಣ್ಣಮಲ್ಲಯ್ಯ, ಬಲ್ಲೂರು, ಆಲೂರು ತಾಲ್ಲೂಕು, ಕರ್ನೂಲ್ ಜಿಲ್ಲೆ)

ಈ ಗೀತೆಯು ತೆಲುಗು ಕೋಲುಪದವಾಗಿದ್ದು, ತೆಲುಗಿನ ಪದದೊಳಗೆ ಕನ್ನಡ ನುಡಿ ಬೆರಕೆಯಾಗಿರುವುದು ಕಂಡುಬರುತ್ತದೆ. ತೆಲುಗು ನಾಡಿನ ಗಡಿಪ್ರಾಂತ ಪರಿಸರದ ತೆಲುಗು ಕೋಲುಪದಗಳಲ್ಲಿ ಕನ್ನಡ ನುಡಿಗಳು ಬೆರಕೆಯಾಗಿರುವುದು ಕಂಡುಬರುತ್ತದೆ.

## ೬.೩. ಸಾಂಸ್ಕೃತಿಕ ಅನನ್ಯತೆ

ಮನುಷ್ಯನ ಆಚಾರ-ವಿಚಾರ, ರೂಢಿ-ಸಂಪ್ರದಾಯ, ಉಡುಗೆ-ತೊಡುಗೆ, ಕಲೆ, ಧಾರ್ಮಿಕ ಆಚರಣೆ ಇತ್ಯಾದಿಗಳನ್ನು ಸಂಸ್ಕೃತಿ ಎಂದು ಕರೆಯಲಾಗುತ್ತದೆ. ಪ್ರತಿಯೊಂದು ಸಮುದಾಯವು, ಪ್ರತಿಯೊಂದು ಜಾತಿ, ಜನಾಂಗವೂ ಒಂದೊಂದು ಬಗೆಯ ವಿಶಿಷ್ಟವಾದ ತನ್ನದೇ ಸಂಸ್ಕೃತಿಯನ್ನು ರೂಢಿಸಿಕೊಂಡು ಬಂದಿರುತ್ತದೆ. ಜನ್ಮಜಾತವಾಗಿ ಬಾರದೆ ಮನುಷ್ಯ ತನ್ನ ಪರಿಸರದಿಂದ ಅನುಭವಿಸಿ ಕಲಿತುಕೊಳ್ಳುವ ಭಾಷೆ, ಆಚರಣೆ, ಧರ್ಮ, ಕಲೆ, ವಿಜ್ಞಾನ, ಆಡಳಿತ ನೀತಿ, ಮಾನವೀಯತೆ, ಕರುಣೆ ಇತ್ಯಾದಿ ಇವೆಲ್ಲವೂ ಸಂಸ್ಕೃತಿಯಲ್ಲಿ ಸೇರಿ ಹೋಗಿವೆ. ಹಾಗಾಗಿಯೇ ಸಂಸ್ಕೃತಿ ಎಂದರೆ ಜೀವನ ಅಥವಾ ಬದುಕು ಎಂದು ಹೇಳಬಹುದು. ಇಂತಹ ಜೀವನ

ವಿಧಾನಗಳು, ರೂಢಿ ಸಂಪ್ರದಾಯಗಳು, ಆಚರಣೆಗಳು, ಜಾನಪದ ಪ್ರದರ್ಶಕ ಕಲೆಗಳು. ಕರ್ನಾಟಕ-ಆಂಧ್ರ ಗಡಿ ಪರಿಸರದಲ್ಲಿ ಭಿನ್ನ ಸಂಸ್ಕೃತಿಗಳು ಒಂದೆಡೆ ಸೇರಿ ಏಕಸಂಸ್ಕೃತಿಯಾಗಿರುವುದು ಗಡಿನಾಡಿನ ಜಾನಪದ ಕಲೆ ಮತ್ತು ಆಚರಣೆಗಳಲ್ಲಿ ಕಾಣಸಿಗುತ್ತದೆ. ಗಡಿಪರಿಸರದ ಸಂಸ್ಕೃತಿಯನ್ನು ಗಮನಿಸಿದರೆ ಬಹುಶಃ ರಾಜಕೀಯವಾಗಿ ಗಡಿ ಸಮಸ್ಯೆ ಒಂದನ್ನು ಹೊರತುಪಡಿಸಿದರೆ ಸಾಂಸ್ಕೃತಿಕವಾಗಿ, ಸಾಮುದಾಯಿಕವಾಗಿ, ಭಾಷಿಕವಾಗಿ ಸಾಮಾನ್ಯವಾಗಿ ಸಮಾನವಾದ ಅಂಶಗಳು ಬಹುತೇಕ ಕಂಡುಬರುತ್ತವೆ.

ಕರ್ನಾಟಕ-ಆಂಧ್ರ ಗಡಿ ಪರಿಸರದ ಕನ್ನಡ -ತೆಲುಗು ಸಂಸ್ಕೃತಿಗಳ ನಡುವಿನ ಬಾಂಧವ್ಯಕ್ಕೆ ಹಲವು ನೂರು ವರ್ಷಗಳ ಇತಿಹಾಸವಿದೆ. ಕನ್ನಡ -ತೆಲುಗು ನಾಡಿನ ಗಡಿ ಪರಿಸರದ ಜನರು ಕೊನೆಯ ಪಕ್ಷ ಎರಡು ಭಾಷೆ ಮತ್ತು ಎರಡು ಸಂಸ್ಕೃತಿಗಳನ್ನು ಒಳಗೊಂಡಿರುತ್ತಾರೆ. ಸಾಂಸ್ಕೃತಿಕವಾಗಿ ಗಡಿ ಪ್ರಾಂತಗಳಲ್ಲಿ ಎರಡಕ್ಕಿಂತ ಹೆಚ್ಚು ವಿನ್ಯಾಸಗಳು ನೆಲೆಸಿರುವುದು ಕಾಣಸಿಗುತ್ತದೆ. ಆಯಾಯ ಸಮುದಾಯಗಳ ಮಾತೃಭಾಷೆ ಮತ್ತು ಸಂಸ್ಕೃತಿಗಳ ಚಹರೆಗಳನ್ನು ಉಳಿಸಿಕೊಂಡು ನಾಡಿನ ಭಾಷೆ ಮತ್ತು ಬದುಕಿನಲ್ಲಿ ಒಂದಾಗುವ ಅನಿವಾರ್ಯತೆಯನ್ನು ಗಡಿಭಾಗದ ಜನರು ಅರಿತುಕೊಂಡಿರುತ್ತಾರೆ.

ಗಡಿ ಪರಿಸರದ ಜನರು ಆಡುವ ಜನಪದ ಆಟಗಳು ಮತ್ತು ಕಲೆಗಳಾದ ಸೋಬಾನೆ ಪದ, ಭಜನೆಪದ, ಬುರ‍್ರಕಥಾ, ದಾಸರಾಟ, ಬಯಲಾಟ ಮತ್ತು ಕೋಲಾಟ ಮುಂತಾದ ಕಲೆಗಳಿಂದ ದ್ವಿಭಾಷಾ ಸಂಸ್ಕೃತಿಯೊಂದು ತೆರೆದುಕೊಳ್ಳುತ್ತದೆ. ಕೋಲಾಟದ ಪದಗಳಲ್ಲಿ ಕರ್ನಾಟಕ -ಆಂಧ್ರ ಗಡಿ ಪರಿಸರದ ಪ್ರಾಂತಗಳಲ್ಲಿ ಒಂದು ಗಡಿ ಭಾಗದ ಸಂಸ್ಕೃತಿಯು ಮತ್ತೊಂದು ಗಡಿ ಭಾಗದ ಸಂಸ್ಕೃತಿಯ ಮೇಲೆ ಪ್ರಭಾವ ಬೀರಿರುವುದೇ ಅಲ್ಲದೆ ಎರಡು ಭಿನ್ನ ಸಂಸ್ಕೃತಿಗಳು ಸೇರಿ ಏಕ ಸಂಸ್ಕೃತಿಯಾಗುವುದರೊಂದಿಗೆ ಸಂಸ್ಕೃತಿಯಲ್ಲಿ ಅನನ್ಯತೆಯು ಗಡಿಭಾಗದ ಕೋಲು ಪದಗಳಲ್ಲಿ ಗೋಚರಿಸುತ್ತದೆ.

ವಿದ್ವಾಂಸರಾದ ಡಿ.ಎನ್. ಯೋಗೀಶ್ವರಪ್ಪ ಅವರು ಗಡಿನಾಡ ಜಾನಪದ ಸಂಸ್ಕೃತಿ ಕುರಿತು ವಿಚಾರ ಮಾಡುತ್ತ ಕರ್ನಾಟಕಾಂಧ್ರ ಗಡಿಭಾಗದ ಜನಪದ ದೈವಗಳನ್ನು ಪರಸ್ಪರ ಗಡಿ ಪ್ರಾಂತ ಜನರು ಹೇಗೆ ಪ್ರಭಾವಿಸಿಕೊಂಡು ಬಂದಿದ್ದಾರೆ ಎಂಬುದನ್ನು ಈ ರೀತಿಯಾಗಿ ನಿರೂಪಿಸಿದ್ದಾರೆ. "ಕರ್ನಾಟಕ -ಆಂಧ್ರ ಒಂದೇ ನಾಣ್ಯದ ಎರಡು ಮುಖಗಳು. ಈ ಎರಡೂ ಭಾಷಿಕರನ್ನು ಹತ್ತಿರಕ್ಕೆ ತಂದವರೆಂದರೆ ಆಂಧ್ರ-ಕರ್ನಾಟಕದ ಜಾನಪದ ದೇವತೆಗಳು. ಉದಾಹರಣೆಗೆ ಕರ್ನಾಟಕದ ಮಲ್ಲಯ್ಯ ಆಂಧ್ರದಲ್ಲಿ ಮಲ್ಲಿಕಾರ್ಜುನನಾದರೆ ಆಂಧ್ರಪ್ರದೇಶದ ವೆಂಕಟರಮಣ ಕರ್ನಾಟಕದ ತಿಮ್ಮಪ್ಪನಾಗಿದ್ದಾನೆ. ಆಂಧ್ರದ ಗಡಿಭಾಗದವರೆಗೆ ಕೊರಟಗೆರೆ ಬಳಿಯ ಗೊರವನಹಳ್ಳಿ ಲಕ್ಷ್ಮೀ ಮುಖ್ಯ ದೇವತೆಯಾದರೆ, ಕರ್ನಾಟಕದ ಗಡಿ ಭಾಗದವರೆಗೆ ಕದ್ರಿ ನರಸಿಂಹ ತಿರುಪತಿ ವೆಂಕಟರಮಣ ಮುಖ್ಯರಾಗುತ್ತಾರೆ. ಪ್ರತಿ ವರುಷವೂ ಇಲ್ಲಿಯ ಭಕ್ತರು ಅಲ್ಲಿಗೆ, ಅಲ್ಲಿಯ ಭಕ್ತರೂ ಇಲ್ಲಿಗೆ ಬರುವುದರಿಂದ ಸಹಜವಾಗಿ ಭಾಷೆಗಳ ಕೊಡುಕೊಳ್ಳುವಿಕೆ ನಡೆಯುತ್ತದೆ. ಇಲ್ಲಿ

ಆಡುವ ಭಾಷೆ ಮುಖ್ಯವಾಗುವುದಿಲ್ಲ. ಅದರ ಹಿಂದಿರುವ ಭಾವನೆಗಳು ಮುಖ್ಯವಾಗಿವೆ. ಧಾರ್ಮಿಕ ಸಂಬಂಧಗಳಿಂದ, ಸಾಂಸ್ಕೃತಿಕ ಸಂಬಂಧ, ಕೌಟುಂಬಿಕ ಸಂಬಂಧ ಕೂಡಾ ಬೆಳೆದು ಬಂದಿದೆ"(ಹನುಮಂತರಾಯಪ್ಪ.ಕೆ.; ೨೦೦೯; ಪುಟ ೨೧೦) ಎಂದಿದ್ದಾರೆ. ಅಂದರೆ ಕರ್ನಾಟಕ-ಆಂಧ್ರ ಗಡಿಭಾಗದಲ್ಲಿ ನೆಲೆಸಿರುವ ಜಾನಪದ ದೈವಗಳು ಎರಡೂ ರಾಜ್ಯಗಳ ಗಡಿ ಪರಿಸರದ ಜನರ ಆಚರಣೆ ಜಾನಪದ ಕಲೆಗಳಲ್ಲಿ ಒಂದೇ ರೀತಿಯ ಸಮಾನಾಂಶಗಳ ಜೊತೆಗೆ ಎರಡೂ ಭಿನ್ನ ಸಂಸ್ಕೃತಿಗಳು ಸೇರಿ ಒಂದೇ ಎಂಬಂತೆ ತೋರಿಬರುವುದರಿಂದ ಗಡಿಭಾಗದ ಜನಪದ ಕಲೆ ಮತ್ತು ಆಚರಣೆಗಳಲ್ಲಿ ಈ ರೀತಿಯ ಸಾಂಸ್ಕೃತಿಕ ಅನನ್ಯತೆಯು ಗೋಚರಿಸುತ್ತದೆ.

ಸುಮಾರು ಹತ್ತೊಂಬತ್ತನೇ ಶತಮಾನದಿಂದ ಆರಂಭವಾಗಿ ಇಂದಿನವರೆಗೂ ಸಾಂಸ್ಕೃತಿಕ ಅನನ್ಯತೆಯ ಅರ್ಥ, ಸ್ವರೂಪ, ಸಾಧ್ಯತೆಗಳನ್ನು ಕುರಿತಂತೆ ಅಧ್ಯಯನಗಳು ನಡೆದಿವೆ. ಅಲ್ಲೆಲ್ಲ ಸಾಂಸ್ಕೃತಿಕ ಅನನ್ಯತೆಯನ್ನು 'Cultural Identity' ಎನ್ನುವ ಪರಿಭಾಷೆಯೊಂದಿಗೆ ಗುರುತಿಸಿದ್ದಾರೆ. ಈ 'Cultural Identity' ಪರಿಭಾಷೆಗೆ ಕನ್ನಡದಲ್ಲಿ ಅನನ್ಯತೆ, ಪ್ರತ್ಯೇಕತೆ, ವಿಶಿಷ್ಟತೆ, ಅಭಿನ್ನತೆ, ಸ್ವಂತಿಕೆ, ಏಕರೂಪತೆ, ಸಮಾನತೆ ಇವೇ ಮೊದಲಾದ ಹೆಸರುಗಳಲ್ಲಿ ಅರ್ಥ ಕಲ್ಪಿಸಲಾಗಿದೆ (ಅಂಬಳಿಕೆ ಹಿರಿಯಣ್ಣ; ೧೯೯೨; ಪುಟ ೨). ಈ ಎಲ್ಲಾ ಪದಗಳಲ್ಲಿ ಅನನ್ಯತೆ ಎಂಬುದೇ ಸೂಕ್ತಪದ ಎಂಬುದಾಗಿ ಈವರೆಗಿನ ಅಧ್ಯಯನಗಳು ತೀರ್ಮಾನಿಸಿವೆ. ಸಾಂಸ್ಕೃತಿಕ ಅನನ್ಯತೆಯ ಸ್ವರೂಪದ ಕುರಿತಾಗಿ ವಿದ್ವಾಂಸರಾದ ಅಂಬಳಿಕೆ ಹಿರಿಯಣ್ಣ ಅವರು ಈ ರೀತಿಯಾಗಿ ನಿರೂಪಿಸಿರುವುದಿದೆ. "ಯಾವುದೋ ಒಂದು ಸಂಸ್ಕೃತಿ ಮತ್ತೊಂದರಿಂದ ಬೇರೆಯಾಗುವ ವಿಶಿಷ್ಟ ಅಂಶಗಳನ್ನು ದೃಢವಾಗಿ ಹೊಂದಿದ್ದು ತನ್ನ ಪ್ರತ್ಯೇಕ ಅಸ್ತಿತ್ವವನ್ನು ಪ್ರದರ್ಶಿಸಿದರೆ ಅದು ಸಮೂಹದ ಸಾಂಸ್ಕೃತಿಕ ಅನನ್ಯತೆ ಆಗುತ್ತದೆ. ತಮ್ಮನ್ನು ತಾವು ಗುರುತಿಸಿಕೊಳ್ಳುವ ತಮ್ಮ ಸ್ವಂತಿಕೆಯನ್ನು ಪ್ರದರ್ಶಿಸುವ ಆ ಮೂಲಕ ತಮ್ಮ ಅಸ್ತಿತ್ವವನ್ನು ಸ್ಥಾಪಿಸುವ ಪ್ರಕ್ರಿಯೆಯೇ ಸಾಂಸ್ಕೃತಿಕ ಅನನ್ಯತೆ"(ಅಂಬಳಿಕೆ ಹಿರಿಯಣ್ಣ; ೧೯೯೨; ಪುಟ ೧) ಎಂಬುದಾಗಿ ನಿರೂಪಿಸಿದ್ದಾರೆ.

ಹೀಗೆ ಪ್ರತಿಯೊಂದು ಜಾತಿ, ಧರ್ಮ, ಸಮುದಾಯಗಳ ಪ್ರತಿಯೊಂದು ಸಂಸ್ಕೃತಿಯು ತನ್ನದೇ ಆದ ಸಾಂಸ್ಕೃತಿಕ ವಿಶಿಷ್ಟತೆಯನ್ನು ಪಡೆದಿರುತ್ತದೆ. ಹಾಗಾಗಿಯೇ ಬದುಕಿನ ಮೌಲ್ಯಗಳ ಸ್ವರೂಪ, ರೂಢಿ, ಸಂಪ್ರದಾಯ, ನಂಬಿಕೆಗಳು, ಆಚರಣೆಗಳು, ಕಲೆಗಳು, ಒಂದು ಸಂಸ್ಕೃತಿಯಿಂದ ಮತ್ತೊಂದು ಸಂಸ್ಕೃತಿಗೆ ಪ್ರತ್ಯೇಕತೆಯನ್ನು ಹೊಂದಿರುತ್ತವೆ. ಹೀಗೆ ಪ್ರತ್ಯೇಕವಾಗಿ ತಮ್ಮ ಪಾಡಿಗೆ ತಾವು ಒಂದೇ ಕಡೆ ಜೀವನ ನಡೆಸಿದರೆ ಸಾಂಸ್ಕೃತಿಕ ಅನನ್ಯತೆ ಅಥವಾ ಅಭಿನ್ನತೆಯು ತಿಳಿಯುವುದಿಲ್ಲ. ಈ ರೀತಿಯ ಅಭಿನ್ನತೆ ಅಥವಾ ಪ್ರತ್ಯೇಕತೆಯು ತಿಳಿಯಬೇಕಾದರೆ ಬೇರೊಂದು ಸಂಸ್ಕೃತಿಯೊಂದಿಗೆ ಒಡನಾಟ ಅಥವಾ ಸಂಬಂಧ ಬೆಳೆಸಿದಾಗಲೇ ಸಾಂಸ್ಕೃತಿಕ ಅನನ್ಯತೆ ಅಥವಾ ಅಭಿನ್ನತೆಯು ತಿಳಿಯುತ್ತದೆ. ಹಾಗಾಗಿ ಪ್ರತಿ ಸಂಸ್ಕೃತಿಗಳು ತಮ್ಮ ಚಹರೆಯ ಉಳಿವಿಗಾಗಿ ಸದಾ ಹೋರಾಡುತ್ತಿರುತ್ತವೆ ಎಂದೇ ಹೇಳಬಹುದು.

ಕರ್ನಾಟಕ - ಆಂಧ್ರ ಗಡಿ ಪರಿಸರದ ಕೋಲಾಟ ಪದಗಳು ಭಾಷಿಕ ವಿಶಿಷ್ಟತೆ, ಸಾಂಸ್ಕೃತಿಕ ಭಿನ್ನತೆ ಮತ್ತು ಸಾಮುದಾಯಿಕ ಭಿನ್ನತೆ, ಭೌಗೋಳಿಕ ಭಿನ್ನತೆಗಳಿಂದ ಕೂಡಿದ್ದರೂ ತಮ್ಮದೇ ಆದ ಸಾಂಸ್ಕೃತಿಕ ಚಹರೆಗಳನ್ನು ಉಳಿಸಿಕೊಂಡಿರುವುದರ ಜೊತೆಗೆ ಗಡಿಭಾಗದ ಇತರೆ ಸಂಸ್ಕೃತಿಗಳನ್ನು ಸೇರಿಸಿಕೊಂಡು ಸಾಂಸ್ಕೃತಿಕ ಅನನ್ಯತೆಯನ್ನು ರೂಪಿಸಿಕೊಂಡಿರುವುದು ಕಂಡುಬರುತ್ತದೆ. ಗಡಿ ಪರಿಸರದ ಕೋಲುಪದಗಳು ಇತರೆ ಪ್ರಾಂತಗಳ ಕೋಲುಪದಗಳಿಗಿಂತ ವಿಶಿಷ್ಟತೆಯನ್ನು ಹೊಂದಿರುತ್ತವೆ. ಕರ್ನಾಟಕ ಮತ್ತು ಆಂಧ್ರಪ್ರದೇಶದ ಒಳನಾಡು ಪ್ರದೇಶಗಳ ಕೋಲುಪದಗಳಿಗಿಂತ ಗಡಿಭಾಗದ ಕೋಲುಪದಗಳು ತುಂಬಾ ಸಾಮ್ಯ ಮತ್ತು ಹೋಲಿಕೆಗಳನ್ನು ಒಳಗೊಂಡಿರುವುದರ ಜೊತೆಗೆ ಸಮಾನಾಂಶಗಳು, ಏಕತೆ ಮತ್ತು ಅಭಿನ್ನತೆಗಳು ಕಂಡುಬರುತ್ತವೆ.

ಕರ್ನಾಟಕದ ಗಡಿ ಪ್ರಾಂತವಾದ ಮೊಳಕಾಲ್ಮೂರಿನಲ್ಲಿ ಕನ್ನಡ ಕೋಲುಪದದಲ್ಲಿ ತೆಲುಗಿನ ಪದಗಳು(ನುಡಿ) ಸೇರಿಕೊಂಡು ಭಾಷಿಕ ಅನನ್ಯತೆಯೊಂದಿಗೆ ಆ ಭಾಗದ ಸಾಂಸ್ಕೃತಿಕತೆಯನ್ನು ಕೂಡ ಬಿಂಬಿಸುವುದು ಕಂಡುಬಂದಿದೆ.

ಕನ್ನಡದ ಕೋಲುಪದದಲ್ಲಿ ತೆಲುಗು ಭಾಷಿಕ ನುಡಿಗಳು ಸೇರಿ ಕನ್ನಡ - ತೆಲುಗು ಎರಡೂ ಸಂಸ್ಕೃತಿಗಳನ್ನು ಬೆಸೆಯುವ ಕೋಲುಪದ.

ಕೋಲು ಕೋಲು ಕೋಲು ಕೋಲನ್ನ
ಸೂರಯ್ಯ ಪಾಪ ಮೇಲೆ ಮುತ್ತಿನ ತಾನಿ ತಂದನ್ನ
ಎರ್ರಗಡ್ಡ ಎಗತುಂಡೆ ಎರ್ರಗಡ್ಡ ಎಗತುಂಡೆ
ಏಪಕೊಮ್ಮಲು ತೂಗುತುಂಡೆ
ಎನುಕ ವಚ್ಚಿನ ನಲ್ಲ ಗುಡುಸು
ನಿದ್ದ ರೊಚ್ಚಿ ತೂಗು ತುಂಡೆ
ಕೋಲು ಕೋಲು ಕೋಲು ಕೋಲನ್ನ
ಸೂರಯ್ಯ ಪಾಪ ಮೇಲೆ ಮುತ್ತಿನ ತಾನಿತಂದನ್ನ||೨||

(ವಕ್ತೃ: ಪಾಪಯ್ಯ, ಚಿರತಗುಂಡು, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ)

ಈ ಕೋಲುಪದವು ಕನ್ನಡದ ಪಲ್ಲವಿಯಿಂದ ಆರಂಭವಾಗಿ ತೆಲುಗಿನ ಚರಣಗಳನ್ನು ಒಳಗೊಂಡಿರುವುದು ಕಾಣಬರುತ್ತದೆ. ಆಂಧ್ರಪ್ರದೇಶದ ಗಡಿಪರಿಸರದಲ್ಲಿ ಈ ಕೋಲುಪದವನ್ನು ಸಂಗ್ರಹಿಸಿರುವುದರಿಂದ ಕನ್ನಡ ಭಾಷಿಕ ಸಂಸ್ಕೃತಿಯ ಮೇಲೆ ತೆಲುಗು ಭಾಷೆಯ ಸಂಸ್ಕೃತಿಯು ಪ್ರಭಾವ ಬೀರಿ ಎರಡು ಭಾಷೆ ಮತ್ತು ಸಂಸ್ಕೃತಿಗಳು ಒಂದೇ ಎಂಬಂತೆ ಏಕವಾಗಿ ಸಾಂಸ್ಕೃತಿಕ ಅಭಿನ್ನತೆಯು ಗೋಚರಿಸುವುದು. ಕರ್ನಾಟಕದ ಒಳಪ್ರಾಂತಗಳ ಕೋಲುಪದಗಳಲ್ಲಿ ಸಾಂಸ್ಕೃತಿಕ ಭಿನ್ನತೆಗಳು ತೋರಿ ಬರುವುದರ ಜೊತೆಗೆ ಒಂದೇ ಭಾಷೆಯ ಅಂದರೆ ಕನ್ನಡ ಭಾಷೆಯ ಹಾಡುಗಳನ್ನು ಹಾಡುವುದು ಕಂಡುಬರುತ್ತದೆ. ಆದರೆ ಕರ್ನಾಟಕ - ಆಂಧ್ರ ಗಡಿಪರಿಸರದಲ್ಲಿ ಆಡುವ ಕೋಲಾಟದಲ್ಲಿ ಹಲವು ಧರ್ಮ, ಜಾತಿ, ಸಮುದಾಯಗಳ ಜನರು ಸೇರಿ ಭಿನ್ನ

ಸಂಸ್ಕೃತಿ ಮತ್ತು ಭಾಷೆಗಳನ್ನು ಒಳಗೊಂಡಿದ್ದರೂ ಗಡಿನಾಡಿನ ಸಂಸ್ಕೃತಿ ಮತ್ತು ಭಾಷೆಯನ್ನು ಅನಿವಾರ್ಯವಾಗಿ ಅಥವಾ ಕುತೂಹಲಕ್ಕಾಗಿಯೋ ಅಥವಾ ತಮ್ಮ ಪ್ರತಿಷ್ಠೆಗಾಗಿಯೋ ತಮ್ಮ ತಮ್ಮ ಸಂಸ್ಕೃತಿಯೊಳಗೆ ಗಡಿ ಪರಿಸರದ ಭಾಷೆ ಮತ್ತು ಸಂಸ್ಕೃತಿಯನ್ನು ತಮ್ಮೊಳಗೆ ರೂಢಿಸಿಕೊಂಡು ಬಂದಿರುತ್ತಾರೆ. ಹಾಗೆಯೇ ಕೋಲಾಟವು ಸೇರಿದಂತೆ ಇತರೆ ಎಲ್ಲಾ ಜನಪದ ಕಲಾ ಪ್ರಕಾರಗಳಲ್ಲೂ ಭಿನ್ನತೆಯೊಂದಿಗೆ ಅಭಿನ್ನತೆ ಮತ್ತು ಏಕತೆಯ ತತ್ವವು ಗಡಿ ಪರಿಸರದ ಜನಪದ ಕಲೆಗಳಲ್ಲಿ ಗೋಚರಿಸುತ್ತದೆ.

ಗಡಿ ಭಾಗದ ಕೋಲುಪದಗಳಲ್ಲಿ ಎರಡು ಸಂಸ್ಕೃತಿಗಳು ಒಂದುಗೂಡುವಿಕೆಯಿಂದ ಸಾಂಸ್ಕೃತಿಕ ಭಿನ್ನತೆಗಳೊಂದಿಗೆ ಸಾಂಸ್ಕೃತಿಕ ಸಮಾನಾಂಶಗಳು ಕಾಣಸಿಗುತ್ತವೆ. ಹಾಗೆಯೇ ಸಾಂಸ್ಕೃತಿಕ ಸಮಾನಾಂಶಗಳೊಡಗೂಡಿ ಗಡಿ ಪರಿಸರದ ಪ್ರತಿಯೊಂದು ಸಂಸ್ಕೃತಿಯು ತಮ್ಮ ಅಸ್ತಿತ್ವವನ್ನು, ಚಹರೆಗಳನ್ನು ತೋರ್ಪಡಿಸುವಲ್ಲಿ ಆಯಾ ಕಲೆ ಆಚರಣೆಗಳಲ್ಲಿ ಕಾಣಬರುತ್ತದೆ. ಗಡಿ ಭಾಗದಲ್ಲಿ ನೆಲೆಸಿರುವ ಬೇಡರು, ಕುರುಬರು, ಮಾದಿಗರು, ಗೊಲ್ಲರು, ಕೊರಚರು ಮುಂತಾದ ಸಮುದಾಯಗಳು ತಮ್ಮದೇ ಆದ ಭಾಷೆ ಮತ್ತು ಸಂಸ್ಕೃತಿಯೊಂದಿಗೆ ತಮ್ಮ ಸಂಸ್ಕೃತಿಯ ಗುರುತುಗಳನ್ನು ಉಳಿಸಿಕೊಂಡು ಬಂದಿರುವುದು ಗೋಚರಿಸುತ್ತದೆ. ಗಡಿ ಪರಿಸರದ ಕೋಲುಪದಗಳು ದ್ವಿಭಾಷಾ ಸಂಸ್ಕೃತಿ ಮತ್ತು ಬಹು ಸಂಸ್ಕೃತಿಯ ಲಕ್ಷಣಗಳನ್ನು ಹೊಂದಿರುವುದಕ್ಕೆ ಗಡಿಪ್ರಾಂತ ಜನರ ಪರಸ್ಪರ ಕೊಡು-ಕೊಳ್ಳುವಿಕೆ ಇದಕ್ಕೆ ಕಾರಣ.

ಗಡಿ ಪರಿಸರದ ಕೋಲುಪದಗಳು ಒಳ ಪ್ರಾಂತಗಳ ಕೋಲುಪದಗಳೊಂದಿಗೆ ಮುಖಾಮುಖಿ ಯಾದಾಗಲೇ ಗಡಿಭಾಗದ ಕೋಲುಪದಗಳ ಸಾಂಸ್ಕೃತಿಕ ಅನನ್ಯತೆಯು ಕಂಡು ಬರುವುದು. ಹಿಂದೆ ಪ್ರಸ್ತಾಪಿಸಿರುವ ಕೋಲುಪದವು ಗಡಿಪ್ರಾಂತ ಪರಿಸರದಲ್ಲಿ ಸಂಗ್ರಹಿಸಿರುವುದರಿಂದ ಕನ್ನಡ - ತೆಲುಗು ಎರಡೂ ಭಾಷೆಗಳು ಸಮ್ಮಿಲನವಾಗಿರುವುದು ಕಂಡುಬಂದಿದೆ. ಹಾಗೆಯೇ ಎರಡೂ ಗಡಿ ಭಾಗದ ಪ್ರದೇಶಗಳಲ್ಲಿ ಭಿನ್ನ ಭಿನ್ನ ಸಂಸ್ಕೃತಿಯ ಸಮುದಾಯದವರು ಹಾಡಿದ ಕೋಲುಪದಗಳು ಒಂದೇ ರೀತಿಯ ಸಮಾನ ಅಂಶಗಳನ್ನು ಒಳಗೊಂಡಿರುವುದು ಕಾಣಸಿಗುತ್ತದೆ.

ಕೋಲು ಕೋಲು ಕೋಲು ಕೋಲನ್ನ
ಸೂರಯ್ಯ ಪಾಪ ಮೇಲೆ ಮುತ್ತಿನ ತಾನಿ ತಂದನ್ನ.

ಈ ಗೀತೆಯಲ್ಲಿ ಕನ್ನಡ ನುಡಿಗಳ ಜೊತೆಗೆ ತೆಲುಗಿನ ನುಡಿಗಳು ಸೇರಿರುವುದಲ್ಲದೇ ಕನ್ನಡ ಸಂಸ್ಕೃತಿಯೊಂದಿಗೆ ತೆಲುಗಿನ ಸಂಸ್ಕೃತಿಯು ತೆರೆದುಕೊಂಡಿದೆ. ಈ ಕೋಲುಪದದಲ್ಲಿ ಮ್ಯಾಸಬೇಡ ಸಮುದಾಯದ ಸಾಂಸ್ಕೃತಿಕ ವೀರರಾದ ದಡ್ಡಿ ಸೂರನಾಯಕ, ಪಾಪನಾಯಕರನ್ನು ಕೊಂಡಾಡುವ ಮತ್ತು ಸ್ತುತಿಸುವ ಚಿತ್ರಣವಿದೆ. ಈ ಗೀತೆಯನ್ನು ಆಂಧ್ರ ಗಡಿ ಪರಿಸರಕ್ಕೆ ಹೊಂದಿಕೊಂಡಿರುವ ಮೊಳಕಾಲ್ಮೂರಿನಲ್ಲಿ ಸಂಗ್ರಹಿಸಲಾಗಿದೆ. ಮೊಳಕಾಲ್ಮೂರು ಗುಡ್ಡದಲ್ಲಿ ನೆಲೆಸಿರುವ ನುಂಕಿಮಲೆ ಸಿದ್ದೇಶ್ವರನ ಜಾತ್ರೆಯಲ್ಲಿ ಈ ಹಾಡನ್ನು ಸಂಗ್ರಹಿಸಲಾಗಿದೆ. ಈ ಜಾತ್ರೆಗೆ ಸುತ್ತಮುತ್ತಲ ರಾಯಪುರ,

ಕೋನಸಾಗರ, ಕೊಂಡ್ಲಹಳ್ಳಿ, ವಲಸೆ, ಕಂಪಳದೇವರಹಟ್ಟಿ, ಬೇಡರೆಡ್ಡಿಹಳ್ಳಿ, ನಾಯಕನಹಟ್ಟಿ, ಬಿ.ಜಿ. ಕೆರೆ, ಸೂರಮ್ಮನಹಳ್ಳಿ, ರುದ್ರಮ್ಮನಹಳ್ಳಿ ಮುಂತಾದ ಪ್ರದೇಶಗಳ ಜನರು ಸೇರುತ್ತಾರೆ. ಹಾಗೆಯೇ ಆಂಧ್ರಪ್ರದೇಶದ ಅನಂತಪುರಂ, ಕಲ್ಯಾಣದುರ್ಗ, ರಾಯದುರ್ಗ, ಓಬಳಾಪುರಂ, ನಾಗಲಾಪುರಂ, ಗಲ್ಲುಗಲ್ಲು ಮುಂತಾದ ಕಡೆಯಿಂದ ಬಂದು ಸೇರುತ್ತಾರೆ. ಹೀಗೆ ಎರಡೂ ರಾಜ್ಯಗಳ ಗಡಿ ಪರಿಸರದ ಜನಪದ ಕಲಾತಂಡಗಳು ಪಾಲ್ಗೊಳ್ಳುತ್ತವೆ. ಈ ಕಲಾ ತಂಡಗಳಲ್ಲಿ ಕೋಲಾಟದ ಪ್ರದರ್ಶನವೂ ನಡೆಯುತ್ತದೆ. ಎರಡೂ ರಾಜ್ಯಗಳ ಗಡಿ ಪರಿಸರದ ಕೋಲಾಟ ತಂಡಗಳು ಸೇರಿ ಪದಗಳನ್ನು ಹಾಡುತ್ತಾ, ಪ್ರದರ್ಶನ ಮಾಡುವುದು ಕಂಡುಬರುತ್ತದೆ. ಈ ಸಂದರ್ಭದಲ್ಲಿ ಎರಡೂ ರಾಜ್ಯಗಳ ಕೋಲುಪದಗಳು ಪರಸ್ಪರ ಸಂಗಮವಾಗುವುದರಿಂದ ಎರಡೂ ರಾಜ್ಯಗಳ ಭಾಷೆಗಳಾದ ಕನ್ನಡ-ತೆಲುಗುಗಳು ಪರಸ್ಪರರನ್ನು ಪ್ರಭಾವಿಸುವುದು ಕಂಡುಬಂದಿದೆ. ಹಾಗೆಯೇ ಎರಡು ನಾಡಿನ ಸಂಸ್ಕೃತಿಯು ಒಂದೆಡೆ ಸೇರಿದಾಗ, ಜನರ ನಡೆ-ನುಡಿಗಳ ಮೇಲೂ ಕೋಲಾಟವೂ ಪರಸ್ಪರ ಗಡಿ ಪ್ರಾಂತದ ಜನರ ಭಿನ್ನ ಸಂಸ್ಕೃತಿಯನ್ನು ಏಕವಾಗಿಸುವುದು ಗಡಿಭಾಗದ ಸಾಂಸ್ಕೃತಿಕ ಆಚರಣೆಗಳಲ್ಲಿ ಸ್ಪಷ್ಟವಾಗಿ ಗೋಚರವಾಗುವುದು ಎಂಬುದನ್ನು ಮನಗಾಣಬಹುದು. ಮೊಳಕಾಲ್ಮೂರಿನ ನುಂಕಮಲೆಸಿದ್ದೇಶ್ವರನ ಜಾತ್ರೆಯಲ್ಲಿ ಪಾಲ್ಗೊಂಡ ಎರಡೂ ರಾಜ್ಯಗಳ ಕೋಲಾಟ ತಂಡಗಳು ಪ್ರದರ್ಶನ ಮಾಡುವ ಕಾಲಕ್ಕೆ ಹಾಡುವ ಹಾಡುಗಳಲ್ಲಿ ಹಾಡುವ ರೀತಿ, ಶೈಲಿ, ಧಾಟಿ, ಲಯ ಮತ್ತು ಪ್ರದರ್ಶನ ಮಾಡುವ ರೀತಿಗಳಲ್ಲಿ ಕೊಡು-ಕೊಳ್ಳುವಿಕೆ ನಡೆಯುತ್ತದೆ. ಸಾಮಾನ್ಯವಾಗಿ ಈ ಜಾತ್ರೆಯ ಸಂದರ್ಭದಲ್ಲಿ ನಾಯಕ, ಕೊರಚ, ಮಾದಿಗ, ಕುರುಬ, ಗೊಲ್ಲ ಮುಂತಾದ ಸಮುದಾಯಗಳು ಕೋಲಾಟವಾಡುತ್ತಾ ಪದಗಳನ್ನು ಹಾಡುವ ಕಾಲಕ್ಕೆ ಭಾಷೆ ಮತ್ತು ಸಂಸ್ಕೃತಿಗಳು ಏಕವಾಗಿ ಸಮಾನಾಂಶಗಳು ತೋರಿ ಬರುವುದರ ಜೊತೆಗೆ ಬಹುತ್ವ ಸಂಸ್ಕೃತಿಯು ಅನಾವರಣಗೊಳ್ಳುತ್ತದೆ. ಅಂದರೆ ಆಂಧ್ರರಾಜ್ಯದ ಗಡಿ ಪ್ರಾಂತಗಳ ಕೋಲುಪದಗಳನ್ನು ಕರ್ನಾಟಕ ರಾಜ್ಯ ಗಡಿ ಪರಿಸರದ ಕೋಲು ಹುಯ್ಯುವ ಕಲಾವಿದರು ಸ್ವೀಕರಿಸುವುದು ಕಾಣಸಿಗುತ್ತದೆ. ಕರ್ನಾಟಕ ಗಡಿಪ್ರಾಂತ ಪರಿಸರದ ಕೋಲುಪದಗಳನ್ನು ಆಂಧ್ರಗಡಿ ಪರಿಸರದ ಕೋಲು ಕಲಾವಿದರು ಸ್ವೀಕರಿಸುವುದು ಕಂಡುಬಂದಿದೆ. ಹೀಗೆ ಒಂದು ರಾಜ್ಯದ ಸಂಸ್ಕೃತಿ, ಭಾಷೆ, ನಂಬಿಕೆ-ನಡವಳಿಕೆಗಳು ಗಡಿ ಪ್ರಾಂತದ ಜಾನಪದ ದೈವಗಳ ಸನ್ನಿಧಿಯಲ್ಲಿ ಪರಸ್ಪರ ಕೊಡು-ಪಡೆ ಮಾಡಿಕೊಳ್ಳುವುದು ಇದೆ. ಜಾನಪದ ದೇವ-ದೇವತೆಗಳಾದ ಚೇಳಗುರ್ಕಿ ಎರ್ರಿತಾತ ಗುಡ್ಡದ ಮಲ್ಲಯ್ಯ, ಕುರುಗೋಡು ಬಸವೇಶ್ವರ, ನುಂಕಿಮಲೆಸಿದ್ದೇಶ್ವರ, ಗೌಸಂದ್ರ ಮಾರಮ್ಮ, ನಾಯಕನಹಟ್ಟಿ ತಿಪ್ಪೇಸ್ವಾಮಿ, ಇನ್ನೂ ಮುಂತಾದ ಗಡಿ ಪರಿಸರದ ದೇವ-ದೇವತೆಗಳ ಸನ್ನಿಧಿಗೆ ಬಂದ ಕನ್ನಡ-ತೆಲುಗು ನಾಡಿನ ಜನರು, ಜನಪದ ಕಲಾವಿದರು, ಕೋಲಾಟ ಹಾಡುಗಾರರೂ ಒಂದೆಡೆ ಸೇರಿ ಕನ್ನಡ -ತೆಲುಗು ಎರಡೂ ಭಾಷೆಯ ಪದಗಳನ್ನು ಹಾಡುತ್ತಾ ಎರಡೂ ರಾಜ್ಯಗಳ ಸಂಸ್ಕೃತಿಯನ್ನು ಸೇರಿಸಿಕೊಂಡು ವಿಶಿಷ್ಟತೆಯನ್ನು ರೂಪಿಸಿಕೊಂಡು ಬಂದಿರುವುದನ್ನು ಕಾಣಬಹುದಾಗಿದೆ.

ಉದಾಹರಣೆಗೆ, ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಆಲೂರು ತಾಲೂಕಿನ ಹೊಳಗುಂದ ಮಾರ್ಲಮಡಿಕಿ ಸುತ್ತಮುತ್ತಲ ಹಳ್ಳಿಗಳಲ್ಲಿ, ಕರ್ನಾಟಕದ ಬಳ್ಳಾರಿ ಜಿಲ್ಲೆಯ ಕುರುಗೋಡು, ಬಸವೇಶ್ವರ, ಬೂದಾಳು ಬಸವೇಶ್ವರ ಎಂಬ ಶಿವನ ವಾಹನ ನಂದಿಯ ಕುರಿತಾಗಿ ಕೋಲುಪದಗಳಲ್ಲಿ ಪ್ರಸ್ತಾಪ ಮಾಡಿರುವುದು ಕಾಣಸಿಗುತ್ತದೆ. ಈ ಗೀತೆ ಆಂಧ್ರದಲ್ಲಿ ದೊರಕಿದ್ದು ಕರ್ನಾಟಕದ ದೇವತೆಗಳ ಕುರಿತು ತೆಲುಗು ನಾಡಿನ ಕೋಲು ಕಲಾವಿದರು ಹಾಡಿರುವುದು ವಿಶೇಷವೆನಿಸುತ್ತದೆ.

ಬಸವ ಸುಂದರೀಶ ಬಯಲಿಗೆ ಹೊಂಟಾರೆ
ದೆಶೆಮುಖದ ಒಳ್ಳೆ ಬೂದಾಳು ಅಣ್ಣಾಣ್ಣಾ
ದೆಶೆಮುಖದ ಒಳ್ಳೆ ಬೂದಾಳು
ದೆಶೆ ಮುಖದ ಒಳ್ಳೆ ಬೂದಾಳು ಬಸವಣ್ಣ
ಉಸಿರೆಂದರೆ ಇನ್ನಾರಿಗೆ ಅಳವು
ಕ್ವಾಟೆ ತೆಕ್ಕಲಕ್ವಾಟೆ ಕೊನೆ ಸೆರಗು
ಬಳ್ಳಾರಿ ಏಕರಾಜ್ಯವೇ ಕುರುಗೋಡು
ಅಣ್ಣಾಣ್ಣಾ ಏಕರಾಜ್ಯವೇ ಕುರುಗೋಡು
ಏಕರಾಜ್ಯವೇ ಕುರುಗೋಡು ಬಯಲಾಗ
ಭೂಪ ಮಲಗ್ಯಾನ ಬಸವಣ್ಣ
ಬಸವಣ್ಣ ಮಲಗುತಲೆ ಹೊಸಮನೆ ಕಟ್ಟುತಲೆ
ಬಳ್ಳಾರಿಗೆ ಬಂತು ಬಡತನ ಅಣ್ಣಾಣ್ಣಾ
ಬಳ್ಳಾರಿಗೆ ಬಂತು ಬಡತನ
ಬಳ್ಳಾರಿಗೆ ಬಂತು ಬಡತನ ಹೊಳಗುಂದ
ಹುಡುಗರಿಗೆ ಬಂತು ದೊರೆತನ ||೨||

(ವಕ್ತೃ: ಗಾದಿಲಿಂಗಯ್ಯ, ಮಾರ್ಲಮಡಿಕಿ, ಆಲೂರು ತಾಲ್ಲೂಕು, ಕರ್ನೂಲ್ ಜಿಲ್ಲೆ)

ಈ ಕೋಲುಪದದಲ್ಲಿ ಕರ್ನಾಟಕ ಮತ್ತು ಆಂಧ್ರಪ್ರದೇಶದ ಎರಡೂ ರಾಜ್ಯಗಳ ಗಡಿ ಪರಿಸರದ ಊರುಗಳ ಹೆಸರುಗಳನ್ನು ಪ್ರಸ್ತಾಪ ಮಾಡುವುದರ ಜೊತೆಗೆ ಕರ್ನಾಟಕದ ಬಳ್ಳಾರಿ ಜಿಲ್ಲೆಯ ಕುರುಗೋಡು ಹಾಗೂ ಬೂದಾಳು ಬಸವೇಶ್ವರ ಅಥವಾ ಬಸವಣ್ಣನನ್ನು(೧೨ನೇ ಶತಮಾನದ ಬಸವಣ್ಣನಲ್ಲ ಶಿವನ ವಾಹನ ನಂದಿಯನ್ನು) ಕುರಿತ ಕೋಲುಪದವಾಗಿದೆ. ಹಾಡಿದವರು ತೆಲುಗು ನಾಡಿನ ಕೋಲು ಕಲಾವಿದರಾದ ಗಾದಿಲಿಂಗಪ್ಪ ಇವರು ಆಂಧ್ರದವರಾದರೂ ಕರ್ನಾಟಕ ದೈವದ ಕುರಿತಾಗಿ ಆಂಧ್ರದ ಗಡಿ ಪರಿಸರದ ಕೋಲುಪದದಲ್ಲಿ ಸ್ತುತಿಸಿರುವುದು ಕಂಡುಬಂದಿದೆ. ಇಲ್ಲಿ ಒಂದು ಸಂಸ್ಕೃತಿಯ ಮೇಲೆ ಮತ್ತೊಂದು ಸಂಸ್ಕೃತಿಯು ಪ್ರಭಾವ ಬೀರಿದೆ ಎಂದು ಹೇಳಬಹುದು. ಹಾಗೆಯೇ ಒಂದು ಸಂಸ್ಕೃತಿಯು ಬಹುಸಂಸ್ಕೃತಿಯನ್ನು ತನ್ನೊಳಗೆ ರೂಪಿಸಿಕೊಂಡಿದೆ ಎಂದರೆ ಅದು ಗಡಿನಾಡ ಪರಿಸರ ಕೋಲುಪದ ಮತ್ತು ಇತರೆ ಜನಪದ ಕಲೆಗಳಲ್ಲಿ ಎಂಬುದು ತಿಳಿದ ಸಂಗತಿ. ಗಡಿ ಪರಿಸರದಲ್ಲಿ ಒಂದಕ್ಕಿಂತ ಎರಡು ಭಿನ್ನ

ಸಂಸ್ಕೃತಿಗಳು ಸೇರಿ ಏಕವಾಗುವುದರ ಜೊತೆಗೆ ಸಮಾನಾಂಶಗಳನ್ನು ಒಳಗೊಂಡಿವೆ ಎಂಬುದನ್ನು ಈ ಗೀತೆ ಸೂಚಿಸುತ್ತದೆ. ಹೀಗೆ ಆಂಧ್ರಪ್ರದೇಶದ ಗಡಿ ಪ್ರಾಂತಗಳ ಕೋಲುಪದಗಳಲ್ಲಿ ಕನ್ನಡ ನಾಡಿನ ಜನಪದ ದೇವತೆಗಳ ಕುರಿತಾಗಿ ಪದಗಳನ್ನು ರಚಿಸಿ ಹಾಡುವುದು ಮತ್ತು ಪ್ರದರ್ಶನ ಮಾಡುವುದು ಕಂಡುಬರುತ್ತದೆ. ಇದು ಕೋಲಾಟದ ಪದಗಳಲ್ಲಿ ಮಾತ್ರವಲ್ಲದೆ ಗಡಿ ಪರಿಸರದಲ್ಲಿ ಜಾನಪದದ ಯಾವುದೇ ಪ್ರಕಾರವಿರಲಿ, ಒಂದಕ್ಕಿಂತ ಹೆಚ್ಚು ಭಾಷೆಗಳು, ಸಮುದಾಯಗಳು, ಸಂಸ್ಕೃತಿ, ಆಚಾರ-ವಿಚಾರ, ನಂಬಿಕೆ-ನಡವಳಿಕೆಗಳು ಮೇಳೈಸಿಕೊಂಡಿರುವುದು ಕಂಡು ಬರುತ್ತದೆ. ಹೀಗೆ ಹತ್ತು ಹಲವು ರೀತಿಯ ಸಮುದಾಯಗಳು ಗಡಿ ಪರಿಸರದಲ್ಲಿ ನೆಲೆ ನಿಂತಿರುವುದರಿಂದ ಜಾನಪದ ಕಲೆಗಳಾದ ಕೋಲಾಟ, ಬಯಲಾಟ, ದಾಸರಾಟ, ಬುರ್ರಕಥಾ, ಕೋಲೆ ಬಸವನಾಟ ಮುಂತಾದ ಕ್ರೀಡೆ, ಕಲೆಗಳು ಇನ್ನೂ ಗಡಿಪ್ರಾಂತ ಪರಿಸರದಲ್ಲಿ ಶ್ರೀಮಂತ ಕಲೆಗಳೆನಿಸಿಕೊಂಡಿರುವುದು ಸ್ತುತ್ಯಾರ್ಹವೆನಿಸುತ್ತದೆ.

ಹೀಗೆ ಗಡಿಭಾಗದ ಕೋಲಾಟವು ವಿಶಿಷ್ಟತೆಯನ್ನು ಪಡೆದಿದೆ ಎಂದರೆ ಅದಕ್ಕೆ ಕಾರಣ ಗಡಿ ಪರಿಸರದಲ್ಲಿ ನೆಲೆಸಿರುವ ಹಲವು ಜಾತಿ, ಜನಾಂಗ, ಸಮುದಾಯಗಳು. ಗಡಿ ಭಾಗದಲ್ಲಿ ಹಿಂದೂ, ಮುಸ್ಲಿಂ, ಕ್ರೈಸ್ತ, ನಾಯಕ, ಗೊಲ್ಲ, ಕೊರಚ, ಕುರುಬ, ವೈಶ್ಯ, ಲಂಬಾಣಿ ಮುಂತಾದ ಸಮುದಾಯಗಳು ನೆಲೆಸಿದ್ದಾರೆ. ಹಾಗಾಗಿ ಒಂದೊಂದು ಸಮುದಾಯ ಒಂದೊಂದು ರೀತಿಯ ಭಾಷಾ ವೈಶಿಷ್ಟ್ಯತೆಯೊಂದಿಗೆ ತಮ್ಮ ಕಲೆಗಳನ್ನು ವ್ಯಕ್ತಪಡಿಸುತ್ತಾರೆ. ತಮ್ಮದೇ ಆದ ಶೈಲಿಯಲ್ಲಿ ಸಂಸ್ಕೃತಿಯನ್ನು ಬಿಂಬಿಸುವುದು ಕಂಡು ಬರುತ್ತದೆ. ಹಾಗಾಗಿ ಕರ್ನಾಟಕ- ಆಂಧ್ರ ಗಡಿಭಾಗದ ಕೋಲುಪದಗಳು ಕನ್ನಡ-ತೆಲುಗು ದ್ವಿಭಾಷಿಕತೆಯನ್ನು ಒಳಗೊಂಡಿರುವುದರ ಜೊತೆಗೆ ಆಯಾ ಸಮುದಾಯಗಳ ದೈವಗಳ ಜೊತೆಗೂ ಗಡಿಭಾಗದ ಜಾನಪದ ದೈವಗಳೊಂದಿಗೆ ಗಡಿ ಪರಿಸರದ ಕೋಲುಪದಗಳು ತಳುಕು ಹಾಕಿಕೊಂಡಿರುವುದನ್ನು ಗಮನಿಸಿದರೆ, ಗಡಿ ಪರಿಸರದಲ್ಲಿ ಎರಡಕ್ಕಿಂತ ಹೆಚ್ಚು ಸಂಸ್ಕೃತಿ ಮತ್ತು ಭಾಷೆಗಳನ್ನು ಸೇರಿಸಿಕೊಂಡು ಬಹುತ್ವ ಸಂಸ್ಕೃತಿಯನ್ನು ರೂಪಿಸಿ ಕೊಂಡಿರುವುದು ಕಾಣಬರುತ್ತದೆ. ಹಾಗಾಗಿ ಗಡಿ ಭಾಗದ ಕೋಲುಪದಗಳು ಕರ್ನಾಟಕ-ಆಂಧ್ರಪ್ರದೇಶದ ಒಳನಾಡುಗಳಲ್ಲಿನ ಕೋಲುಪದಗಳಿಗಿಂತ ಭಿನ್ನ ಹಾಗೂ ವಿಶಿಷ್ಟತೆಯನ್ನು ಮತ್ತು ಏಕತೆಯನ್ನು ಒಳಗೊಂಡಿವೆ. ಹಾಗೆಯೇ ಸಾಮ್ಯ, ವೈಷಮ್ಯಗಳು ತೋರಿ ಬರುತ್ತವೆ ಎಂಬುದು ಅಧ್ಯಯನದಿಂದ ಸ್ಪಷ್ಟವಾಗಿ ಗೋಚರವಾಗುತ್ತದೆ.



ಅಧ್ಯಾಯ : ಏಳು

# ಕೋಲಾಟದ ಪದಗಳು ಸಾಹಿತ್ಯಿಕ ವಿವೇಚನೆ

೭.೧. ಪ್ರಾರ್ಥನಾ ಕೋಲುಪದಗಳ ಸಾಹಿತ್ಯ
೭.೨. ಶೃಂಗಾರ ಕೋಲುಪದಗಳ ಸಾಹಿತ್ಯ
೭.೩. ವ್ಯಕ್ತಿ ವಿಷಯದ ಕೋಲುಪದಗಳ ಸಾಹಿತ್ಯ
೭.೪. ಹಾಸ್ಯ ಕೋಲುಪದಗಳ ಸಾಹಿತ್ಯ
೭.೫. ಕೋಲುಪದಗಳ ಭಾಷೆ

ಅಧ್ಯಾಯ : ಏಳು

# ಕೋಲಾಟ ಪದಗಳು : ಸಾಹಿತ್ಯ ವಿವೇಚನೆ

**ಕೋ**ಲಾಟದ ಪದಗಳಲ್ಲಿ ರಾಗ, ತಾಳ, ಲಯ ಇವುಗಳು ಸರಿಯಾಗಿ ಹೊಂದಿಕೊಂಡು ಬರುವುದಕ್ಕೆ ದೇಸಿಮಟ್ಟುಗಳೆನಿಸಿರುವ ಸಾಹಿತ್ಯಿಕ ಅಂಶಗಳಾದ ತ್ರಿಪದಿ ಅಂಶಗಳು ಪೂರಕ ಎಂದು ಹೇಳಬಹುದು. ಕೋಲಾಟದ ಹಾಡುಗಳು ಸೇರಿದಂತೆ ಪ್ರತಿಯೊಂದು ಜನಪದ ಗೀತೆಯು ಸಾಹಿತ್ಯಿಕ ಅಂಶಗಳನ್ನು ಒಳಗೊಂಡಿರುತ್ತವೆ. ಮೌಖಿಕ ಸಾಹಿತ್ಯದ ಒಂದು ಭಾಗವಾಗಿ ಕೋಲಾಟದ ಪದಗಳು ಪ್ರಮುಖ ಸ್ಥಾನವನ್ನು ಪಡೆದುಕೊಂಡಿವೆ. ಕೋಲಾಟವನ್ನು ಪ್ರದರ್ಶನ ಮಾಡುವ ಕಾಲಕ್ಕೆ ಕೋಲುಹುಯ್ಯುವ ಕಲಾವಿದರು, ಕೋಲುಗೂಟಗಳು ಅಥವಾ ಕೋಲುಕಡ್ಡಿಗಳು ಎಷ್ಟು ಮುಖ್ಯವೋ ಕೋಲುಪದಗಳು ಹಾಗೂ ಪದಗಳಿಂದೊಡಮೂಡಿದ ಸಾಹಿತ್ಯಿಕ ಅಂಶಗಳು ಮತ್ತು ಸಂಗತಿಗಳು ಸಹ ಅಷ್ಟೇ ಪ್ರಾಮುಖ್ಯತೆಯನ್ನು ಪಡೆದಿರುತ್ತವೆ.

ಗೀತಾ ಬಿ.ವಿ. ಅವರು ತಮ್ಮ 'ತುಂಗೆ ಮಡಿಲ - ಜನಪದ' ಎನ್ನುವಂಥ ಪ್ರಕಟಿತ ಮಹಾಪ್ರಬಂಧದಲ್ಲಿ ಜೀಶಂಪ ಅವರ ಹೇಳಿಕೆಯನ್ನು ದಾಖಲಿಸಿ ಸಾಹಿತ್ಯದ ಕುರಿತಾಗಿ ಈ ರೀತಿಯಾಗಿ ಉಲ್ಲೇಖಿಸಿದ್ದಾರೆ. "ಕೋಲಾಟದ ಸಾಹಿತ್ಯ ಅದರ ಕ್ರೀಡಾ ಪ್ರಕಾರದಷ್ಟೇ ಪ್ರಮುಖವಾದುದು, ವಿಶಿಷ್ಟವಾದುದು. ಜಾನಪದ ಕ್ರೀಡೆಗಳಲ್ಲಿ ಅತ್ಯಂತ ಕಾವ್ಯಮಯವಾದ, ರಸಾತ್ಮಕವಾದ ಸಾಹಿತ್ಯವೆಂದರೆ ಗರತಿಯರ ಹಾಡನ್ನು ಬಿಟ್ಟರೆ ಕೋಲಾಟದ ಸಾಹಿತ್ಯ" ಎಂಬುದಾಗಿ ಜಾನಪದ ವಿದ್ವಾಂಸರಾದ ಜೀ.ಶಂ. ಪರಮಶಿವಯ್ಯ ಅವರು ಕೋಲಾಟ ಸಾಹಿತ್ಯದ ಜನಪ್ರಿಯತೆಯ ಕುರಿತಾಗಿ ಪ್ರಸ್ತಾಪಿಸಿರುವುದನ್ನು ಗಮನಿಸಿದರೆ, ಕೋಲುಪದಗಳ ಸಾಹಿತ್ಯಿಕ ಅಂಶಗಳ ಹಿರಿಮೆಯು ತಿಳಿದುಬರುತ್ತದೆ. ಹಾಗೆಯೇ ಕೋಲಾಟದ ಸಾಹಿತ್ಯವನ್ನು ರಚನೆ ಮಾಡುವವರು ಹೆಚ್ಚಾಗಿ ಪುರುಷರೆ ಎಂಬುದಾಗಿ ತಿಳಿಯುವ ಸಂಗತಿಯಾಗಿದೆ.

ಪುರುಷ ಅಥವಾ ಗಂಡಸಿಗೆ ಜನಪದ ಸಾಹಿತ್ಯದ ಯಾವುದೇ ಪ್ರಕಾರವಿರಲಿ ಕೋಲುಪದಗಳ ಸಾಹಿತ್ಯವಿರಲಿ, ಭಜನೆಪದ, ಬಯಲಾಟದ ಕಥನಕಾವ್ಯಗಳ ಸಾಹಿತ್ಯವಿರಲಿ ಅವುಗಳ ರಚನೆ ಮತ್ತು ಹಾಡುಗಾರಿಕೆಯಲ್ಲಿ ಯಾವುದೇ ರೀತಿಯ ಅಡೆತಡೆಗಳು, ಕಡಿವಾಣಗಳಿರುವುದಿಲ್ಲ. ಹಾಗೆಯೇ

ಸಂಕೋಚ, ಬಿಡೆಗಳಿಲ್ಲದೆ ಯಾರನ್ನಾದರೂ ನಗಿಸುವ, ನಲಿಸುವ, ಅಳಿಸುವ, ಕುಣಿಸುವಂಥ ಹಾಡುಗಳನ್ನು ಹಾಡುವುದು ಜೊತೆಗೆ ಯಾವುದೇ ಆಟವನ್ನು ಪ್ರದರ್ಶನ ಮಾಡುವ ಕಾಲಕ್ಕೆ ಯಾವುದೇ ಮಾದರಿಯ ಸಾಹಿತ್ಯವನ್ನು ರಚಿಸಿ ಹಾಡುವುದು ಕಾಣಸಿಗುತ್ತದೆ. ಹೀಗೆ ಸಮಾಜದಲ್ಲಿ ಗಂಡಸು ಆ ರೀತಿಯ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಪಡೆದಿದ್ದಾನೆ ಮತ್ತು ಸಮಾಜವು ಅವನಿಗೆ ಆ ಸ್ವಾತಂತ್ರ್ಯವನ್ನು ಒದಗಿಸಿಕೊಟ್ಟಿರುವುದು ಜನಪದ ಸಾಹಿತ್ಯಿಕ ಅಂಶಗಳಲ್ಲೂ ಗೋಚರಿಸುತ್ತದೆ.

ಕೋಲುಪದಗಳ ಸಾಹಿತ್ಯ ಪುರುಷನಿಂದ ರಚನೆಯಾಗಿರುತ್ತದೆ. ಅವನು ಹಾಡುವಂಥ ಹಾಡುಗಳಲ್ಲಿ ಶೀಲ - ಅಶ್ಲೀಲತೆಯ ಸಾಹಿತ್ಯದ ಸೋಗು ಕಂಡುಬಂದರೂ ಸಹ ಶೀಲತೆಯ ನೆರಳಿನಲ್ಲಿ ಮನರಂಜನೆಯನ್ನು ಮಾತ್ರ ದೃಷ್ಟಿಯಲ್ಲಿರಿಸಿಕೊಂಡು ಅಥವಾ ಮನರಂಜನೆಯ ಉದ್ದೇಶವನ್ನು ಹೊಂದಿರುವುದರಿಂದ ಕೋಲುಪದಗಳ ಸಾಹಿತ್ಯ ಅಶ್ಲೀಲತೆಯೆನಿಸದು. ಈ ಕೋಲುಪದಗಳನ್ನು ಗಂಡಸರು ಮಾತ್ರ ಕೂಡುವಂಥ, ನೆರೆದಿರುವಂಥ ಸ್ಥಳಗಳಲ್ಲಿ ಹಾಡುತ್ತಾ ಪ್ರದರ್ಶನ ಮಾಡುವುದು ಕಂಡುಬರುತ್ತದೆ. ಕೂಲಿ ಕೆಲಸ ಕಾರ್ಯಗಳಿಗೆ ಹೋದ ಕಡೆ, ಜಾತ್ರೆ-ಉತ್ಸವಗಳಿಗೆ, ಗಂಡಸರು - ಗಂಡಸರಷ್ಟೇ ಹೋಗುವಂಥ ಸ್ಥಳಗಳಲ್ಲಿ ಹೀಗೆ 'ಗಂಡಸರೆ' ಮಿತ ಸಂಖ್ಯೆಯಲ್ಲಿ ಇರುವೆಡೆಗಳಲ್ಲಿ ಮಾತನಾಡುವ ಕತೆಗಳು, ಹಾಡುವ ಗೀತೆಗಳು, ಸಾರ್ವಜನಿಕ ಜಾಗಗಳಲ್ಲಿ ಹೇಳುವಂಥವಲ್ಲ, ಹಾಡುವಂಥವಲ್ಲ. ಆದರೆ ಆ ಸಾಹಿತ್ಯವೂ ಹಾಸ್ಯದ ಮಜಲುಗಳನ್ನು ಹೊಂದಿರುವುದರ ಜೊತೆಗೆ, ಪ್ರಣಯ, ಶೃಂಗಾರದ ಕಲ್ಪನೆಯನ್ನು ಮೂಡಿಸುವ ಕೋಲುಪದಗಳಾಗಿವೆ. ದೀರ್ಘಕಾಲದ ಕೆಲಸಗಳ ಏಕತಾನತೆ, ದುಃಖ-ದುಮ್ಮಾನ, ಒಂಟಿತನ, ಬೇಸರ ಇತ್ಯಾದಿ ನೋವಿನ ಸಂಗತಿಗಳನ್ನು ಮರೆಯಲು ಅಥವಾ ಕಳೆಯಲು ಈ ರೀತಿಯ ಸಾಹಿತ್ಯ ಕೋಲುಪದಗಳಲ್ಲಿ ಅಗತ್ಯವಿದೆ.

ಕೋಲಾಟವು ಸಾರ್ವಜನಿಕ ಸ್ಥಳಗಳಲ್ಲಿ, ಬಯಲುಗಳಲ್ಲಿ ಜನಜಂಗುಳಿ ಸೇರುವಂಥ ಜಾಗಗಳಲ್ಲಿ ನಡೆಯುವಂಥ ಒಂದು ಪ್ರದರ್ಶಕ ಕಲೆ. ಈ ಕೋಲಾಟ ಆಡುವುದನ್ನು ವೀಕ್ಷಿಸಲು ಹಿರಿಯರು, ಕಿರಿಯರು, ಗಂಡಸರು, ಹೆಂಗಸರು, ಬಾಲಕಿ-ಬಾಲಕರು, ಮುದುಕರು-ಮುದುಕಿಯರು, ಮಕ್ಕಳು ಮತ್ತು ಸುತ್ತಮುತ್ತಲ ಊರುಗಳಿಂದ ಬಂದಂಥ ಬಂಧು-ಬಳಗದವರು, ಹೀಗೆ ಬೇರೆ ಬೇರೆ ಕಡೆಗಳಿಂದ ಜನರು ಬಂದು ಸೇರಿರುತ್ತಾರೆ. ಕೋಲಾಟವನ್ನು ಜಾತ್ರೆ-ಉತ್ಸವಗಳಲ್ಲಿ ಹಬ್ಬದ ಸಂಭ್ರಮಗಳಲ್ಲಿ ಅಥವಾ ಇನ್ನಾವುದೇ ಸಂತೋಷ ಕೂಟಗಳಲ್ಲಿ ಇಲ್ಲವೇ ಮದುವೆ ಸಮಾರಂಭಗಳಲ್ಲಿ, ಸಾಂಸ್ಕೃತಿಕ ನಾಯಕ-ನಾಯಕಿಯರ ಸಾಂಸ್ಕೃತಿಕ ಆಚರಣೆಗಳಲ್ಲಿ ರಾಷ್ಟ್ರೀಯ ನಾಯಕರ ಜಯಂತ್ಯೋತ್ಸವಗಳ ಸಂದರ್ಭಗಳಲ್ಲಿಯೂ ಕೂಡ ಕೋಲಾಟವಾಡುವುದು ಕಂಡುಬರುತ್ತದೆ. ಈ ಸಂದರ್ಭದಲ್ಲಿ ಕೋಲಾಟದ ಗುರುಗಳು ಅಥವಾ ಕೋಲುಮೇಳಗಾರ ಹಾಡುವ ಸಾಹಿತ್ಯ ಯಾವ ಬಗೆಯದಾಗಿರಬೇಕು ಎಂಬುದು ಇಲ್ಲಿ ಮುಖ್ಯವಾಗುತ್ತದೆ. ಕೋಲುಪದಗಳಲ್ಲಿ ಎಲ್ಲಾ ಮಾದರಿಯ ಸಾಹಿತ್ಯವನ್ನು ಹಾಡುವುದು ಕಂಡುಬರುತ್ತದೆ. ಶೃಂಗಾರ ಅಥವಾ ಪ್ರಣಯ,

ಹಾಸ್ಯ, ಕಾಮ-ಮೋಹ-ವಿರಹವೇದನೆ, ಭಕ್ತಿ, ಪ್ರಾರ್ಥನೆ, ದೇವರಪದಗಳು, ಸಾಮಾಜಿಕ ವಿಡಂಬನೆ, ಕೌಟುಂಬಿಕ ಸಮಸ್ಯೆ ಹೀಗೆ ಪ್ರೇಕ್ಷಕ ವರ್ಗದ ಆಸಕ್ತಿ-ಅಭಿರುಚಿಗಳನ್ನು ಅರ್ಥೈಸಿಕೊಂಡು ಮನರಂಜನೆಯನ್ನು ನೀಡಬಲ್ಲಂಥ ಸಾಹಿತ್ಯವನ್ನು ಕೋಲುಮೇಳಗಾರರು ತಕ್ಷಣಕ್ಕೆ ಕಟ್ಟಿ ಹಾಡುತ್ತಾರೆ. ಕೋಲಾಟದ ಪದಗಳ ಮುಖ್ಯ ಗುರಿ ಮನರಂಜನೆಯನ್ನು ಪೂರೈಕೆ ಮಾಡುವುದಾಗಿದೆ. ದೇವರ ಹಾಡುಗಳಂಥ ಗಾಂಭೀರ್ಯ ಸಾಹಿತ್ಯದ ಜೊತೆಗೆ ಶೃಂಗಾರ - ಪ್ರಣಯ, ವಿರಹ ವೇದನೆಯ ಗೀತ ಸಾಹಿತ್ಯವೂ ಇಲ್ಲಿ ಬಂದರೆ ಕೋಲಾಟವನ್ನು ವೀಕ್ಷಿಸಲು ಬಂದ ಜನರು ಅಥವಾ ಪ್ರೇಕ್ಷಕ ವರ್ಗವೂ ಅಂತಹ ಸಾಹಿತ್ಯವನ್ನು ಸ್ವೀಕರಿಸುತ್ತದೆ. ಜೊತೆಗೆ ಕೋಲು ಹುಯ್ಯುವ ಕಲಾವಿದರ ಉತ್ಸಾಹ - ವಿನೋದಗಳಿಗೆ ತಲೆದೂಗುತ್ತಾರೆ. ಕಲಾವಿದರೊಡಗೂಡಿ ಇವರು ನಕ್ಕೂ ಆ ಗಳಿಗೆಯ ಸಂತಸದ ವಿಚಾರವಾಗಿ ಮಾತ್ರ ಆ ಸಾಹಿತ್ಯದ ಮಜಲುಗಳನ್ನು ಸ್ವೀಕರಿಸುವುದಿದೆ. ಕೋಲುಮೇಳಗಾರ ಅಥವಾ ಕೋಲು ಗುರುಗಳಿಗೆ ಮತ್ತು ಕೋಲು ಹುಯ್ಯುವ ಕಲಾವಿದರಿಗೆ ಕೋಲುಪದಗಳ ಸಾಹಿತ್ಯದಲ್ಲಿ ಸಿಗುವ ಅಭಿವ್ಯಕ್ತಿ ಸ್ವಾತಂತ್ರ್ಯ ಅಪಾರವಾದುದು, ಮಿಗಿಲಾದುದು. ಆದರೂ ಕೋಲುಪದಗಳಲ್ಲಿ ಅಶ್ಲೀಲ ಎನಿಸುವಂಥ ಪದಗಳು ಹೆಚ್ಚಾಗಿ ಬರುವುದಿಲ್ಲ. ಶೀಲತೆಯ ದಾರಿಯಲ್ಲೇ ಕೋಲುಪದಗಳನ್ನು ಕೋಲುಮೇಳಗಾರರು ಕಟ್ಟಿ ಹಾಡಿರುವುದು ಕಾಣಸಿಗುತ್ತದೆ. ಆದರೆ ಪ್ರಣಯ ಸಹಿತವಾದ, ಆಕರ್ಷಕ, ಸುರಮ್ಯವಾದ ಶೃಂಗಾರ ಅಥವಾ ಪ್ರೇಮವನ್ನು ಅಭಿವ್ಯಕ್ತಿಸುವ ಹಾಡುಗಳು ಕೋಲಾಟದ ಸಾಹಿತ್ಯದಲ್ಲಿ ಮಾತ್ರ ಹೆಚ್ಚಾಗಿ ಕಾಣಸಿಗುತ್ತವೆ ಎಂಬುದು ಗಮನಾರ್ಹವಾದ ಸಂಗತಿ.

"ಕೋಲುಪದಗಳಲ್ಲಿರುವ ಮುಖ್ಯ ಕೊರತೆ ಎಂದರೆ ಅರ್ಥದ ಅಪ್ರಧಾನತೆ ಮತ್ತು ಸಾಹಿತಿಕಾಂಶಗಳ ಬಡತನ. ನೂರಕ್ಕೆ ಐವತ್ತು ಭಾಗ ಗೀತೆಗಳಲ್ಲಿ ಗೀತೆಯ ಒಂದು, ಇನ್ನೊಂದು ಭಾಗಕ್ಕೂ ಸಂಬಂಧವೇ ಇರುವುದಿಲ್ಲ. ಇದಕ್ಕೆ ಒಂದು ಕಾರಣ ಗೀತೆಗಳು. ಪದಗಳು ಪರಂಪರೆಯ ಪೀಳಿಗೆಯಲ್ಲಿ ಹಾದು ಬರುವಾಗ ಎದುರಿಸುವ ಎಡರು-ತೊಡರುಗಳಿಂದಾಗಿ, ತುಂಡುತುಂಡಾಗಿ, ಒಂದು ಗೀತೆಯ ಒಂದು ತುಂಡು ಇನ್ನೊಂದು ಗೀತೆಯ ಮತ್ತೊಂದು ತುಂಡಿನೊಡನೆ ಸೇರಿ ಹೋಗುತ್ತದೆ"(ವಸಂತಕುಮಾರ ಮಳಲಿ; ೧೯೭೮; ಪುಟ ೨೯) ಎಂದು ವಿದ್ವಾಂಸರಾದ ವಸಂತಕುಮಾರ ಮಳಲಿ ಅವರು ಕೋಲುಪದಗಳ ಸಾಹಿತ್ಯ ಮತ್ತು ಅವುಗಳ ಅರ್ಥದ ಅಪ್ರಧಾನತೆಯ ಕುರಿತಾಗಿ ನಿರೂಪಿಸಿರುವುದಿದೆ. ಅವರ ಅಭಿಪ್ರಾಯದಂತೆ ಕೋಲುಪದಗಳಲ್ಲಿ ಸಾಹಿತ್ಯ ಮತ್ತು ಅರ್ಥದ ಅಪ್ರಧಾನತೆಯು ಎದ್ದು ಕಾಣುತ್ತದೆ. ಕೋಲು ಹುಯ್ಯುವ ಕಾಲಕ್ಕೆ ಕೋಲುಪದಗಳನ್ನು ಹಾಡುತ್ತಾ ಇರುವಾಗ ಪದಗಳನ್ನು ಸರಿಯಾಗಿ ಸಂಪೂರ್ಣ ಹಾಡದೇ ಅರ್ಧ ಹಾಡನ್ನು ಹಾಡುತ್ತಾ, ಮತ್ತೆ ಬೇರೆ ಹಾಡಿನ ಪಲ್ಲವಿಯನ್ನು ಬೇರೊಂದು ಪದಕ್ಕೆ ಸೇರಿಸುತ್ತಾ ಕೋಲು ಪ್ರದರ್ಶನವು ಮುಂದುವರೆದು ಸಾಗುತ್ತದೆ. ಈ ರೀತಿ ಆದಾಗ ಕೋಲುಪದಗಳಲ್ಲಿ ಒಂದಕ್ಕೊಂದು ಹೊಂದಾಣಿಕೆಯಾಗದೆ ಅರ್ಥದ ಸ್ವರೂಪ ಕಾಣದಾಗುತ್ತದೆ ಹಾಗೂ ಸಾಹಿತ್ಯದ ವಿಚಾರದಲ್ಲಿಯೂ ಕೂಡ ಎರಡೂ ತುಂಡರಿಸಿದ ಹಾಡುಗಳಾಗಿದ್ದರಿಂದ ಸರಿಯಾದ ಅರ್ಥವನ್ನು

ನೀಡದೆ ವಿವಿಧಾರ್ಥವನ್ನು ನೀಡುತ್ತವೆ. ಹೀಗೆ ಒಂದು ಪದಕ್ಕೂ, ಮತ್ತೊಂದು ಪದಕ್ಕೂ ಅರ್ಥದ ಸ್ವರೂಪ ಹಾಗೂ ಸಾಹಿತ್ಯಿಕಾಂಶಗಳು ಒಂದಕ್ಕೊಂದು ತಾಳೆಯಾಗದೆ ಇರುವುದಕ್ಕೆ ಮಾದರಿಯಾಗಿ ಒಂದು ಕೋಲುಪದವನ್ನಿಲ್ಲಿ ಉದಾಹರಣೆಯಾಗಿ ಪ್ರಸ್ತಾಪಿಸಲಾಗಿದೆ.

ಬ್ಯಾಡವೋ ಬುದ್ಧಿಮಾನ್ಯರಿಗೆ ಮುಂದೆ ಕೇಡು ಬರುವಾದಯ್ಯ
ಸರ್ವರೆಲ್ಲರಿಗೆ ಸಲ್ಲದಾ ಬುದ್ಧಿಮಾನ್ಯರಿಗೆ ||ಪ||

ಹುತ್ತಲೇರಲೂ ಬೇಡ ಹುತ್ತಲೇರಲೂ ಬೇಡ
ಹುಣಿಸೆ ಕಡಿಯಲು ಬೇಡ ಎತ್ತಾಗಿ ಬಯಬೇಡ
ಮದ್ದು ಇಕ್ಕಲು ಬೇಡ ಮರದ ಕೊಲ್ಲಲು ಬ್ಯಾಡ

ಇದ್ದು ಹಲ್ಲಿಗನೀರು ಬಿದ್ದು ಬ್ಯಾಡಣ್ಣಾ
ಇದ್ದು ಹಲ್ಲಿಗ ನೀರು ಬಿದ್ದು ಬ್ಯಾಡ
ಬಿದ್ದೋಗ ಕಾಲಕ್ಕೆ ಸುದ್ದಿ ನೀ ತರಬೇಡ
ಮತ್ತೆ ನೀನೊಬ್ಬರನ ಕೆಡೆಸ ಬ್ಯಾಡಣ್ಣಾ

ಬ್ಯಾಡವೊ ಬುದ್ಧಿಮಾನ್ಯರಿಗೆ ಮಂದೆ
ಕೇಡು ಬರುವಾದಯ್ಯಾ ಸರ್ವರೆಲ್ಲರಿಗೆ
ಸಲ್ಲದಾ ಬುದ್ಧಿಮಾನ್ಯರಿಗೆ

ಸಂಕುತೀಸೆ ಸಂಕಾಕೇಸೆ
ಜೋಳಿಗ ತೀಸೆ ಜೋಗಿಕೇಸೇ
ಸಂಕುಲನ್ನಿ ಸಬ್ದಲಯ್ಯೆರಾ

ನವುಲೇ ಜಾನಾ
ಸಂಕುಲನ್ನಿ ಸಬ್ಧಲಯ್ಯೆರಾ |ಪ|

ಜಾಣ ಕೋಲೆ ನೆತ್ತುಗಾದು
ಕೂಡ ಮೇಸಿನ ಕುರ್ರಾದು
ಏಡಸರ್ಪಲಂಗರ್ಭಂ ಮಿರಮೀದ

ನವುಲೇ ಜಾನಾ
ಏಡಸರ್ಪಲಂಗರ್ಭಂ ಮಿರಮೀದ
ಗುಡುಗುಪುಟ್ಟೆ ಬೂದಿಗುಮ್ಮಾ

ಯೆಗನಂಬಾರೆ ನಗುನಂಜರವು
ಕಾಯಾಲು ಕಾಸೇ ಕಕ್ಕ ಸೆಟ್ಬುರಾ
ನವುಲೇ ಜಾನಾ
ಕಾಯಾಲು ಕಾಸೇ ಕಕ್ಕಸೆಟ್ಬುರಾ |೨|

ತಂದನ್ನಿ ಶರಣ ತಂದನ್ನಿ ಶರಣ
ತಾಯಿ ಹೊಟ್ಟೆಲ್ಲೆ ತಂದನ್ನಿ ಶರಣ
ಮಗನುಟ್ಟಿ ಗಿರೀಶ

ತಂದನ್ನಿ ಶರಣ
ಕೊಂಡಾಡಿಸ್ಯಾನಪ್ಪ
ತಂದನ್ನ ಶರಣ

ಮೆರೆದಾನೆ ಬೋಸಯ್ಯ
ತಂದನ್ನ ಶರಣ
ಕೊಂಡಾಡಿಸಾನಪ್ಪ

ತಂದನ್ನ ಶರಣ
ಕೋಲಾಟದವರಿಗೆ
ತಂದನ್ನ ಶರಣ

ಏನು ಕೊಟ್ಟ ಗಿರೀಶ
ತಂದನ್ನ ಶರಣ
ತಂದನ್ನ ಶರಣ

ತಂದನ್ನ ಶರಣ
ತಾಯಿ ಹೊಟ್ಟೆಲ್ಲೆ
ತಂದನ್ನ ಶರಣ

ಏನು ಕೊಟ್ಟು ಗಿರೀಶ
ತಂದನ್ನ ಶರಣ
ಉಡುತಯತ್ತಾ ತದ್ದಿಮಿ

(ವಕ್ತೃ: ಪೂಜಾರಿ ಓಬಯ್ಯ, ದೊಣಮಂಡಲಹಟ್ಟಿ; ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಈ ಕೋಲುಪದದಲ್ಲಿ ಕನ್ನಡದ ಸಾಹಿತ್ಯದಿಂದ ಪ್ರಾರಂಭವಾಗಿ ತೆಲುಗು ಸಾಹಿತ್ಯದ ಮತ್ತೊಂದು ಹಾಡು ಮಧ್ಯದಲ್ಲಿ ಸೇರಿಕೊಂಡಿರುವುದು ಕಂಡುಬಂದಿದೆ. ತದನಂತರ ಬೇರೊಂದು ಹಾಡಿನ ಸಾಹಿತ್ಯ ಕನ್ನಡದಲ್ಲಿರುವ ಕೋಲುಪದದಿಂದ ಕೊನೆಗೊಳ್ಳುತ್ತದೆ. ಹೀಗೆ ಕೋಲು ಪದಗಳಲ್ಲಿ ಕೆಲವೊಂದು ಸಂದರ್ಭಗಳಲ್ಲಿ ಹಾಡುವ ಹಾಡುಗಳಿಗೂ ಹಾಗೂ ತುಂಡು ತುಂಡಾಗಿ ತುಂಡರಿಸಿದ ಕೆಲವೊಂದು ಹಾಡುಗಳ ಸಾನಿಧ್ಯದಿಂದ ಕೋಲುಪದಗಳಲ್ಲಿನ ಸಾಹಿತ್ಯ ಬಡವಾಗುತ್ತದೆ. ಹಾಗೆಯೇ ಪ್ರಾರಂಭದಲ್ಲಿ ಬಂದಿರುವ ಕನ್ನಡ ಕೋಲುಪದದ ವಸ್ತುವೈವಿಧ್ಯತೆ, ಅರ್ಥಗಳೇ ಬೇರೆಯಾಗಿದೆ ಹಾಗೆಯೆ ಮಧ್ಯದಲ್ಲಿ ಬಂದಿರುವ ತೆಲುಗು ಹಾಡಿನ ಅರ್ಥವ್ಯವಸ್ಥೆಯೇ ಬೇರೆ

ಹಾಗೂ ಕೊನೆಯದಾಗಿ ಮುಕ್ತಾಯಗೊಳ್ಳುವ ಕನ್ನಡದ ಹಾಡಿನ ಸಾಹಿತ್ಯ ಮತ್ತು ಅರ್ಥಗಳು ಭಿನ್ನತೆಗಳಿಂದ, ವ್ಯತ್ಯಾಸಗಳಿಂದ ಕೂಡಿದೆ. ಅಲ್ಲದೆ ಭಾಷಿಕವಾಗಿಯೂ ಕನ್ನಡ-ತೆಲುಗು ಎರಡು ಭಾಷೆಗಳನ್ನು ಒಳಗೊಂಡಿದೆ. ಜೊತೆಗೆ ಭೌಗೋಳಿಕವಾಗಿ ಕರ್ನಾಟಕ- ಆಂಧ್ರ ಗಡಿ ಪರಿಸರದ ಪ್ರಾಂತಗಳಲ್ಲಿ ಈ ಕೋಲುಪದ ದೊರೆತಿರುವುದರಿಂದ ಈ ರೀತಿಯ ಭಿನ್ನತೆಗಳು ತೋರಿಬರುತ್ತವೆ. ಆದರೆ ಒಂದೇ ಕೋಲುಪದವು ಮೂರು ರೀತಿಯ ಸಾಹಿತಿಕಾಂಶಗಳು ಮತ್ತು ಎರಡು ಭಿನ್ನ ಭಾಷೆಗಳನ್ನು ಒಳಗೊಂಡಿದೆ. ಒಂದೇ ಕೋಲುಪದ ಎಂಬಂತೆ ತೋರಿ ಬಂದರೂ ಕೂಡ ಈ ಹಾಡಿನಲ್ಲಿ ಎರಡು ಭಾಷೆಯ ಮೂರು ಹಾಡುಗಳು ಒಂದರೊಳಗೊಂದು ಬೆರೆತು ಹೋಗಿವೆ.

ಪ್ರಾರಂಭದ ಗೀತೆಯಲ್ಲಿ ನೀತಿಬೋಧೆಯನ್ನು ಸಾರುತ್ತಿರುವುದು ಕಂಡುಬಂದಿದೆ. ಈ ಹಾಡಿನಲ್ಲಿ ಯಾರಿಗೂ ಕೇಡುಬಯಸಬಾರದು, ಜೊತೆಗೆ ಮರಗಳನ್ನು ಕೊಲ್ಲಬಾರದು, ಪರಿಸರವನ್ನು ನಾಶಪಡಿಸಿದರೆ ಮನುಷ್ಯನು ವಿನಾಶದಂಚಿಗೆ ಬಂದು ನಿಲ್ಲುತ್ತಾನೆ ಎಂಬುದನ್ನು ನಿರೂಪಿಸುತ್ತದೆ. ಅಲ್ಲದೆ ಇಡೀ ಊರಿಗೆ ಊರೇ, ನಾಡಿಗೆ ನಾಡೇ ನಾಶವಾದೀತು ಎಂಬ ಸಂದೇಶವನ್ನು ಸಾರುತ್ತದೆ. ಆದರೆ ಮಧ್ಯದಲ್ಲಿ ಬರುವ ತೆಲುಗು ಕೋಲುಪದಕ್ಕೂ ಪ್ರಾರಂಭದ ಹಾಡಿಗೂ ಯಾವುದೇ ರೀತಿಯ ಸಂಬಂಧವೇ ಇಲ್ಲ. ಆದರೂ ಬೇರೊಂದು ಭಾಷೆಯ, ಬೇರೊಂದು ವಸ್ತುವಿಷಯ. ಬೇರೆ ಸಾಹಿತ್ಯದ ಅಂಶಗಳನ್ನು ತೆಲುಗು ಹಾಡು ಒಳಗೊಂಡಿರುವುದು ಕಂಡು ಬಂದಿದೆ. ತೆಲುಗು ಕೋಲುಪದದಲ್ಲಿ ಒಬ್ಬ ಜೋಗಿಯ ಕುರಿತಾಗಿ ಅವನ ರೂಪ, ವೇಷಗಳನ್ನು ವರ್ಣಿಸಿರುವುದು ಕಂಡು ಬರುತ್ತದೆ. ಹಾಗೆಯೇ ಜೋಗಿಯು ತನ್ನ ವಿಶಿಷ್ಟ ಶಕ್ತಿಯಿಂದ ಹೇಗೆ ಪವಾಡಗಳನ್ನು ಮೆರೆಯುತ್ತಾನೆ ಎಂಬುದರ ವರ್ಣನೆಯೂ ಇದೆ. ಹೀಗೆ ಎರಡನೆಯ ಹಾಡಿನಲ್ಲಿ ಜೋಗಿಯ ವರ್ಣನೆ ಕಂಡು ಬಂದರೆ ಮೂರನೆಯ ಹಾಡು ಕನ್ನಡದ ಕೋಲು ಪದವಾಗಿದ್ದು, ಈ ಹಾಡು ಕೋಲುಪ್ರದರ್ಶನವನ್ನು ಅಂದಿನ ದಿನಕ್ಕಷ್ಟೇ ಮುಕ್ತಾಯ ಮಾಡುವ ಕಾಲಕ್ಕೆ ದೇವರಿಗೆ, ಗುರು ಹಿರಿಯರಿಗೆ, ತಾಯಿ-ತಂದೆಗಳಿಗೆ ಶರಣು ಮಾಡುವುದರ ಮುಖೇನ ಮುಕ್ತಾಯ ಮಾಡುವುದು ಕಂಡುಬಂದಿದೆ. ಹಾಗಾಗಿ ಈ ತುಂಡರಿಸಿದ ಕೊನೆಯ ಕೋಲುಪದದಲ್ಲಿಯೂ ಕೂಡ, ಶರಣರಿಗೂ ಶರಣು ಮಾಡುವುದರಿಂದ ಹಿಡಿದು ಊರು ದೇವರಾದ ಬೋಸೆರಂಗಸ್ವಾಮಿಗೆ, ಕೋಲಾಟದವರಿಗೆ, ತಾಯಿ ಮತ್ತು ದೇವರುಗಳಿಗೆ ಶರಣು ಮಾಡುತ್ತಾ ಅಂದಿನ ದಿನಕ್ಕೆ ಕೋಲಾಟವನ್ನು ಮುಕ್ತಾಯ ಮಾಡುವಂಥ ಸಂದರ್ಭದಲ್ಲಿ ಈ ಹಾಡನ್ನು ಪ್ರತಿ ದಿನವೂ ಹಾಡುತ್ತಾ ಕೋಲಾಟವನ್ನು ಮುಕ್ತಾಯ ಮಾಡುವುದಿದೆ. ಹೀಗೆ ಒಂದೇ ಹಾಡಿನಲ್ಲಿ ತುಂಡರಿಸಿದ ಮೂರು ಭಾಗಗಳನ್ನು ಈ ಕೋಲುಪದ ಹೊಂದಿರುವುದರಿಂದ, ಅರ್ಥದ ಅಪ್ರಧಾನತೆ ಹಾಗೂ ತಾಳೆಯಾಗದ ಸಾಹಿತ್ಯಿಕ ಅಂಶಗಳು, ವಸ್ತುವಿಷಯಗಳು ಈ ಕೋಲುಪದದಲ್ಲಿ ಕಾಣಸಿಗುತ್ತದೆ. ಹಾಗೆಯೇ ಇದು ಮುಂದುವರೆದು ಕೋಲಾಟ ಪ್ರದರ್ಶನ ಮಾಡುವ ಕಾಲಕ್ಕೆ ಕೋಲುಪದಗಳನ್ನು ಹಾಡುವಾಗ, ಒಂದು ಪದದ ಜೊತೆಗೆ ಮತ್ತೊಂದು ಪದವನ್ನು ಸೇರಿಸುತ್ತಾ, ಅರ್ಥರಹಿತವಾದ

ನುಡಿಗಳನ್ನು ಆ ಕ್ಷಣಕ್ಕೆ ತಕ್ಷಣವೇ ಸೇರಿಸಿ ಕೋಲಾಟ ಪ್ರದರ್ಶನವನ್ನು ಮುಂದುವರೆಸುವುದು ಕಂಡುಬರುತ್ತದೆ. ಕೋಲುಪದಗಳಲ್ಲಿ ಬೇರೊಂದು ನುಡಿಗಳನ್ನು ತತ್‌ಕ್ಷಣಕ್ಕೆ ಸೇರಿಸುವ ಉದ್ದೇಶವೆಂದರೆ ಕೋಲುಮೇಳಗಾರನು ಕೋಲುಪದಗಳನ್ನು ಹಾಡುವಾಗ ಅರ್ಥಸಹಿತವಾದ ಸಾಹಿತ್ಯ ಮುಗಿದಿರುತ್ತದೆ. ಆದರೆ ಕೋಲು ಹುಯ್ಯುವ ಕಾರ್ಯ ಮುಂದುವರೆದಿರುತ್ತದೆ. ಜೊತೆಗೆ ಕೋಲು ಹುಯ್ಯುವ ಕಲಾವಿದರ ಉತ್ಸಾಹ - ಆಸಕ್ತಿಗಳು ಕುಗ್ಗಿರದೆ ಇಮ್ಮಡಿಗೊಂಡಿರುವ ಕಾರಣಕ್ಕೆ ಈ ರೀತಿಯ ಅರ್ಥರಹಿತವಾದ ಅರ್ಥದ ಅಪ್ರಧಾನತೆಯ ಪದಗಳನ್ನು ಅಥವಾ ಸಾಹಿತ್ಯವನ್ನು ರಚಿಸಿ ಹಾಡುವುದು ಕಂಡುಬರುತ್ತದೆ. ಈ ರೀತಿಯ ಹಾಡುಗಳನ್ನು ಕನ್ನಡ ಕೋಲುಪದದ ಸಾಹಿತ್ಯ ಮುಗಿದ ನಂತರ ತೆಲುಗಿನ ಒಂದೆರಡು ಸಾಲುಗಳ ಜಾಡನ್ನಿಡಿದು ಸುಮಾರು ಹೊತ್ತು ಕೋಲು ಹುಯ್ಯುವುದನ್ನು ಮುಂದುವರೆಸುವುದು ಕಾಣಸಿಗುತ್ತದೆ.

ಈ ರೀತಿಯ ಕೋಲುಪದಗಳು ಕೋಲುಪ್ರದರ್ಶನ ಮಾಡುವ ಕಾಲಕ್ಕೆ ಒಂದು ಕೋಲುಪದದೊಂದಿಗೆ ಅರ್ಥರಹಿತವಾದ ಕೆಲವೊಂದು ನುಡಿಗಳನ್ನು ಸೇರಿಸಿ ಕೋಲುಪ್ರದರ್ಶನ ಮುಂದುವರೆಸಿರುವುದು ಕಂಡುಬರುತ್ತದೆ. ಹೀಗೆ ಒಂದು ಭಾಷೆಯ ಹಾಡಿನೊಳಗೆ ಮತ್ತೊಂದು ಭಾಷೆಯ ಒಂದೆರಡು ಸಾಲುಗಳು ಆಕಸ್ಮಿಕವಾಗಿ ಬಂದು ಸೇರಿದಾಗ ಈ ರೀತಿಯ ಘಟನೆಗಳನ್ನು ಭಾಷಾ ವಿಜ್ಞಾನಿಗಳು ನುಡಿಜಿಗಿತ ಎಂದು ಕರೆದಿರುವುದನ್ನು ಮನಗಾಣಬಹುದಾಗಿದೆ.

ಕನ್ನಡ ಭಾಷೆಯ ಹಾಡಿನಲ್ಲಿ ತೆಲುಗು ಭಾಷೆಯ ನುಡಿಗಳು ಸೇರಿ ನುಡಿಜಿಗಿತ ಆಗಿರುವುದಕ್ಕೆ ಉದಾಹರಣೆಯಾಗಿ -

ಯಾವ ಸೀಮೆ ಬ್ರಾಹ್ಮಣ
ಏನು ಮೋಸವ ಮಾಡಿದ |೨|
ಕೆಂಪು ಸೀರೆ ಉಡಿಸಿದ
ರಂಪು ಮಾಡಿ ಕಳಿಸಿದ |೨|
ಯಾವ ಸೀಮೆ ಬ್ರಾಹ್ಮಣ
ಏನು ಮೋಸವ ಮಾಡಿದ |೨|
ಹಸಿರು ಸೀರೆ ಉಡಿಸಿದ
ಕೆಸರು ಮಾಡಿ ಕಳಿಸಿದ
ಹಸಿರು ಸೀರೆ ಉಡಿಸಿದ
ಬಸಿರು ಮಾಡಿ ಕಳಿಸಿದ
ಯಾವ ಸೀಮೆ ಬ್ರಾಹ್ಮಣ
ಏನು ಮೋಸವ ಮಾಡಿದ
ಥೈ ಅದ್ದೈ ಥೈ ಅದ್ದೈ

(ವಕ್ತೃ: ಅಂಜಯ್ಯ, ಬಲ್ಲೂರು, ಆಲೂರು ತಾಲ್ಲೂಕು, ಕರ್ನೂಲ್ ಜಿಲ್ಲೆ)

ಹೀಗೆ ಕನ್ನಡದ ಸಾಹಿತ್ಯವಿರುವ ಕೋಲುಪದ ಮುಗಿದ ತಕ್ಷಣ ಕೋಲು ಹುಯ್ಯುವ ಕಲಾವಿದರ ಹೆಜ್ಜೆ-ಗತ್ತುಗಳನ್ನು ಮತ್ತಷ್ಟು ತೀವ್ರಗತಿಯಲ್ಲಿ ತರಲು ಬೇರೊಂದು ಭಾಷೆಯ ಹಾಡನ್ನು ಮಗದಷ್ಟು ತೀವ್ರಗತಿಯಲ್ಲಿ ಹಾಡುವುದು ಕಂಡುಬರುತ್ತದೆ. ಹಾಗೆಯೇ ಒಂದೇ ಭಾಷೆಯಲ್ಲಿಯೂ ಈ ತರಹದ ಉದಾಹರಣೆಗಳು ಕಾಣಸಿಗುತ್ತವಾದರೂ, ಈ ಸಂದರ್ಭದಲ್ಲಿ ಬೇರೆ ಬೇರೆ ಭಾಷೆಯ ಹಾಡುಗಳನ್ನು ಹಾಡುತ್ತಾ ಕೋಲುಪ್ರದರ್ಶನ ಮಾಡುವುದು ಕಂಡು ಬರುವುದಿದೆ. ಗಡಿ ಭಾಗದ ಕೋಲು ಪದಗಳಲ್ಲಂತೂ ಈ ರೀತಿಯ ನುಡಿಬೆರಕೆ, ನುಡಿಜಿಗಿತಗಳು ಸಹಜವಾಗಿ ನಡೆಯುತ್ತವೆ.

ನುಡಿಜಿಗಿತ ಮಾದರಿಯ ಕೋಲುಪದಕ್ಕೆ ಉದಾಹರಣೆ

ಮುದ್ದ ಸೂಡುಮಾ
ಮುದ್ದ ಕೋಲು ಸೂಡುಮಾ |೨|
ಮುದ್ದು ಸೂಡುಮಾ
ಮುದ್ದ ಕೋಲು ಸೂಡುಮಾ

(ವಕ್ತೃ: ಅಂಜಯ್ಯ, ಬಲ್ಲೂರು, ಆಲೂರು ತಾಲ್ಲೂಕು, ಕರ್ನೂಲ್ ಜಿಲ್ಲೆ)

ತೆಲುಗಿನ ಈ ಗೀತೆಯೂ ಈಗಾಗಲೇ ಪ್ರಸ್ತಾಪಿಸಲಾದ ಕನ್ನಡ ಕೋಲುಪದ 'ಯಾವ ಸೀಮೆ ಬ್ರಾಹ್ಮಣ, ಏನು ಮೋಸವ ಮಾಡಿದ' ಎನ್ನುವಂಥ ಹಾಡಿನ ನಂತರ ಈ ಗೀತೆಯು ಮುಂದುವರೆಯುತ್ತದೆ. ಕನ್ನಡದ ಹಾಡು ಮುಗಿದ ತಕ್ಷಣ ತೆಲುಗಿನ ಈ ನುಡಿಗಳನ್ನು ಸುಮಾರು ಹತ್ತು-ಹದಿನೈದು ಬಾರಿ ಪುನರುಕ್ತಿ ಮಾಡುತ್ತಾ ಇದೊಂದೇ ಸಾಲಿನ ಸಾಹಿತ್ಯದ ಹಾಡಿಗೆ ಕೋಲು ಪ್ರದರ್ಶನವನ್ನು ಮುಂದುವರೆಸುತ್ತಾರೆ. ತೆಲುಗಿನ ಹಾಡಿಗೂ ಕನ್ನಡದ ಹಾಡಿನ ಸಾಹಿತ್ಯಿಕ ಅಂಶಗಳಿಗೂ ಒಂದಕ್ಕೊಂದು ತಾಳೆಯಾಗುವುದಿಲ್ಲ. ಹಾಗೆಯೇ ಹಾಡಿನ ಅರ್ಥ ಪ್ರಧಾನತೆಯಲ್ಲಾಗಲೀ, ಸಾಹಿತ್ಯದಲ್ಲಾಗಲಿ ಅಥವಾ ವಸ್ತುವಿಷಯದಲ್ಲಾಗಲಿ ಒಂದಕ್ಕೊಂದು ಸಂಬಂಧವಿಲ್ಲ. ಹೀಗೆ ಗಡಿನಾಡ ಕೋಲುಪದಗಳಲ್ಲಿ ಈ ರೀತಿಯ ಅರ್ಥದ ಅಪ್ರಧಾನತೆಯುಳ್ಳ ಹಲವಾರು ಕೋಲುಪದಗಳು ಗಡಿನಾಡ ಪರಿಸರದಲ್ಲಿ ಮತ್ತು ಗಡಿಯಾಚೆಯ ಪರಿಸರದ ಪದಗಳಲ್ಲಿ ಕೋಲಾಟ ಪ್ರದರ್ಶನ ಮಾಡುವ ಕಾಲಕ್ಕೆ ಹಾಡುತ್ತಾ ಕೋಲು ಹುಯ್ಯುವುದು ಕಂಡುಬರುತ್ತದೆ. ಜೊತೆಗೆ 'ಮುದ್ದ ಸೂಡುಮಾ ಮುದ್ದ ಕೋಲು ಸೂಡುಮಾ' ಎನ್ನುವಂಥ ಈ ಸಾಲನ್ನು ಪುನಾರಾವರ್ತಿಸುವುದರ ಜೊತೆಗೆ ಇದೇ ಸಾಲನ್ನು ಹಾಡುವ ಧಾಟಿಯಲ್ಲಿ ವೈವಿಧ್ಯತೆಗಳು ಕಂಡುಬರುತ್ತವೆ. ಹಾಗೆಯೇ ಹಾಡುವಂಥ ಶೈಲಿಯಲ್ಲಿ ಎರಡು ಮೂರು ರೀತಿಯಲ್ಲಿ ಹಾಡುತ್ತಾ ಕೋಲು ಹುಯ್ಯುವುದು ಕಂಡು ಬರುತ್ತದೆ. ಹೀಗೆ ಕೋಲುಪದಗಳಲ್ಲಿ ಸಾಹಿತ್ಯ ಸಹಿತವಾದ ಹಾಡುಗಳನ್ನು ಕೋಲು ಹುಯ್ಯುವಾಗ ಹಾಡುವುದರ ಜೊತೆಗೆ ಸಾಹಿತ್ಯರಹಿತವಾದ ಅಥವಾ ಅರ್ಥರಹಿತವಾದ ಪದಗಳನ್ನು ಹಾಡುವುದು ಕಂಡುಬರುತ್ತದೆ.

ಕೋಲುಪದಗಳನ್ನು ಹಾಡುವ ಕೋಲುಗುರು ಅಥವಾ ಕೋಲುಮೇಳಗಾರ ಕೋಲುಪ್ರದರ್ಶನ ಮಾಡುವ ಕಾಲಕ್ಕೆ ಯಾವುದೇ ರೀತಿಯ ಅಡೆತಡೆಗಳು ಬಾರದಿರಲಿ ಎಂದೂ ಮತ್ತು ನಿರಂತರತೆಯನ್ನು ಉಳಿಸಿಕೊಳ್ಳುವ ಸಲುವಾಗಿ ಜೊತೆಗೆ ಕೋಲು ಹುಯ್ಯುವ ಕಲಾವಿದರ ಆಸಕ್ತಿ - ಅಭಿರುಚಿಗಳನ್ನು ಇಮ್ಮಡಿಗೊಳಿಸಲು ಈ ರೀತಿಯ ಅರ್ಥರಹಿತವಾದ ಕೋಲುಪದಗಳನ್ನು ಮತ್ತು ಹಾಸ್ಯಲೇಪಿತ ಸಾಹಿತ್ಯಿಕ ಅಂಶಗಳನ್ನು ಸೇರಿಸಿ ಹಾಡುವುದು ಕಂಡುಬರುತ್ತದೆ. ಹಾಗೆಯೇ ಕೋಲು ಹುಯ್ಯುವ ಕಲಾವಿದರ ಕುಣಿತ ಮತ್ತು ಕೋಲುಕಡ್ಡಿಗಳ ನಾದ-ನಿನಾದಗಳಿಗೆ ಅನುಗುಣವಾಗಿ ಹಾಡುಗಳನ್ನು ಅಥವಾ ಪದಗಳನ್ನು ಜೋಡಿಸಿ ಹಾಡುವುದರಲ್ಲಿಯೇ ಆಸಕ್ತರಾಗುವುದರಿಂದ ಅವರು, ಹಾಡಿನ ಅರ್ಥ ಪ್ರಧಾನತೆಗಾಗಲಿ ಅಥವಾ ಸಾಹಿತ್ಯಿಕ ಅಂಶಗಳಿಗಾಗಲಿ ಅಷ್ಟೊಂದು ಗಮನ ಕೊಡುವುದಿಲ್ಲ.

ಕೋಲುಪದಗಳನ್ನು ಹಾಡುವ ಕೋಲುಮೇಳಗಾರರಿಗೆ ಅಥವಾ ಕೋಲು ಹುಯ್ಯುವ ಕಲಾವಿದರಿಗೆ ಹಾಡಿನ ರಾಗ ಮತ್ತು ಕೋಲಿನ ಪೆಟ್ಟುಗಳು ಮುಖ್ಯವೇ ಹೊರತು ಹಾಡಿನಲ್ಲಿರುವ ಸಾಹಿತ್ಯಿಕ ಅಂಶಗಳಲ್ಲ. ಎಂತಹುದೇ ಕೋಲುಪದವಿರಲಿ ಅಲ್ಲಿ ಕೋಲಿನ ಪೆಟ್ಟುಗಳು ಮತ್ತು ಕುಣಿತ, ಹಾಡಿನ ರಾಗಗಳು ಸಾಹಿತ್ಯಿಕ ಅಂಶಗಳಲ್ಲಿನ ಕೊರತೆಯನ್ನು ನೀಗಿಸುತ್ತವೆ. ಅಲ್ಲದೆ ಕೋಲುಪದಗಳಲ್ಲಿ ಅನೇಕ ರಾಗಕ್ಕೆ ತಕ್ಕ ರಚನೆಗಳಿರುತ್ತವೆ ಹಾಗೂ ಇಲ್ಲಿ ನಾದಶಕ್ತಿ ಮುಖ್ಯ ವಾಗಿರುತ್ತದೆ. ಹೀಗೆ ಕೋಲುಪದಗಳಲ್ಲಿನ ಸಾಹಿತ್ಯಿಕ ಬಡತನವನ್ನು ಕೋಲಿನ ಪೆಟ್ಟುಗಳು, ಕೋಲು ಹುಯ್ಯುವ ಕಲಾವಿದರ ಕುಣಿತ, ಕೋಲುಪದಗಳ ರಾಗಗಳು ಸೇರಿಕೊಂಡು ಸಂಗೀತವಾಗಿ ಮಾರ್ಪಾಟ್ಟು ಸಾಹಿತ್ಯಾಂಶದ ಕೊರತೆಯನ್ನು ನೀಗಿಸುತ್ತವೆ. ಇದರ ಜೊತೆಗೆ ಕೋಲುಪದಗಳ ಹಲವು ಪದಗಳಲ್ಲಿ ಉತ್ತಮ ರೀತಿಯ ಸಾಹಿತ್ಯಿಕ ಅಂಶಗಳು ತ್ರಿಪದಿಯ ದೇಸಿ ಮಟ್ಟುವಿನಲ್ಲಿ ಒಳಗೊಂಡಿರುತ್ತವೆ.

### ೭.೧. ಪ್ರಾರ್ಥನಾ ಕೋಲುಪದಗಳ ಸಾಹಿತ್ಯ

ಕೋಲಾಟವನ್ನು ಆರಂಭಿಸುವ ಕಾಲಕ್ಕೆ ದೇವರ ಬಗೆಗೆ ಅಥವಾ ಸಾಂಸ್ಕೃತಿಕ ನಾಯಕ-ನಾಯಕಿಯರನ್ನು ಸ್ತುತಿಸುವುದರ ಮೂಲಕ ಪ್ರಾರ್ಥನಾ ಗೀತೆಯನ್ನು ಹಾಡುತ್ತಾ ಕೋಲಾಟವನ್ನು ಪ್ರದರ್ಶನ ಮಾಡುವುದು ಕಾಣಸಿಗುತ್ತದೆ. ಪ್ರಾರ್ಥನಾಗೀತೆಯನ್ನು ಹಾಡುವುದಕ್ಕೂ ಮೊದಲಿಗೆ ಕಲಾವಿದರು ವೃತ್ತಾಕಾರವಾಗಿ ಅಥವಾ ಮಂಡಲಾಕಾರವಾಗಿ ನಿಲ್ಲುವರು. ಮಧ್ಯದಲ್ಲಿ ಕೋಲುಕಡ್ಡಿಗಳನ್ನು ಇಟ್ಟು ಪೂಜಿಸಿ ತಮಗೆ ಕೋಲು ಕಲಿಸಿದ ಕೋಲು ಗುರುಗಳಿಗೆ ಅಥವಾ ಕೋಲುಮೇಳಗಾರನಿಗೆ ವಂದಿಸುತ್ತಾರೆ. ಹೀಗೆ ಮಾಡಿದ ನಂತರ ವಿಘ್ನವಿನಾಶಕನಾದ ಗಣಪತಿಯನ್ನು ಸ್ತುತಿಸುವುದರೊಂದಿಗೆ ಮೊದಲು ಮಾಡಿ ಇಷ್ಟದೈವ, ಸಾಂಸ್ಕೃತಿಕ-ನಾಯಕ-ನಾಯಕಿಯರ ಕುರಿತು, ಗ್ರಾಮದೇವತೆ, ಪಾರ್ವತಿ, ಚೌಡಮ್ಮ, ದುರುಗಮ್ಮ, ಹುಲಿಗೆಮ್ಮ, ಗಾಳೆಮ್ಮ ಮುಂತಾದ ದೇವರುಗಳ ಸ್ತುತಿ ಮಾಡುವುದರೊಂದಿಗೆ ಕೋಲಾಟ ಪ್ರಾರಂಭಿಸುವರು.

## ಪ್ರಾರ್ಥನಾ ಕೋಲುಪದದ ಸಾಹಿತ್ಯ

ಮೊದಲ ನೆನದೇನ ಗಜಮುಖ ದಯನಾ
ಕೊಡು ಸ್ವಾಮಿ ಕೋಲಿನ ಮತಿಗಳನಾ
ಕೊಟ್ಟೂರು ಬಸವಂಗೆ ಹತ್ತು ಟೆಂಗಿನಕಾಯಿ
ಮತ್ತೆ ಸೂರಡಿಕೆ ಬಿಳಿ ಎಲೆಯು |೨|

ಮೊದಲ ನೆನದೇನ ಗಜಮುಖ ದಯನಾ
ಕೊಡು ಸ್ವಾಮಿ ಕೋಲಿನ ಮತಿಗಳನಾ
ಕೊಟ್ಟೂರು ಬಸವಂಗೆ ಹತ್ತು ಟೆಂಗಿನಕಾಯಿ
ಮತ್ತೆ ಸೂರಡಿಕೆ ಬಿಳಿ ಎಲೆಯು |೨|

ಮೊದಲ ನೆನದೇನ ಗಜಮುಖ ದಯನಾ
ಕೊಡು ಸ್ವಾಮಿ ಕೋಲಿನ ಮತಿಗಳನಾ
ಆಲೂರು ಬಸವಂಗೆ ಒಂದಾರು ಟೆಂಗಿನಕಾಯಿ
ಮತ್ತೆ ಸೂರಡಿಕೆ ಬಿಳಿ ಎಲೆಯು |೨|

ಮೊದಲ ನೆನದೇನ ಗಜಮುಖ ದಯನಾ
ಕೊಡುಸ್ವಾಮಿ ಕೋಲಿನ ಮತಿಗಳನಾ
ಉಜ್ಜಿನಿ ಸಿದ್ದಪ್ಪಂಗೆ ಎಂಟೆ ಟೆಂಗಿನಕಾಯಿ
ಮತ್ತೆ ಸೂರಡಿಕೆ ಬಿಳಿ ಎಲೆಯು |೨|

ಮೊದಲ ನೆನದೇನ ಗಜಮುಖ ದಯನಾ
ಕೊಡು ಸ್ವಾಮಿ ಕೋಲಿನ ಮತಿಗಳನಾ ||ಪ||

(ವಕ್ತೃ: ಚಂದ್ರಯ್ಯ, ಮಾಕನಡಕು, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ)

ಈ ಕೋಲುಪದವು ಚಿತ್ರದುರ್ಗದ ಚಳ್ಳಕೆರೆ, ಮೊಳಕಾಲ್ಮೂರು ಹಾಗೂ ಬಳ್ಳಾರಿ ಕೂಡ್ಲಿಗಿಯ ಪರಿಸರದಲ್ಲಿ ಹೆಚ್ಚು ಪ್ರಚಲಿತದಲ್ಲಿದೆ. ಈ ಹಾಡಿನಲ್ಲಿ ಗಣಪತಿಯನ್ನು ಸ್ತುತಿಸುವುದರ ಮುಖೇನ ಮೊದಲ್ಗೊಂಡು ಆಯಾ ಪ್ರಾಂತಗಳಲ್ಲಿರುವ ಇಷ್ಟ ದೈವಗಳನ್ನು ಪ್ರಾರ್ಥಿಸುವುದು ಕಂಡುಬಂದಿದೆ. ಗಣಪತಿಯ ನಂತರ ಕೊಟ್ಟೂರು ಬಸವನನ್ನು, ಆಲೂರು ಬಸವ ಹಾಗೂ ಉಜ್ಜಿನಿಯ ಸಿದ್ದಪ್ಪ ಎನ್ನುವಂಥ ಇಷ್ಟ ದೈವಗಳನ್ನು ಸ್ತುತಿಸುತ್ತಾ, ಕೋಲಾಟವಾಡುವುದು ಈ ಪ್ರಾಂತಗಳಲ್ಲಿ ಕಂಡು ಬರುತ್ತದೆ. ಇದೇ ಮಾದರಿಯ ಪ್ರಾರ್ಥನಾ ಸಾಹಿತ್ಯದ ಕೋಲುಪದವೊಂದನ್ನು ಬಳ್ಳಾರಿಯ ಸಂಡೂರು ಮತ್ತು ಹೊಸಪೇಟೆಯ ಸುತ್ತಮುತ್ತಲ ಪ್ರಾಂತಗಳಲ್ಲಿ ಸಾಹಿತ್ಯಿಕವಾಗಿ ಕೆಲವೊಂದು ಭಿನ್ನತೆ ಅಥವಾ ಮಾರ್ಪಾಡುಗಳನ್ನು ಮಾಡಿಕೊಂಡು ಕೋಲುಪ್ರದರ್ಶನ ಮಾಡುವ ಕಾಲಕ್ಕೆ ಹಾಡುತ್ತಿರುವುದು ಕಂಡುಬಂದಿದೆ.

## ಪ್ರಾರ್ಥನಾ ಕೋಲುಪದ

ಮೊದಲು ನೆನೆದೆನು ಗಜಮುಖ ದಯನಾ
ಸೊಬಗಿನ ಸೊಂಡೂರು ಗಣೇಶನ

ಗುಡ್ಡದೊಳಗಿರುವ ದೊಡ್ಡಕುಮಾರಸ್ವಾಮಿ
ಮತ್ತೇ ನೂರಡಿಕೆ ಬಿಳಿಯಾಲೇ ತಾಗೊಂಡು
ಕೋಲಿಗೆ ಕೊಡುಸ್ವಾಮಿ ಮುತ್ತುಗಳನು

ಊರೊಳಗಿರುವ ತಾಯಿ ಗಾಳೆಮ್ಮಗೆ
ಮತ್ತೇ ನೂರಡಿಕೆ ಬಿಳಿಯಾಲೆ ತಾಗೊಂಡು
ಕೋಲಿಗೆ ಕೊಡು ಸ್ವಾಮಿ ಮುತ್ತುಗಳನು

ಊರೊಳಗಿರುವ ತಾಯಿ ದುರುಗಮ್ಮಗೆ
ಮತ್ತೇ ನೂರಡಿಕೆ ಬಿಳಿಯಾಲೇ ತಾಗೊಂಡು
ಕೋಲಿಗೆ ಕೊಡು ಸ್ವಾಮಿ ಮುತ್ತುಗಳನು

ಗುಡ್ಡದೊಳಗಿರುವ ದೊಡ್ಡ ಕುಮಾರಸ್ವಾಮಿ
ಮತ್ತೇ ನೂರಡಿಕೆ ಬಿಳಿಯಾಲೆ ತಾಗೊಂಡು
ಕೋಲಿಗೆ ಕೊಡು ಸ್ವಾಮಿ ಮುತ್ತುಗಳನು

(ವಕ್ತೃ: ಸಿದ್ದಪ್ಪ, ಯಶವಂತನಗರ, ಸಂಡೂರು, ಗುರುವಯ್ಯ, ಕಮಲಾಪುರ, ಹೊಸಪೇಟೆ)

ಚಿತ್ರದುರ್ಗದ ಮೊಳಕಾಲ್ಮೂರು, ಬಳ್ಳಾರಿಯ ಕೂಡ್ಲಿಗಿಯ ಪ್ರಾರ್ಥನಾ ಹಾಡಿಗೂ ಇದೇ ಬಳ್ಳಾರಿಯ ಸಂಡೂರು ಮತ್ತು ಹೊಸಪೇಟೆಯಲ್ಲಿ ಸಂಗ್ರಹಿಸಿದ ಪ್ರಾರ್ಥನಾ ಕೋಲುಪದಕ್ಕೂ ಕೆಲವು ಪ್ರಾದೇಶಿಕ ಭಿನ್ನತೆಗಳು ತಲೆದೋರಿವೆ. ಅವುಗಳೇನೆಂದರೆ ಮೊಳಕಾಲ್ಮೂರು - ಕೂಡ್ಲಿಗಿ ಭಾಗದ ಗೀತೆಯಲ್ಲಿ 'ಮತ್ತೆ ಸೂರಡಿಕೆ ಬಿಳಿ ಎಲೆಯು' ಎಂದಿದ್ದರೆ, ಸಂಡೂರು - ಹೊಸಪೇಟೆಯಲ್ಲಿ ಸಂಗ್ರಹಿಸಿದ ಕೋಲುಪದದಲ್ಲಿ "ಮತ್ತೆ ಸೂರಡಿಕೆ ಬಿಳಿಯಾಲೇ ತಾಗೊಂಡು" ಎಂದಾಗಿದೆ. ಅಂದರೆ ಅಲ್ಲಿ 'ಮತ್ತೆ' ಎಂಬುದು ಇಲ್ಲಿ 'ಮತ್ತೇ' ಎಂಬುದಾಗಿ ದೀರ್ಘೀಕರಣಗೊಂಡಿರುವುದು ಕಾಣಬರುತ್ತದೆ. ಹಾಗೆ ಆ ಗೀತೆಯಲ್ಲಿ 'ಸೂರಡಿಕೆ' ಎಂದಿದ್ದರೆ ಸಂಡೂರು - ಹೊಸಪೇಟೆ ಭಾಗದ ಕೋಲುಪದದಲ್ಲಿ 'ನೂರಡಿಕೆ' ಎಂಬುದಾಗಿ ಸಂಖ್ಯಾವಾಚಕವಾಗಿರುವುದು ಕಂಡು ಬಂದಿದೆ. ಹೀಗೆ ಒಂದೇ ರೀತಿಯ ಪ್ರಾರ್ಥನಾ ಗೀತೆಯ ಕೋಲುಪದವು ಹೇಗೆ ಪ್ರಾದೇಶಿಕವಾಗಿ ಭಿನ್ನತೆಗಳನ್ನು ಒಳಗೊಂಡಿರುತ್ತವೆ ಎಂಬುದಕ್ಕೆ ಈ ಕೋಲುಪದವು ಸೂಕ್ತ ಉದಾಹರಣೆಯಾಗಿ ತೋರಿಬರುತ್ತದೆ. ಹೀಗೆ ಕೋಲುಪದಗಳಲ್ಲಿ ಕೋಲಾಟವನ್ನು ಪ್ರಾರಂಭ ಮಾಡುವ ಕಾಲಕ್ಕೆ ಪ್ರಾರ್ಥನಾ ಗೀತೆ ಹಾಡುವುದು ಸಂಪ್ರದಾಯ. ಪ್ರಾರ್ಥನಾ ಗೀತೆಗಳಲ್ಲೂ ಕೂಡ ಕೋಲುಪದಗಳಲ್ಲಿ ಗಣಸ್ತುತಿಯೊಂದಿಗೆ ಆರಂಭವಾಗಿ ಇಷ್ಟ ದೈವಗಳಾದ ಈಶ್ವರ ಪಾರ್ವತಿ, ಕೃಷ್ಣ, ರಾಮ ಹೀಗೆ ಅನೇಕ ದೇವಾನುದೇವತೆಗಳನ್ನು ಸ್ತುತಿಸುತ್ತಾರೆ.

ಕೋಲಾಟವನ್ನು ಆರಂಭ ಮಾಡುವ ಕಾಲಕ್ಕೆ ಗಣಸ್ತುತಿ ಅಥವಾ ಪ್ರಾರ್ಥನಾ ಪದವನ್ನು ಹಾಡುವುದು ಸಂಪ್ರದಾಯ. ಇದು ನೆರೆಯ ರಾಜ್ಯವಾದ ಆಂಧ್ರಪ್ರದೇಶದ ಗಡಿಪ್ರಾಂತ ಪರಿಸರದಲ್ಲೂ ಕಂಡುಬರುತ್ತದೆ. ಗಡಿ ಜಿಲ್ಲೆಯಾದ ಕರ್ನೂಲು ಜಿಲ್ಲೆಯ ಆಲೂರು, ಹೊಳಗುಂದ, ಬಲ್ಲೂರು, ಕೋಗಿಲತೋಟ, ಸಿದ್ಧಾಪುರಂ ಮುಂತಾದೆಡೆ ಕ್ಷೇತ್ರಕಾರ್ಯ ಮಾಡಿ ಸಂಗ್ರಹಿಸಿದ ಕೋಲುಪದಗಳಲ್ಲಿ ಪ್ರಾರ್ಥನಾ ಗೀತೆಯೊಂದನ್ನು ಸಂಗ್ರಹಿಸಲಾಗಿದೆ. ಈ ಗೀತೆಯು ದೇವರುಗಳನ್ನು ಸ್ತುತಿಸುವಂಥ ಒಂದು ಗಣಸ್ತುತಿಯ ಕೋಲುಪದ. ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಈ ಪ್ರಾಂತಗಳಲ್ಲಿ ತೆಲುಗು ಮಾತೃಭಾಷೆಯಾದರೂ ಕೂಡ ಕನ್ನಡ ಕೋಲುಪದಗಳನ್ನು ತೆಲುಗು ಪದಗಳಷ್ಟೇ ಸರಾಗವಾಗಿ ಹಾಡುತ್ತಾರೆ. ಈ ಪ್ರಾರ್ಥನಾ ಗೀತೆಯೂ ತೆಲುಗು ನಾಡಿನಲ್ಲಿ ದೊರೆತ ಕನ್ನಡದ ಗಣಸ್ತುತಿಯ ಹಾಡು ಎಂಬುದು ಈ ಹಾಡಿನ ವಿಶೇಷತೆ.

ತೆಲುಗು ನಾಡಿನಲ್ಲಿ ದೊರೆತ ಕನ್ನಡದಲ್ಲಿರುವ ಪ್ರಾರ್ಥನಾಗೀತೆಯ ಸಾಹಿತ್ಯ ಗಣಸ್ತುತಿಯ ಕೋಲುಪದ

ಹೈರೆ ಗಣೇಶ ಮಾಡುವೆ ನಿಮ
ಗಾನ ಭಕ್ತರು ನಾವು ಸಲಹು
ಗಣೇಶ ಕೊಡೊ ಮುಕ್ತಿಗಾನ |೨|

ನಮ್ಮ ಗಣೇಶ ಇಲಿಯ ಮೇಲೆ
ಕುಣಿತ ಥೈ ಥೈ ಥೈ ಥೈ ಕುಣಿಯುತ
ಬಂದನು ಗಣಪತಿ ಗಣರಾಯ |೨|

ಗರಕ ಪತ್ರಿಯೋಳ್ ಗಣನಾಯಕ
ಗಜಮುಖ ಧರಿಸಿದ ಪಂಡಿತ ಕೇಳ್
ಗಜಮುಖ ಧರಿಸಿದ ಪಂಡಿತ
ದನನಾನ ನನ ನನನ ದೈತ್ಯರ ನುಡಿಗೆ
ಪಾರ್ವತಿ ಕುಂತಳ ತಾ ಮೆರಕ
ಇದ್ಯೆ ಬುದ್ಧಿ ಕಲಿತುಕೊಂಡು
ಇಲಿ ಮೇಲೆ ಹೇರಿಕೊಂಡು
ಮೋಜು ಮಾಡುತ ಬಂದ ಗಣರಾಯ
ಕೇಳು ಮೋಜು ಮಾಡುತ ಬಂದ ಗಣರಾಯ
ನಾಗ್ಡಿ ದಿಮ್ಮಿ ನೀಗ್ಡಿದಿಮ್ಮಿ ದಿಮ್ಡ್ತಕ ಥೈ ಥೈ
ಜಣುತ ಕುಣಿತ ಬಂದ ಗಣರಾಯ
ನಮ್ಮ ಗಣೇಶ ಇಲಿಯ ಮೇಲೆ
ಕುಣಿತ ಥೈ ಥೈ ಥೈ ಥೈ ಕುಣಿಯುತ
ಬಂದನು ಗಣಪತಿ ಗಣರಾಯ

ಮಟ ಮಟ ಮಟ ಮಟ
ಮಟ ಮಟ ಮಟ ಮಟ
ಮಧ್ಯಾಹ್ನದೊಳ ಮೈ ಪೂಜೆ ಗೊಮ್ಮುತಾನೆ
ಗಣರಾಯ ಕೇಳ್ ಪೂಜೆ ಗೊಮ್ಮುತಾನೆ ಗಣರಾಯ
ಮಕ ಮಕ ಮಕ ಮಕ ಮಲ್ಲಿಗೆ
ಹೂವಿನ ಕ್ಯಾದಿಗೆ ಗೊನೆಗಳ ವಾಸಿನ |೨|
ನಮ್ಮ ಗಣೇಶ ಇಲಿಯ ಮೇಲೆ
ಕುಣಿತ ಥೈ ಥೈ ಥೈ ಥೈ ಕುಣಿಯುತ
ಬಂದನು ಗಣಪತಿ ಗಣರಾಯ
ಇದ್ಯೆ ಬುದ್ಧಿ ಕಲಿತುಕೊಂಡು
ಇಲಿ ಮೇಲೆ ಹೇರಿಕೊಂಡು
ಮೋಜು ಮಾಡುತ ಬಂದ ಗಣರಾಯ
ಕೇಳು ಮೋಜು ಮಾಡುತ ಬಂದ ಗಣರಾಯ
ನಮ್ಮ ಗಣೇಶ ಇಲಿಯ ಮೇಲೆ ಕುಣಿತ

(ವಕ್ತೃ: ಗಾದೆಪ್ಪ, ಹೊಳಗುಂದಿ, ಆಲೂರು ತಾಲ್ಲೂಕು, ಕರ್ನೂಲು ಜಿಲ್ಲೆ)

ಹೀಗೆ ಕೋಲಾಟ ಪ್ರದರ್ಶನ ಮಾಡುವ ಪ್ರಾರಂಭದಲ್ಲಿ ಊರಿನ ಸುತ್ತಮುತ್ತಲಿನ ದೇವರುಗಳನ್ನು ಸಾಂಸ್ಕೃತಿಕ ನಾಯಕ - ನಾಯಕಿಯರನ್ನು, ಗ್ರಾಮದೇವತೆಗಳನ್ನು ಹಾಗೂ ಇಷ್ಟದೈವಗಳನ್ನು ನೆನೆಯುತ್ತಾ ಕೋಲುಪದಗಳಲ್ಲಿ ಸ್ತುತಿಸುವುದು ಕಂಡುಬರುತ್ತದೆ. ಹಬ್ಬ-ಹರಿದಿನ, ಜಾತ್ರೆ, ಸಮ್ಮೇಳನ ರಾಷ್ಟ್ರೀಯ ನಾಯಕರ ಜಯಂತ್ಯೋತ್ಸವಗಳ ಸಂದರ್ಭಗಳಲ್ಲಿ ದೇವರ ಹಾಡುಗಳನ್ನು ಹಾಡುತ್ತಾರೆ. ದೇವರ ಹಾಡುಗಳನ್ನು ಪ್ರಾರ್ಥನಾ ಗೀತೆಗಳ ಮುಖೇನ ಗಣಸ್ತುತಿಯ ಪದಗಳನ್ನು ಹಾಡುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಗಣಸ್ತುತಿ ಅಥವಾ ದೇವರು ಕುರಿತ ಪ್ರಾರ್ಥನಾಗೀತೆಗಳನ್ನು ಹಾಡಲು ಕಾರಣ ಕೋಲಾಟ ಪ್ರದರ್ಶನ ಮಾಡುವಾಗ ತಾಳ, ಮೇಳ ತಪ್ಪಬಾರದು ಕೋಲುಕಡ್ಡಿಗಳು ಯಾವುದೇ ಕಾರಣಕ್ಕೂ ಮುರಿಯಬಾರದು ಎಂಬ ಉದ್ದೇಶವಾಗಿದೆ.

ಜನಪದ ಕಲೆಗಳಲ್ಲಿ ಕೋಲಾಟವಿರಲಿ, ಬಯಲಾಟವಿರಲಿ, ಕೋಲೆ ಬಸವನಾಟ, ಭಜನೆಪದ ಯಾವುದೇ ಪ್ರಕಾರವಿರಲಿ, ಪ್ರದರ್ಶನವನ್ನು ಮಾಡುವ ಮೊದಲಲ್ಲಿ ಸಾಂಪ್ರದಾಯಿಕವಾಗಿ ಸರ್ವವಿಘ್ನ ನಿವಾರಕನಾದ ಗಣಪತಿಯನ್ನು ಪೂಜಿಸುವ, ಸ್ತುತಿಸುವ, ಪ್ರಾರ್ಥಿಸುವ ಪದ್ಧತಿ ಕಂಡುಬರುತ್ತದೆ. ನಾವು ಮಾಡುತ್ತಿರುವ ಯಾವುದೇ ಕಾರ್ಯವಾಗಲಿ ಆದಿಯಿಂದ ಅಂತ್ಯದವರೆಗೆ ಯಾವುದೇ ರೀತಿಯ ಅಡೆ-ತಡೆಗಳು ಬಾರದಿರಲಿ, ಎಲ್ಲವೂ ಸುಸೂತ್ರವಾಗಿ ನಡೆಯಲಿ ಎಂಬುದೇ ಗಣಸ್ತುತಿ ಮತ್ತು ದೇವರುಗಳನ್ನು ಪ್ರಾರ್ಥನೆ ಮಾಡುವುದರ ಉದ್ದೇಶವಾಗಿರುತ್ತದೆ.

### ೭.೨. ಶೃಂಗಾರ ಕೋಲುಪದಗಳ ಸಾಹಿತ್ಯ

ದೇಸಿಮಟ್ಟಿನ ಒಂದು ಪ್ರಕಾರ ತ್ರಿಪದಿಯಲ್ಲಿ ಕೋಲುಪದಗಳು ಅತಿ ಹೆಚ್ಚಾಗಿ ಒಳಗೊಂಡಿರುವುದು ಕಂಡುಬರುತ್ತದೆ. ಹಾಗೆಯೇ ಈ ಕೋಲುಪದಗಳಲ್ಲಿ ಶೃಂಗಾರ ಅಥವಾ ಪ್ರಣಯಕ್ಕೆ

ಸಂಬಂಧಿಸಿದ ಸಾಹಿತ್ಯವಿರುವ ಕೋಲುಪದಗಳು ತುಂಬಾ ವಿಪುಲವಾಗಿ ಕಂಡುಬರುತ್ತವೆ. ಕರ್ನಾಟಕ-ಆಂಧ್ರ ಗಡಿ ಪರಿಸರದ ಕೋಲುಪದಗಳಲ್ಲಿ ಅತಿ ಹೆಚ್ಚಾಗಿ ಶೃಂಗಾರಕ್ಕೆ ಸಂಬಂಧಿಸಿದ ಸಾಹಿತ್ಯವನ್ನು ಗಡಿ ಪ್ರಾಂತಗಳಲ್ಲಿ ಹಾಡುವುದು ಕಂಡುಬಂದಿದೆ. ಹಾಗೆಯೆ ಗೆಳೆಯ-ಗೆಳತಿಯರ, ವಿರಹ-ವೇದನೆ, ಗಂಡ-ಹೆಂಡತಿಯರ ಸರಸ ಸಲ್ಲಾಪವೂ ಗಡಿ ಭಾಗದ ಕೋಲುಪದಗಳಲ್ಲಿ ಮತ್ತು ಗಡಿಯಾಚೆಯ ಕೋಲುಪದಗಳಲ್ಲೂ ಕಾಣಸಿಗುತ್ತದೆ. ಉದಾಹರಣೆಗೆ ಗೆಳೆಯ - ಗೆಳತಿಯರ ವಿರಹ-ವೇದನೆಗೆ ಸಂಬಂಧಿಸಿದ ಕೋಲುಪದದ ಸಾಹಿತ್ಯ.

ಗೆಣೆಯ-ಗೆಣತಿ ಹೊಡೆದಾಡಿ
ಗೆಣತಿ ಓಡಿ ಹೋದಳಣ್ಣಾ
ಗೆಳೆಯಾನಾದ್ರೂ ಪರದೇಸಿ
ಹೊತ್ತು ಮುಣುಗಿ ಸಂಜೆಯಾಗಿ
ದುಃಖಮಾಡಿ ಮನುಗುತಾಳೆ
ಮತ್ತೆ ಜಮಾಖಾನಾಸಿ |೨|

ಆಕೆ ಬಂದು ಹೊರಗೆ ನಿಂತು
ಕನಸಿನಲ್ಲಿ ಕರೆದಂಗಾದ್ರೂ
ಆಕೆನಾದ್ರೂ ಮರೆತಿಲ್ಲ
ನಿದ್ದೆ ಗಣ್ಣಲ್ಲಿ ಎದ್ದು ಹೋಗಿ
ಗೋಡೆ ಹತ್ತಿ ನೋಡಿದರೂ
ಸುಂದ್ರುವಾಣಿ ಸುಡಲಿಲ್ಲ
ಅಜ್ಜೋ ಜಂತಕಾ

(ವಕ್ತೃ: ಗೋಪಾಲಯ್ಯ, ಹಿರೇಹಳ್ಳಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಈ ಕೋಲುಪದವು ಗೆಳೆಯ ಮತ್ತು ಗೆಳತಿಯರ ನಡುವಿನ ವಿರಹ ವೇದನೆಯನ್ನು ಸೂಚಿಸುತ್ತದೆ. ಇಬ್ಬರು ಯುವ ಪ್ರೇಮಿಗಳು ಪರಸ್ಪರ ಗಾಢವಾಗಿ ಪ್ರೇಮದಲ್ಲಿ ಮುಳುಗಿದ್ದಾಗ ಯಾವುದೋ ಒಂದು ಕ್ಷುಲ್ಲಕ ಕಾರಣಕ್ಕೆ ಪರಸ್ಪರ ಬೈದಾಡಿಕೊಂಡು ದೂರವಾಗಿರುವುದು ಈ ಕೋಲುಪದದಲ್ಲಿ ಚಿತ್ರಿತವಾಗಿದೆ. ಹಾಗೆಯೇ ಹೊಡೆದಾಡಿ, ಬೈದಾಡಿಕೊಂಡ ಈ ಗೆಳೆಯ-ಗೆಳತಿಯರು ಅಥವಾ ಪ್ರೇಮಿಗಳು ಪರಸ್ಪರ ದೂರವಾದಾಗಲೂ ಕೂಡ ಮಾನಸಿಕವಾಗಿ ಒಬ್ಬರ ಕುರಿತು ಮತ್ತೊಬ್ಬರು ಆಲೋಚಿಸುತ್ತಾ, ದುಃಖಿಸುತ್ತಾ ಎಂತಹ ತಪ್ಪು ಮಾಡಿದೆವು ಎಂದು ಪರಸ್ಪರರಿಬ್ಬರೂ ಪರಿತಪಿಸುತ್ತಾ, ಪಶ್ಚಾತ್ತಾಪ ಪಡುತ್ತಾ, ರಾತ್ರಿಯೆಲ್ಲಾ ನಿದ್ದೆ ಮಾಡದೆ ಅಳುತ್ತಿರುವ ಚಿತ್ರಣವನ್ನು ಈ ಕೋಲುಪದವು ಕಟ್ಟಿಕೊಡುತ್ತದೆ. ಹೀಗೆ ಕೋಲುಪದಗಳಲ್ಲಿ ಸಾಹಿತ್ಯಿಕ ಕೊರತೆಯನ್ನು ಶೃಂಗಾರ, ವಿರಹ-ವೇದನೆ ಅಥವಾ ಹಾಸ್ಯದಂಥ ವಸ್ತುವೈವಿಧ್ಯತೆಗಳು ಸಾಹಿತ್ಯಿಕಾಂಶಗಳ ಕೊರತೆಯನ್ನು ನೀಗಿಸುತ್ತವೆ. ಶೃಂಗಾರ ಹಾಡುಗಳಲ್ಲಿ ಪ್ರಣಯದ ಜೊತೆಗೆ ಅಕ್ರಮ ಪ್ರಣಯದ ಸಂಬಂಧವಿರಿಸಿ ಕೊಂಡಿರುವ ಸಾಹಿತ್ಯವೂ ಕೂಡ ವಿಪುಲವಾಗಿ ಕಂಡು ಬರುತ್ತದೆ. ಶೃಂಗಾರ ರಸವೇ ಪ್ರಧಾನವಾದ

ಕೋಲುಪದಗಳಲ್ಲಿ ಅಕ್ರಮ ಪ್ರಣಯವನ್ನು ಒಳಗೊಂಡ ಘಟನೆಗಳು ಕೋಲುಪದಗಳಲ್ಲಿನ ಪ್ರಮುಖ ಆಕರ್ಷಣೆಯಾಗಿ ಕಂಡುಬರುತ್ತವೆ. ಅಕ್ರಮ ಪ್ರಣಯ ಅಥವಾ ಪ್ರಣಯ ಮಾದರಿಯ ಕೋಲುಪದಗಳು ಸಂಭಾಷಣೆ, ಪ್ರಶ್ನೋತ್ತರ ಮಾದರಿಯಲ್ಲಿ ಕಥನ-ಕವನ, ಕಥನ ನಿರೂಪಣೆಯ ರೀತಿಯಲ್ಲಿ ಅಭಿವ್ಯಕ್ತಗೊಳ್ಳುತ್ತವೆ.

ಅಕ್ರಮ ಪ್ರಣಯಕ್ಕೆ ಸಂಬಂಧಿಸಿದ ಒಂದು ಕೋಲುಪದದಲ್ಲಿ ಗಂಡನು ದುಡಿದು ತರಲು ಹೊರಗಡೆ ವಲಸೆ ಹೋದಾಗ, ಹೆಂಡತಿಯಾದವಳು ಪರಪುರುಷನ ಸಖ್ಯ ಬೆಳೆಸಿರುವುದು ಕಾಣಸಿಗುತ್ತದೆ. ಹಾಗೆಯೇ ಅವನಿಗೋಸ್ಕರ ತಾನು ಹೆತ್ತ ಮಗನನ್ನೆ ಕೊಲೆ ಮಾಡುವ ಪ್ರಯತ್ನವನ್ನಿಲ್ಲಿ ಮಾಡಿರುವುದು ಕಂಡುಬರುತ್ತದೆ. ಹಾಗೆಯೇ ತನ್ನ ತಾಯಿಯೆ ತನ್ನನ್ನು ಕೊಲ್ಲಲು ನಡೆಸಿದ್ದ ಸಂಚನ್ನು ತನ್ನ ತಂದೆಗೆ ಹೇಳದೆ ಆ ತಪ್ಪನ್ನು ತನ್ನ ಮೇಲೆ ಹಾಕಿಕೊಂಡು ನಾನು ಶಾಲೆಗೆ ಹೋಗಲಾರದಕ್ಕೆ ಕೈಕಾಲು ಕಟ್ಟಿದ್ದಾಳೆ ಎಂದು ತಂದೆಗೆ ಹೇಳಿ ತನ್ನ ಪ್ರಾಣ ತೆಗೆಯಲು ಬಂದ ತಾಯಿಯ ಪ್ರಾಣವನ್ನು ಉಳಿಸಿ ಮಾನವೀಯತೆಯನ್ನು ಮೆರೆಯುತ್ತಾನೆ. ಹೀಗೆ ಒಂದು ಹೆಣ್ಣು ಅಕ್ರಮ ಸಂಬಂಧದಿಂದ ಹೆತ್ತಮಗನನ್ನೇ ಕೊಲೆ ಮಾಡಲು ನಡೆಸಿದ ಸಂಚು ಮತ್ತು ಆ ಮಗುವಿನ ಮಾನವೀಯತೆಯ ಕುರಿತಾಗಿ ಒಂದು ಕೋಲುಪದವು ಹೊಸಪೇಟೆ, ಕಮಲಾಪುರದ ಸುತ್ತಮುತ್ತಲೂ ಹರಿದಾಡುತ್ತಿದೆ. ಈ ಕೋಲುಪದವನ್ನಿಲ್ಲಿ ಉದಾಹರಣೆಯಾಗಿ ಗಮನಿಸಬಹುದು.

ಕಲ್ಮಿಕದೊಳಗೆ ಕೌತ ಹುಟ್ಟಿತು ಕೇಳಿರೆನ್ನದೈವ
ಪರ್ರೈಪುರುಷನ ಮೆಚ್ಚಿ ನಾರಿ ಕೊಲ್ತಾಳ ಹಡದ ಕೂಸನ್ನ
ಮದುವೆಯಾಗಿ ಹನ್ನೆರಡು ವರುಷಕ ಪಡುದರ ಗಂಡು ಮಗನ
ರೂಪದಲ್ಲಿ ಎಷ್ಟಾಂತ ಹೇಳಲಿ ಚಂದ್ರಮನಂತವನೇನಾ
ಕಾಲುಕಡಗ ಚೈನ ರೂಳಿ ಗೆಜ್ಜೆ ಟೊಂಕದಾಗೆ ತಳತಳ
ಹೊಳೆಯುವ ಬಂಗಾರದ ಕಡಗ ಒಪ್ಪುತಾವ್ರೆ ಕೈಯಾಗೇನಾ
ಗೆಜ್ಜೆಸರ ಮಾಮೂಲಿಸರ ಹಾಕಾರೆ ಕೊರಳೊಳಗೆ ಇದೋಟು
ವಸ್ತು ಮುಟ್ಟೈತಣ್ಣಾ ಶೇರು ಬಂಗಾರದಾಗೇನಾ
ಹಾಲು ಹೈನಾ ನಿತ್ಯ ಉಣಿಸಿರಿ ತಪ್ಪದೊಂದು ದಿನಾ
ನಾನಾದರೆ ದಂಡಿಗೆ ಹೋಗುತಿನಿ ಮಗನ ಮೇಲೆ ಜೋಕೆನಾ
ಬರುವಾಗ ನಿಂಗೆ ಸೀರೆ ತರುತೀನಿ ಅಸಲು ಸೂರ್ಯಕಾಂತೇನಾ
ಗಂಡ ಹೋದ ಮೂರು ದಿವಸದ ಮೇಲೆ ಮಾಡ್ಯಾಳೆ ಒಬ್ಬನ್ನ
ಹಾರಾರುಡುಗ ನರಸಿಂಗರಾಯ ವಾರೆಗೆ ತಕ್ಕವನೇನಾ
ಯವ್ವಾ ಕೇಳೆ ಎನ್ನದೊಂದು ಮಾತು ಎನ್ನದೊಂದು ಮಾತು
ನಮ್ಮಪ್ಪನಾದರೆ ದಂಡಿಗೆ ಹೋಗೆನಾ ಇವನಾರೊ ಬರುತಾನೆ ದಿನಾ ದಿನಾ
ಮಗನ ಮಾತು ಕೇಳಿ ತಾಯಿ ಮಾಡ್ಯಾಳೆಂದು ಮಾಡ್ಯಾಳು ಮಸಲತ್ತು
ಹೋದ ಸಾಲೆಗೆ ಹೋಗಬೇಡ ಮಗನೆ ಹೋಳಿಗೆ ಮಾಡ್ತಿನೇನಾ

ತಾಯಿ ಮಾತು ಮೀರಲಾರದ ಮಗನು ಆಡ್ಯಾನು ಮನೆ ಮುಂದೆ
ಯವ್ವ ಎನಗೆ ಹೊಟ್ಟೆ ಹಸಿತೈತೆ ಕುಡಿಸುವ ಮೊಲೆ ಹಾಲೆನಾ
ಹೊರಗಿದ್ದ ಮಗನಾ ಒಳಗೆ ಕರೆದು ಕಟ್ಟ್ಯಾಳೆ ಕೈ ಕಾಲು
ಕೈಕಾಲು ಕಟ್ಟಿ ಕದವನು ಮುಚ್ಚಿ ತಗಂಡಾಳ್ರೀ ಚೂರಿನಾ
ಅದೇ ವ್ಯಾಳಾಕೆ ತನ್ನ ಗೆಳೆಯ ಮನೆಗೆ ಬಂದಾನೊ
ಮಾಡಬೇಕಾರಿ ಬಿಡಬಾರದು ಹೊತ್ತು ಕೂಸಿನ ಜಲ್ಮಕೆ ಘಾತನಾ
ಕೂಸಿನ ಪಾಪ ತಟ್ಟುವುದು ನಾರಿ ಸಾಕು ನಿನ್ನ ಸಂಗ
ಛೆ ಯಾತರ ಗಂಡಸು ಸ್ವಲ್ಪ ಇಲ್ಲ ಸಾಮರ್ಥ್ಯನಾ
ಗೆಳೆಯ ಹೋದ ಅರ್ಧ ತಾಸಿನೊಳಗೆ ಮನೆಯ ಗಂಡ ಬಂದ
ಯಾರ್ಯೆದಿರಾ ಒಳಗೆ ನೀವು ಕದವನು ತೆಗೆಯೇರೆನಾ
ತಂದೆ ದನಿ ಕೇಳಿ ಮಗನು ಕರೆಯುತಾನೆ ಜಲ್ದಿ ಬಾರಪ್ಪ ಒಳಗೆ
ಬಾಗಿಲು ಎಳೆದು ಕದವನು ಮುರಿದು ಹೊಕ್ಕನು ಕೋಣೆಕೇನಾ
ಅದೇ ಸಿಟ್ಟಲಿ ತನ್ನ ಹೆಂಡತೀನಾ ಕಡಿಯಲಿಕ್ಕೆ ಹೋಗೆನಾ
ನಮ್ಮವ್ವನಾದರು ಕಡಿಬೇಡಪ್ಪಾ ದೇವರಾಣೆ ನಿನಗೇನಾ
ಹೋದ ಸಾಲೆಗೆ ಹೋಗಲಾರದಕ್ಕೆ ಕಟ್ಟಾಳೆ ಕೈಕಾಲೇನಾ |೨|

(ವಕ್ತೃ: ಗುರುವಯ್ಯ, ಕಮಲಾಪುರ, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ)

ಈ ಕೋಲುಪದವು ಅಕ್ರಮ ಪ್ರಣಯ ಅಥವಾ ಅಕ್ರಮ ಸಂಬಂಧದ ಜೊತೆಗೆ ತಾಯಿಯ ಅಮಾನವೀಯತೆಯ ಗುಣ, ಮೃಗೀಯ ವರ್ತನೆ, ಮಗುವಿನ ಮಾನವೀಯತೆಯ ಗುಣ, ತಂದೆಯ ರೋಷಾವೇಶಗಳನ್ನು ಈ ಗೀತೆಯು ಚಿತ್ರಿಸುತ್ತದೆ. ಗೀತೆಯ ಆರಂಭದಲ್ಲಿ ಹೆಂಡತಿ ಮತ್ತು ಮಗುವನ್ನು ಬಿಟ್ಟು ಗಂಡನು ದೂರದ ಊರುಗಳಿಗೆ ವಲಸೆ ಹೋಗುವುದು ಕಂಡು ಬರುತ್ತದೆ. ಗಂಡನು ದುಡಿಯಲು ಪರವೂರಿಗೆ ಹೋದಾಗ ಹೆಂಡತಿಯಾದವಳು ಪರಪುರುಷನ ಸಂಗ ಬಯಸಿ ನರಸಿಂಗರಾಯ ಎಂಬ ತನ್ನ ವಯಸ್ಸಿನ ಹುಡುಗನೊಂದಿಗೆ ಅಕ್ರಮ ಸಂಬಂಧ ಬೆಳೆಸುತ್ತಾಳೆ. ಇದನ್ನು ಕಂಡು ಅವಳ ಮಗು, ಯಾರವನು? ತಂದೆ ಇಲ್ಲದಿದ್ದಾಗ ದಿನಾಲೂ ಮನೆಗೆ ಬಂದು ಹೋಗುತ್ತಾನೆ ಎಂದು ಪ್ರಶ್ನಿಸುತ್ತಾನೆ. ತನ್ನ ಸಂಬಂಧ ಕುರಿತು ತನ್ನ ಮಗುವಿಗೆ ತಿಳಿಯಿತು ಮತ್ತು ತನ್ನ ನಿಜಸ್ಥಿತಿ ನನ್ನ ಮಗನಿಗೆ ತಿಳಿದು ಹೋಗಿದೆ. ಆ ವಿಷಯವನ್ನು ಅವನು ನನ್ನ ಗಂಡನಿಗೆ ತಿಳಿಸುತ್ತಾನೆ, ಇನ್ನೂ ನನ್ನ ಮಗ ಉಳಿಯಬಾರದು ಎಂದು ನಿರ್ಧರಿಸುತ್ತಾಳೆ. ಆ ಮಗುವನ್ನು ಶಾಲೆಗೆ ಹೋಗಬೇಡ ಮಗನೆ ನಿನಗೆ ಸಿಹಿ ಊಟ ಮಾಡುತ್ತೇನೆ ಎಂದು ಹೇಳಿ ಅವನ ಕೈ ಕಾಲು ಕಟ್ಟಿ ಸಾಯಿಸಲು ಚೂರಿಯನ್ನು ತೆಗೆದು ಕೊಂಡಿರುತ್ತಾಳೆ. ಇದನ್ನು ಕಂಡ ಅವಳ ಪ್ರಿಯಕರ ನರಸಿಂಗರಾಯ ನಿನ್ನ ಸಹವಾಸವೇ ಬೇಡವೆಂದು ಅವಳಿಂದ ದೂರಾಗುತ್ತಾನೆ. ಕೊನೆಗೆ ಗಂಡ ಬಂದು ಬಾಗಿಲು ಮುರಿದು ಮಗುವನ್ನು ರಕ್ಷಿಸುತ್ತಾನೆ ಮತ್ತು ಮಗುವನ್ನು ಕೊಲ್ಲಲು ಸಿದ್ಧತೆ ನಡೆಸಿದ ತನ್ನ ಹೆಂಡತಿಯನ್ನು ಕೊಲ್ಲಲೆತ್ನಿಸಿದಾಗ, ಬೇಡಪ್ಪ ಸಾಲೆಗೆ(ಶಾಲೆಗೆ) ಹೋಗಲಾರದಕ್ಕೆ ಅಮ್ಮ ಈ ರೀತಿ ಕೈಕಾಲು

ಕಟ್ಟಿದ್ದಾಳೆ ಅಷ್ಟೇ ಎಂದು ಹೇಳಿ ತಪ್ಪನ್ನು ತನ್ನ ಮೇಲೆ ಹಾಕಿಕೊಂಡು ತನ್ನ ತಂದೆಯಿಂದ ತನ್ನ ತಾಯಿಯನ್ನು ರಕ್ಷಿಸುವುದರ ಮೂಲಕ ಮಾನವೀಯತೆಯನ್ನು ಮೆರೆಯುತ್ತಾನೆ. ಈ ಕೋಲುಪದವು ಕಥನಕಾವ್ಯದ ರೀತಿಯಲ್ಲಿ ಗಂಡ-ಹೆಂಡತಿ, ಮಗು ಮತ್ತು ಪರಪುರುಷನ ಕುರಿತಾಗಿ ನಿರೂಪಿಸಿರುವುದು ಕಂಡು ಬಂದಿದೆ. ಹೀಗೆ ಕೋಲುಪದಗಳಲ್ಲಿ ಅಕ್ರಮ ಸಂಬಂಧದ ಪ್ರಣಯವನ್ನಿರಿಸಿಕೊಂಡ ಗಂಡ - ಹೆಂಡತಿಯ ವೈವಾಹಿಕ ಸಂಬಂಧಗಳ ಕುರಿತಾಗಿ ಕೋಲುಪದಗಳಲ್ಲಿ ವಿಪುಲವಾದ ಸಾಹಿತ್ಯ ಸಿಗುತ್ತದೆ. ಆದರೆ ಎಲ್ಲೂ ಅಶ್ಲೀಲತೆ ಎಂಬುದು ಕಾಣಸಿಗದು. ಅಶ್ಲೀಲತೆಯ ಸೋಗಿನಿಂದ ಬಿಡಿಸಿಕೊಂಡು ಜನಪದರು ಕೋಲುಪದಗಳನ್ನು ರಚಿಸಿರುವುದು ಕಾಣಸಿಗುತ್ತದೆ. ಶೃಂಗಾರ ಸಂಬಂಧಿತ ಕೋಲುಪದಗಳ ಸಾಹಿತ್ಯದಲ್ಲಿ ಪ್ರಣಯಕ್ಕೆ ಸಂಬಂಧಿಸಿದಂತೆ ಯುವಕ - ಯುವತಿಯರ, ಗೆಳೆಯ - ಗೆಳತಿಯರ ಪ್ರೇಮ, ವಿರಹ-ವೇದನೆ, ಗಂಡ-ಹೆಂಡತಿಯರ ಸರಸ-ಸಲ್ಲಾಪ ಜೊತೆಗೆ ಅಕ್ರಮ ಪ್ರೇಮಸಂಬಂಧಗಳು ಕೂಡ ಶೃಂಗಾರ ಕೋಲು ಪದಗಳ ಸಾಹಿತ್ಯದಲ್ಲಿ ಕಾಣಸಿಗುತ್ತವೆ.

### ೭.೩. ವ್ಯಕ್ತಿ ವಿಷಯದ ಕೋಲುಪದಗಳ ಸಾಹಿತ್ಯ

ಕನ್ನಡ ನಾಡು ವೀರರು-ಶೂರರು ಜನಿಸಿದ ನಾಡು, ಕಲಿಗಳ ಬೀಡು. ತ್ಯಾಗ-ಬಲಿದಾನಗಳಿಗೆ ಖ್ಯಾತವೆತ್ತ ಔದಾರ್ಯತೆಯುಳ್ಳವರು ಕನ್ನಡ ನಾಡಿನ ಜನರು. ಕನ್ನಡ ನಾಡಿನ ಜನರು ಸಾಮಾನ್ಯವಾಗಿ ಮೊದಲಿನಿಂದಲೂ ಸಾಮ್ರಾಜ್ಯಗಳನ್ನು ಕಟ್ಟಿ ನಾಡಿನ ಕ್ಷೇಮಕ್ಕಾಗಿ, ಜನಗಳ-ಪ್ರಜೆಗಳ ಹಿತ ಸಾಧಿಸಿ ಉಜ್ವಲ ಸಾಮ್ರಾಜ್ಯಗಳನ್ನು ಕಟ್ಟಿ ತಮ್ಮದೇ ಸತ್ಯ, ನ್ಯಾಯ, ನೀತಿ, ತ್ಯಾಗ, ವೀರತ್ವಗಳ ಔದಾರ್ಯದಿಂದ ಶೂರರಾಗಿ ಧೀರರಾಗಿ ಮೆರೆದವರು. ಶಾಸನಗಳಲ್ಲಿ ವೀರಗಲ್ಲುಗಳಲ್ಲಿ ಕನ್ನಡಿಗರು ಎಂತಹ ವೀರರು, ಧೀರರು, ತ್ಯಾಗ ಮನೋಭಾವದವರು ಎಂದು ಹಲ್ಮಿಡಿಶಾಸನ, ಬಾದಾಮಿಶಾಸನ, ಕುವರಲಕ್ಷ್ಮಣ ಶಾಸನ, ತಮ್ಮಟಗಲ್ಲು ಶಾಸನಗಳಿಂದ ತಿಳಿದುಬರುತ್ತದೆ. ಇದು ಲಿಖಿತ ಸಾಹಿತ್ಯದಲ್ಲಿ ಮಾತ್ರವಲ್ಲದೆ ಜಾನಪದೀಯ ಸಾಹಿತ್ಯದಲ್ಲಿಯೂ ಕನ್ನಡ ನಾಡಿನ ಜನರು ಧೀರರು, ಶೂರರು, ತ್ಯಾಗ ಮನೋಭಾವದ ವ್ಯಕ್ತಿತ್ವದವರು ಎಂಬುದನ್ನು ಜನಪದರು ತಮ್ಮ ಗೀತೆಗಳಲ್ಲಿ ಅವರ ವ್ಯಕ್ತಿತ್ವಗಳನ್ನು ಹಾಡಿ ಹೊಗಳಿರುವುದೇ ಇದಕ್ಕೆ ಸಾಕ್ಷಿ.

ಜನಪದ ಗೀತ ಸಾಹಿತ್ಯದ ಒಂದು ಪ್ರಕಾರವಾದ ಕೋಲುಪದಗಳ ಸಾಹಿತ್ಯದಲ್ಲಿ ಚಾರಿತ್ರಿಕ ವ್ಯಕ್ತಿಗಳ ಅಥವಾ ಸಾಮಾನ್ಯರ ಕುರಿತಾಗಿಯೂ ಅವರ ಧೀರತೆ, ಶೂರತೆ, ತ್ಯಾಗಬಲಿದಾನಗಳ ಕುರಿತಾಗಿ, ಅವರ ವ್ಯಕ್ತಿತ್ವಗಳನ್ನು ಮತ್ತು ಅವರ ನಡೆ-ನುಡಿಯನ್ನು ಹಾಡಿ ಹೊಗಳಿರುವುದು ಕಾಣಸಿಗುತ್ತವೆ.

ಚಿತ್ರದುರ್ಗದ ಕೋಟೆಯನ್ನು ಆಕ್ರಮಿಸಿ ಮುತ್ತಿಗೆ ಹಾಕಿದ್ದ, ಹೈದರಾಲಿಯ ಮುಸ್ಲಿಂ ಸೇನಾ ಪಡೆಯನ್ನು ತನ್ನ ತೋಳ್ಬಲದಿಂದ ಒಬ್ಬೊಬ್ಬರನ್ನೇ ಒನಕೆಯಿಂದ ಹೊಡೆದು ಕೊಂದು ಚಿತ್ರದುರ್ಗದ ಕೋಟೆಯನ್ನು ರಕ್ಷಿಸಿದ ವೀರವನಿತೆ ಓಬವ್ವಳ ಕುರಿತಾಗಿ ಚಿತ್ರದುರ್ಗದ ಸುತ್ತಮುತ್ತಲ ಪ್ರದೇಶಗಳಲ್ಲಿ

ಜನಪದ ಸಾಹಿತ್ಯ ವಿಪುಲವಾಗಿ ಸಿಗುತ್ತದೆ. ಜನಪದ ಗೀತ ಸಾಹಿತ್ಯ ಪ್ರಕಾರವಾದ ಕೋಲಾಟ ಪದಗಳಲ್ಲಿಯೂ ಕೂಡ ಓಬವ್ವಳ ಸಾಹಸಗಾಥೆಯನ್ನು ಹಾಡಿ ಹೊಗಳಿರುವುದು ಕಾಣಸಿಗುತ್ತದೆ. ಓಬವ್ವ ಚಿತ್ರದುರ್ಗದ ಕೋಟೆಯನ್ನು ರಕ್ಷಿಸಿರುವುದರ ಕುರಿತಾಗಿ ವಿಧವಿಧವಾದ ರೀತಿಯಲ್ಲಿ ಹಾಡಿ ಹೊಗಳಿರುವುದು ಕೋಲುಪದಗಳಲ್ಲಿ ಕಂಡುಬಂದಿದೆ.

ವೀರವನಿತೆ ಓಬವ್ವನ ಸಾಹಸಗಾಥೆಯನ್ನು ಹಾಡಿ ಹೊಗಳುವಂಥ ಒಂದು ಕೋಲುಪದವನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

ತಾನಿ ತಾನಂದನೋ ತಂದನಾನೋ
ತಂದಾನಿ ತಾನಂದನೋ ತಂದನಾನೋ
ಕ್ವಾಟೆಯಾ ಹಿಂದಕೆ ಹೋದಾಳು ಓಬವ್ವಾ
ನೆಟ್ಟನ್ನ ಬಿದಿರು ಸೆಳೆದಾಳೋ
ತಂದಾನಿ ತಾನಂದನೋ ತಂದನಾನೋ
ನೆಟ್ಟನ್ನು ಬಿದಿರು ಸೆಳೆದಾಳು ಓಬವ್ವ
ಸಿಟ್ಟಲಿ ಶಿವರಾಯನ ನೆನೆದಾಳೋ
ತಂದಾನಿ ತಾನಂದನೊ ತಂದನಾನೋ
ಮೇಲೆಯೆ ದುರ್ಗವ ಹತ್ಯಾಳೆ ಓಬವ್ವ
ಕ್ವಾಟೆಯಾ ಸುತ್ತ ನಡೆದಾಳೋ
ತಂದಾನಿ ತಾನಂದನೊ ತಂದನಾನೊ
ಕ್ವಾಟೆಯಾ ಸುತ್ತ ನಡೆದಾಳೋ
ಓಬವ್ವ ವೀರಗಚ್ಚೆಯ ಹಾಕ್ಯಾಳೋ
ತಂದಾನಿ ತಾನಂದನೋ ತಂದಾನಾನೋ
ವೀರಗಚ್ಚೆಯ ಹಾಕ್ಯಾಳೋ ಓಬವ್ವ
ಒನಕೆಯ ಬೀರಿ ವೈರಿಗಳ ಕೊಂದಾಳೋ
ತಂದಾನಿ ತಾನಂದನೊ ತಂದನಾನೋ
ವೀರ ಕಾವಲುಗಾರ ಕ್ವಾಟೆಯ ಸುತ್ತ ನಡೆದಾನೋ
ತಂದಾನಿ ತಾನಂದನೋ ತಂದನಾನೋ
ಕ್ವಾಟಿಯಾ ಸುತ್ತ ನಡೆದಾನೋ
ಒನಕೆ ಓಬವ್ವಾನ ನೋಡ್ಯಾನೋ
ತಂದಾನಿ ತಾನಂದನೋ ತಂದನಾನೊ
ಹೆಣದ ರಾಶಿಯ ನೋಡಿದನು
ವೀರಗಾಳೆ ಊದ್ಯಾನೋ
ತಂದಾನಿ ತಾನಂದನೋ ತಂದನಾನೇ
ವೀರಗಾಳೆ ಊದ್ಯಾನೊ ಕಾವಲುಗಾರ

ದಂಡಿಯೆ ಎದ್ದು ಬಂದಿತು
ತಂದಾನಿ ತಾನಂದನೋ ತಂದನಾನೋ
ಓನಕೆಯ ಓಬವ್ವ ವೈರಿಯಿಂದ ಮುಕ್ತಿ
ಹೊಂದಿದಳು ಚಿತ್ರದುರ್ಗದ ಕೋಟೆಯ ಮೇಲೆ
ಉಡುದಯ್ಯೋ ತದ್ದಿಮಿತಾ

(ವಕ್ತೃ: ಬೋರಣ್ಣ, ದೊಣಮಂಡಲಹಟ್ಟಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಈ ಕೋಲುಪದದ ಸಾಹಿತ್ಯವು ವ್ಯಕ್ತಿ ವಿಷಯದ ಕುರಿತಾಗಿದ್ದು, ವೀರವನಿತೆ ಓಬವ್ವಳ ಸಾಹಸ - ಶೌರ್ಯಗಳನ್ನು ಅನಾವರಣ ಮಾಡಿರುವುದು ಕಾಣಸಿಗುತ್ತದೆ. ಅಲ್ಲದೆ ಮೋಸದಿಂದ ಕುಟಿಲತೆಯಿಂದ ಹೈದರಾಲಿಯ ಸೈನಿಕನಿಂದ ಕೊನೆಗೆ ಹತಳಾಗಿರುವ ಚಿತ್ರಣವು ಈ ಕೋಲುಪದದಲ್ಲಿ ಚಿತ್ರಿತವಾಗಿದೆ. ಈ ಗೀತೆಯು ವೀರವನಿತೆ ಓಬವ್ವಳ ಸಾಹಸಗಾಥೆಯನ್ನು ಮತ್ತು ಹೈದರಾಲಿ ಸೈನಿಕರ ಕುಟಿಲ ನೀತಿಯನ್ನು ನಿರೂಪಿಸುತ್ತದೆ. ಒಬ್ಬ ಕಾವಲುಗಾರನ ಹೆಂಡತಿಯಾದ ಓಬವ್ವ ಹೈದರಾಲಿ ಸೈನಿಕರೊಂದಿಗೆ ಹೋರಾಡಿ ಕೊನೆಗೆ ಮುಸ್ಲಿಂ ಸೈನಿಕನ ಕುತಂತ್ರಕ್ಕೆ ಒಳಗಾಗಿ ಅವಳ ಬೆನ್ನ ಹಿಂದೆ ಬಂದ ಮುಸ್ಲಿಂ ಸೈನಿಕನು ಆಕೆಯನ್ನು ಕತ್ತಿಯಿಂದ ತಿವಿದು ಕೊಲೆ ಮಾಡುತ್ತಾನೆ. ಹೀಗೆ ಓಬವ್ವ ಚಿತ್ರದುರ್ಗದ ಕೋಟೆಯನ್ನು ರಕ್ಷಿಸಿ ತಾನು ಪ್ರಾಣ ತ್ಯಾಗ ಮಾಡುವುದರ ಮೂಲಕ ದುರಂತ ಅಂತ್ಯವನ್ನು ಕಾಣುತ್ತಾಳೆ. ಓಬವ್ವ ದುರಂತ ಅಂತ್ಯ ಕಂಡರೂ ಕೂಡ ಆ ವೀರವನಿತೆಯು ಇಂದಿಗೂ ಕರ್ನಾಟಕ ಹಾಗೂ ಚಿತ್ರದುರ್ಗದ ಜನಮಾನಸದಲ್ಲಿ ನೆಲೆಸಿದ್ದಾಳೆ. ಹಾಗೆಯೆ ಚಿತ್ರದುರ್ಗದ ಸುತ್ತಮುತ್ತಲ ಜನಪದ ಗೀತೆಗಳಲ್ಲಿ, ಕೋಲುಪದಗಳಲ್ಲಿ ಓಬವ್ವಳ ಶೌರ್ಯ ಪರಾಕ್ರಮ ಸಾಹಸಗಾಥೆಯನ್ನು ಕೊಂಡಾಡುವುದು ಕಾಣಸಿಗುತ್ತದೆ. ಬರೀ ಕೋಲುಪದಗಳಲ್ಲಿ ಮಾತ್ರವಲ್ಲದೆ ಸೋಬಾನೆ, ಭಜನೆಪದ ಇತ್ಯಾದಿ ಕಥನ ಕವನಗಳಲ್ಲೂ ಓಬವ್ವಳ ವ್ಯಕ್ತಿತ್ವವನ್ನು ಕೊಂಡಾಡುವುದು ಕಂಡುಬಂದಿದೆ.

ವ್ಯಕ್ತಿ ವಿಷಯದ ಕೋಲುಪದಕ್ಕೆ ಸಂಬಂಧಿಸಿದಂತೆ ಚಿತ್ರದುರ್ಗ, ಬಳ್ಳಾರಿ ಪರಿಸರದಲ್ಲಿ ಕೋಲುಪದವೊಂದು ಪ್ರಚಲಿತವಿದೆ. ಈ ಕೋಲುಪದವು ಚಿತ್ರದುರ್ಗದ ಪ್ರಸಿದ್ಧ ಅರಸರಾದ ಅಥವಾ ಪಾಳೇಗಾರರಾದ ಮದಕರಿನಾಯಕರ ವಂಶದಲ್ಲಿ ಒಬ್ಬರಾದ ಮದಿಕೇರಿ ನಾಯಕನನ್ನು ಕುರಿತ ಹಾಡಾಗಿದೆ. ಮದಕರಿನಾಯಕ ಎನ್ನುವಂತಹ ಹೆಸರಿನಿಂದ ಇದ್ದರೂ ಕೂಡ ಅವರು ಎಷ್ಟನೇ ಮದಕರಿನಾಯಕ ಎಂಬುದು ಮಾತ್ರ ಸ್ಪಷ್ಟವಾಗಿ ತಿಳಿಯುವುದಿಲ್ಲ. ಇತಿಹಾಸ ಪ್ರಸಿದ್ಧ ಅರಸನಾದ ಐದನೇ ಮದಕರಿನಾಯಕನ ಕುರಿತಾದ ಕೋಲುಪದ ಇರಬೇಕೆಂದು ಹೇಳಬಹುದಾಗಿದೆ. ಈ ಕೋಲುಪದದಲ್ಲಿ ಮದಿಕೇರಿನಾಯಕ ಎಂಬುದಾಗಿ ಮಾತ್ರ ಉಲ್ಲೇಖ ಮಾಡಿರುವುದರಿಂದ ಖಚಿತತೆ ಇಲ್ಲ. ಈ ಕೋಲುಪದವು ಮದಕರಿನಾಯಕನ ವ್ಯಕ್ತಿತ್ವ, ಪರಾಕ್ರಮ, ವೀರತ್ವ, ಶೂರತ್ವಗಳ ಕುರಿತಾಗಿ ಆತನ ಸಾಹಸಗಾಥೆಯನ್ನು ಚಿತ್ರಿಸುತ್ತದೆ.

ಮದಕರಿನಾಯಕನ ಸಾಹಸ, ಶೌರ್ಯ - ಪರಾಕ್ರಮಗಳ ಕುರಿತಾದ ವ್ಯಕ್ತಿ ವಿಷಯದ ಕೋಲುಪದ -

ಕೋಲನಿ ಕೋಲನ್ನ ಕೋಲೆ
ಸಿರಿಗಂಧಾದಿ ಕೋಲನಿ ಕೋಲನ್ನ ಕೋಲೆ
ಸೀರೆಯ ಗೆದ್ದ ಚಿನ್ನದುಂಗುರ ಗೆದ್ದ
ಮಾತೀಲಿ ಗೆದ್ದ ಮಲೆನಾಡ ಮದಿಕೇರಿ
ರೀತಿಲಿ ಗೆದ್ದ ದುರುಗಾವು ರನ್ನಾದಿ
ಕೋಲನಿ ಕೋಲನ್ನ ಕೋಲೆ
ಸಿರಿಗಂಧಾದಿ ಕೋಲನಿ ಕೋಲನ್ನ ಕೋಲೆ
ಮೇಲೆ ದುರುಗದ ಮೇಲೆ
ಜೋಡೆರಡು ಫೀರಂಗಿ ನೋಡೆ
ಸಿದ್ದವ್ವ ನಿನ ಮಗ ಮದಿಕೇರಿ
ಸೀರೆಯ ಗೆದ್ದು ಬರುತಾನೆ ರನ್ನಾದಿ
ಕೋಲನಿ ಕೋಲನ್ನ ಕೋಲೆ
ಸಿರಿಗಂಧಾದಿ ಕೋಲನಿ ಕೋಲನ್ನ ಕೋಲೆ

(ವಕ್ತೃ: ಕುರಿಬೋರಯ್ಯ, ಬೋಸೇದೇವರಹಟ್ಟಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ವ್ಯಕ್ತಿ ವಿಷಯ ಹೊಂದಿರುವ ಕೋಲುಪದವಾಗಿದ್ದು, ಮದಿಕೇರಿನಾಯಕನ ವ್ಯಕ್ತಿತ್ವ ಹಾಗೂ ಆತನ ಸಾಹಸ ಪರಾಕ್ರಮಗಳ ಚಿತ್ರಣ ನೀಡುತ್ತದೆ. ಈ ಹಾಡಿನಲ್ಲಿ ಮದಿಕೇರಿನಾಯಕನ ವರ್ಣನೆ ಇದೆ. ಮದಿಕೇರಿನಾಯಕ ಸಣ್ಣಪುಟ್ಟ ಪಾಳೇಗಾರರು-ಸಾಮಂತರು ಮತ್ತು ಸುತ್ತಮುತ್ತಲ ಪಾಳೇಪಟ್ಟುಗಳ ಮೇಲೆ ದಂಡಯಾತ್ರೆ ಕೈಗೊಂಡು ಮಲೆನಾಡ ಪ್ರಾಂತಗಳನ್ನು ಮತ್ತು ಚಿತ್ರದುರ್ಗದ ಸುತ್ತಮುತ್ತಲಿರುವ ಹಟ್ಟಿ ಪಾಳೆಯಗಾರರನ್ನು ಸೋಲಿಸಿ ಅವರ ಪ್ರಾಂತಗಳನ್ನು ಗೆದ್ದುಕೊಂಡು ತನ್ನ ವಶಕ್ಕೆ ಪಡೆದಿರುವುದು ಕಂಡುಬರುತ್ತದೆ. ಹಾಗೆಯೇ ದುರ್ಗದ ಸುತ್ತಮುತ್ತಲು ಸಣ್ಣಪುಟ್ಟ ಪಾಳೆಯಗಾರರನ್ನು ನಯವಿನಯದ ಮಾತುಗಳ ಮುಖಾಂತರ ಅವರ ಮನವೊಲಿಸಿ ತನ್ನೆಡೆಗೆ ಸೆಳೆದುಕೊಂಡಿರುವುದಿದೆ. ಜೊತೆಗೆ ಮದಕರಿಯ ಸಾಹಸ-ಪರಾಕ್ರಮಗಳಿಗೆ, ವ್ಯಕ್ತಿತ್ವಕ್ಕೆ ಸೌಂದರ್ಯವತಿಯರಾದ ನೀರೆಯರು, ಸುಂದರ ಯುವತಿಯರು ಮಾರುಹೋಗಿದ್ದರು ಎಂಬುದನ್ನು ಈ ಕೋಲುಪದವು ಸೂಚ್ಯವಾಗಿ ನಿರೂಪಿಸುತ್ತದೆ. ಹೀಗೆ ವ್ಯಕ್ತಿ ವಿಷಯದ ಕೋಲುಪದಗಳ ಸಾಹಿತ್ಯವು ವ್ಯಕ್ತಿಗಳ ವೈಯಕ್ತಿಕ ವಿಷಯ ಮತ್ತು ಸಾಮಾಜಿಕ ಸೇವೆ ಜೊತೆಗೆ ಅವರ ಸಾಹಸ-ಕಾರ್ಯಗಳ ಕುರಿತಾಗಿಯೂ ಅವರ ಕುರಿತ ನಿಗೂಢವಾದ ಕೆಲವು ಸಂಗತಿಗಳನ್ನು ಈ ಕೋಲುಪದಗಳು ತೆರೆದಿಡುತ್ತವೆ.

### ೭.೪. ಹಾಸ್ಯ ವಿಷಯದ ಕೋಲುಪದಗಳ ಸಾಹಿತ್ಯ

ಕೋಲಾಟವು ಒಂದು ಮನೋರಂಜನಾ ಕಲೆಯಾಗಿದ್ದು, ನೋಡುಗರಿಗೆ ಅಥವಾ ಪ್ರೇಕ್ಷಕ ವರ್ಗಕ್ಕೆ ಭರಪೂರ ಮನೋರಂಜನೆ ಒದಗಿಸುತ್ತದೆ. ಕೋಲುಪದಗಳ ಸಾಹಿತ್ಯದಲ್ಲಿ ಶೃಂಗಾರದ

ಅಥವಾ ಪ್ರಣಯಕ್ಕೆ ಸಂಬಂಧಿಸಿದಂಥ ಹಾಡುಗಳು, ಸಾಮಾಜಿಕ ವಿಡಂಬನೆಯುಳ್ಳ ಸಾಹಿತ್ಯವನ್ನು ಹೊಂದಿರುವಂಥ ಹಾಡುಗಳು, ದೇವರ ಬಗೆಗಿನ ಪ್ರಾರ್ಥನೆ ಮಾಡುವಂಥ ಗಂಭೀರ ವಿಷಯವನ್ನು ಹೊಂದಿರುವ ಪದಗಳು, ವ್ಯಕ್ತಿ ವಿಷಯ ಅಥವಾ ಚಾರಿತ್ರಿಕ ವ್ಯಕ್ತಿಗಳ ಕುರಿತಾದ ಸಾಹಿತ್ಯಿಕ ಅಂಶಗಳು ಇವೆಲ್ಲವುಗಳ ಜೊತೆಗೆ ಕೋಲುಪದಗಳಲ್ಲಿ ವಿನೋದ ಅಥವಾ ಹಾಸ್ಯವನ್ನು ಹೊಂದಿರುವಂಥ ಸಾಹಿತ್ಯಿಕ ಅಂಶಗಳು ವ್ಯಾಪಿಸಿಕೊಂಡಿರುವುದು ಕಾಣಸಿಗುತ್ತದೆ. ಕೋಲುಪದಗಳಲ್ಲಿ ಗಂಭೀರ ಹಾಡುಗಳ ಜೊತೆಗೆ ವಿನೋದಾವಳಿಯನ್ನು ಹೊಂದಿರುವಂಥ ಸಾಹಿತ್ಯಿಕ ಅಂಶಗಳು ಕಂಡುಬರುತ್ತವೆ.

ಕೋಲಾಟ ಪ್ರದರ್ಶನ ಮಾಡುವ ಕಲಾವಿದರು ಕೋಲಾಟವನ್ನು ಪ್ರದರ್ಶನ ಮಾಡುವ ಕಾಲಕ್ಕೆ ನೋಡುಗರ ಅಥವಾ ಪ್ರೇಕ್ಷಕರ ನೋವು-ದುಃಖಗಳನ್ನು ಆ ಕ್ಷಣಕ್ಕೆ ಪರಿಹಾರ ಮಾಡುವಂಥ ಪದಗಳನ್ನು ಹಾಡಿ ಅವರ ಆ ದಿನದ ಜೀವನವನ್ನು ನೆಮ್ಮದಿಯಿಂದ ಕಳೆಯುವಂತೆ ಮಾಡುತ್ತಾರೆ. ಅಂದರೆ ಕೋಲುಗುರುಗಳು ಅಥವಾ ಕೋಲುಮೇಳಗಾರರು ಜನರ ಕಷ್ಟ-ಕೋಟಲೆಗಳನ್ನು ಮರೆಯುವಂತೆ ಮಾಡಲು ವಿನೋದಾವಳಿ ಸಾಹಿತ್ಯವನ್ನು ಹೊಂದಿರುವ ಕೋಲುಪದಗಳನ್ನು ಹಾಡಿ ನೋಡುಗರ ಅಥವಾ ಪ್ರೇಕ್ಷಕರ ಮನವನ್ನು ರಂಜಿಸುತ್ತಾರೆ. ಕೋಲುಗುರುಗಳು ಯಾವುದೋ ಒಂದು ಸನ್ನಿವೇಶವನ್ನು ಅಥವಾ ಒಂದು ಘಟನೆಯನ್ನು ಇಲ್ಲವೆ ಯಾರೋ ವ್ಯಕ್ತಿಗೆ ಸಂಬಂಧಿಸಿದಂತೆ ಕೋಲುಪದಗಳಲ್ಲಿ ತಮಾಷೆಯ ಹಾಡುಗಳನ್ನು ಹಾಡುತ್ತಾ ಕೋಲಾಟ ಪ್ರದರ್ಶನ ನೋಡಲು ಬಂದ ಜನಜಂಗುಳಿಯನ್ನು ನಗೆಗಡಲಲ್ಲಿ ಮುಳುಗಿಸುತ್ತಾರೆ. ಅಂದರೆ ಆ ಕ್ಷಣಕ್ಕೆ ತಮ್ಮ ಹಿಂದಿನ ನೋವುಗಳನ್ನೆಲ್ಲಾ ಮರೆತು ಬಿಡುವಂತೆ ಹಾಸ್ಯ ಸಾಹಿತ್ಯದ ಪದಗಳು ಮಾಡುತ್ತವೆ. ಕೋಲಾಟ ಪ್ರದರ್ಶನ ಮಾಡುವ ಕಾಲಕ್ಕೆ ಹಾಡುವ ಸಾಹಿತ್ಯದಲ್ಲಿ ಹಾಸ್ಯ ಮಾದರಿಯ ಸಾಹಿತ್ಯದ ಹಾಡುಗಳ ಪ್ರದರ್ಶನವನ್ನು ನೋಡಲು ತುಂಬಾ ಜನಜಂಗುಳಿ ಸೇರುತ್ತಿತ್ತು ಎಂದು ಕೋಲುಪದಗಳನ್ನು ಹಾಡುವ ಹಿರಿಯ ಕಲಾವಿದರಾದ 'ಮಾರಮ್ಮ' ಅವರು ಅಭಿಪ್ರಾಯಿಸಿದ್ದಾರೆ. 'ಮಾರಮ್ಮ' ಅವರು ಹಾಡಿದ ಹಾಸ್ಯ ಸಾಹಿತ್ಯದ ಕೋಲುಪದವನ್ನಿಲ್ಲಿ ಪ್ರಸ್ತಾಪಿಸಲಾಗಿದೆ.

"ಹಾಸ್ಯ ಮಾದರಿಯ ಅಥವಾ ತಮಾಷೆಯ ಕೋಲುಪದಗಳನ್ನು ಇಲ್ಲವೆ ಸೋಬಾನೆ ಪದಗಳನ್ನು ಹಾಡುತ್ತಾ ಪ್ರದರ್ಶನ ಮಾಡುವ ಕಾಲಕ್ಕೆ ಊರಿನ ಹಿರಿಯರು, ಕಿರಿಯರು, ಹೆಂಗಸರು, ಗಂಡಸರು, ಚಿಣ್ಣರು ಪ್ರತಿಯೊಬ್ಬರೂ ಬಂದು ಸೇರುತ್ತಿದ್ದರು. ಆ ಸಂದರ್ಭದಲ್ಲಿ ತಮಾಷೆಯ ಹಾಡುಗಳನ್ನು ಯಥೇಚ್ಛವಾಗಿ ಹಾಡುತ್ತಿದ್ದೆವು" ಎಂದು ಹಿರಿಯ ಕಲಾವಿದರಾದ ಸೋಬಾನೆ ಮತ್ತು ಕೋಲುಪದಗಳ ಹಾಡುಗಾರರು ಆಗಿರುವ ಕೂಡ್ಲಿಗಿ ತಾಲೂಕಿನ ಮಾಕನಡಕು ಗ್ರಾಮದ ಮಾರಮ್ಮ ಅವರು ಅಭಿಪ್ರಾಯಿಸಿದ್ದಾರೆ.

### ಹಾಸ್ಯ ಕೋಲುಪದದ ಸಾಹಿತ್ಯ

ಕೋಲನ್ನ ಕೋಲನ್ನ ಕೋಲು
ಕೋಲನ್ನ ಕೋಲನ್ನ ಕೋಲು
ಕೋಲನ್ನ ಕೋಲನ್ನ ಕೋಲು

ಕೋಲನ್ನ ಕೋಲೆ

ತ್ವಾಟದಾಗಳ ಹರಿವೆಸೊಪ್ಪು ನಾಟಿ ನಾಟಿ

ಬೆಳೆಯಲುವಾಗ ಹುಣಿಸೆ ಮರದಾಗೆ

ಹುಣಿಸೆ ಬೋಟು ಕೆಟ್ಟೆನೆಂದಾವೆ

ವಸ್ತ್ರಾವ ಹೊಚ್ಚೋದು ಕಂಡು

ಬೆಲ್ಲದ ಹಾಲು ಕಾಸೋದು ಕಂಡು

ನಿಲುವಿನ ಮ್ಯಾಗಳ ತುಪ್ಪದ

ಕುಡಿಕೆ ದಪ್ಪನ ಬಿದ್ದಾವೆ

ಕೈಯ್ಯಿ ರಾಯ ಕಲಸುತಿದ್ದ

ಬಾಯಿರಾಯ ಉಂಬುತಿದ್ದ

ಹೊಟ್ಟೆರಾಯ ಹೆಂಗೂ ಮಾಡಿ ಕುಂಡ್ರುತ್ತಿದ್ದನು

ಹೊಟ್ಟೆರಾಯ ಹೆಂಗೂ ಮಾಡಿ ಕುಂಡ್ರ ಸಮಯದಲ್ಲಿ

ಕುಂಡೆರಾಯ ಕುಯ್ ಬಯ್ ಅಂಬುತ್ತಿದ್ದನು

ಕುಂಡೆರಾಯ ಕುಯ್‌ಬಯ್ ಅಂಬೋ ಸಮಯದಲ್ಲಿ

ತಿಪ್ಪೆರಾಯ ಕೈ ಬೀಸಿ ಕರೆಯುತ್ತಿದ್ದನು.

(ವಕ್ತೃ: ಮಾರಮ್ಮ, ಮಾಕನಡಕು, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ)

ಕೋಲು ಹುಯ್ಯುವ ಕಲಾವಿದರು ಹಾಸ್ಯ ಮಾದರಿಯ ಕೋಲುಪದಗಳ ಸಾಹಿತ್ಯಕ್ಕೆ ಹೆಚ್ಚು ಆಸಕ್ತಿ ಮತ್ತು ಅಭಿರುಚಿಗಳಿಂದ ಕೋಲು ಹುಯ್ಯುವುದು ಕಂಡುಬರುತ್ತದೆ. ಜೊತೆಗೆ ಕೋಲು ಮೇಳಗಾರರು ಕೂಡ ಈ ರೀತಿಯ ಹಾಡುಗಳನ್ನು ಕುತೂಹಲ ಭರಿತರಾಗಿ ಹಾಡುತ್ತಾ ನೆರೆದ ಜನರನ್ನು ನಗಿಸುತ್ತಾ ತಾವು ನಕ್ಕು ತಮ್ಮ ಕಷ್ಟ-ಕೋಟಲೆಗಳನ್ನು ಆ ಕ್ಷಣಕ್ಕೆ ಮರೆತು ಮನಸ್ಸನ್ನು ಹಗುರ ಮಾಡಿಕೊಳ್ಳುತ್ತಿದ್ದರು.

ಹಿರಿಯ ಕಲಾವಿದರಾದ ಮಾರಮ್ಮ ಅವರು ಹಾಡಿರುವ ಈ ಹಾಸ್ಯ ಸಾಹಿತ್ಯದ ಕೋಲುಪದವು ಕೋಲುಪ್ರದರ್ಶನ ವೀಕ್ಷಿಸಲು ಬಂದ ಪ್ರೇಕ್ಷಕ ವರ್ಗಕ್ಕೆ ಕಚಗುಳಿ ಇಡುವ ಹಾಗೆಯೇ ಭಾಸವಾಗುತ್ತದೆ. ಈ ಗೀತೆಯ ಕೋಲುಪದಗಳ ರಚನಾಕಾರರಾದ ಜನಪದರು, ಹಾಡಿನ ಒಂದೊಂದು ಸಾಲಿಗೂ ಅದ್ಭುತವಾದ ಹೊಂದಿಕೆಯನ್ನು ನೀಡಿದ್ದಾರೆ. ಜನಪದರು ಸ್ವತಃ ಕಂಡುಂಡ ಅನುಭವಗಳನ್ನು ಹೆಚ್ಚಾಗಿ ಹಾಡುಗಳ ರೂಪದಲ್ಲಿ ಪರಿವರ್ತಿಸಿ ಅವುಗಳನ್ನು ಹಾಸ್ಯ ಮಾದರಿಯಲ್ಲಿ ಹಾಡುತ್ತಾ ಜನರನ್ನು ರಂಜಿಸುತ್ತಿದ್ದರು ಎಂಬುದಕ್ಕೆ ಮಾರಮ್ಮ ಹಾಡಿದ ಕೋಲುಪದವೇ ಸರಿಯಾದ ಉದಾಹರಣೆ. ಈ ಹಾಡಿನ ಆರಂಭದ ಸಾಲುಗಳಲ್ಲಿ ತೋಟದಲ್ಲಿನ ಅರಿವೆಸೊಪ್ಪಿಗೂ ಹುಣಿಸೆ ಮರದ ಹುಣಿಸೆ ಹಣ್ಣಿಗೂ ಯಾವುದೇ ರೀತಿಯ ಸಂಬಂಧವಿಲ್ಲ. ಆದರೆ ಅರಿವೆಸೊಪ್ಪು ಫಲವತ್ತತೆಯಿಂದ ಬೆಳೆದಿರುವುದನ್ನು ಕಂಡಂಥ ಹುಣಿಸೆಬೋಟು ಅಂದರೆ ಹುಣಿಸೆಕಾಯಿ ಅಥವಾ ಹಣ್ಣು ತಾನು ಕೆಟ್ಟೆನೆಂದು ಪರಿತಪಿಸುತ್ತಿರುವುದಿದೆ. ಹಾಗೆಯೇ ಬೆಲ್ಲದ ಹಾಲು ಕಾಯಿಸುವುದನ್ನು

ಕಂಡಂಥ ತುಪ್ಪ, ನಿಲುವಿನ ಮೇಲಿಂದ ದೊಪ್ಪನೆ ಬಿದ್ದಿದೆ ಎಂಬುದು ಕಂಡುಬರುತ್ತದೆ. ದೊಪ್ಪನೆ ನೆಲಕ್ಕೆ ಬಿದ್ದ ತುಪ್ಪವನ್ನು ಒಬ್ಬ ವ್ಯಕ್ತಿಯು ತನ್ನ ಕೈಗಳಿಂದ ಅದನ್ನು ತಟ್ಟೆಯಲ್ಲಿ ಹಾಕಿಕೊಂಡು ಕಲಸುತ್ತಿದ್ದ ಎಂಬುದಿದೆ. ಹೀಗೆ ಕಲಸುತ್ತಿದ್ದ ತುಪ್ಪವನ್ನು ಬಾಯಿರಾಯ ಸುಮ್ಮನಿರಲಾರದೆ ಉಂಬುತ್ತಿದ್ದನು. ತುಪ್ಪ ಎಣ್ಣೆಯ ಅಂಶವನ್ನು ಯಥೇಚ್ಛವಾಗಿ ಒಳಗೊಂಡಿದ್ದರಿಂದ ಹೊಟ್ಟೆರಾಯ ಹೇಗೋ ಮಾಡಿ ಅದನ್ನು ತನ್ನೊಳಗೆ ಸೇರಿಸುತ್ತಿದ್ದನು. ಆದರೆ ತುಪ್ಪ ಎಣ್ಣೆಯಿಂದ ಕೂಡಿದ ಜಿಡ್ಡಿನ ಪಾನೀಯವಾದ್ದರಿಂದ ಅದನ್ನು ಎಷ್ಟು ಬೇಕೋ ಅಷ್ಟು ಮಾತ್ರ ಮಿತವಾಗಿ ಹೊಟ್ಟೆಗೆ ಸೇರಿಸಬೇಕು, ಇಲ್ಲವಾದರೆ ಈ ಹಾಡಿನಲ್ಲಿ ಮುಂದುವರೆದು ಕುಂಡೆರಾಯ ಕುಯ್ ಬಯ್ ಅನ್ನುತ್ತಿದ್ದನು. ಮುಂದುವರೆದು ತಿಪ್ಪೇರಾಯ ಕೈಬೀಸಿ ಕರೆಯುತ್ತಿದ್ದನು ಎಂಬುದಾಗಿ ಕೊನೆಯಲ್ಲಿ ಹಾಸ್ಯವನ್ನು ಉಕ್ಕಿಸುವುದರ ಮುಖಾಂತರ ಜನರಲ್ಲಿ ನಗೆ ಮೂಡಿಸುತ್ತಿದ್ದವು. ಈ ರೀತಿಯ ಹಾಡುಗಳು ಸಾಹಿತ್ಯಿಕವಾಗಿ ಬಡವಾಗಿದ್ದರೂ ಕೂಡ ಆ ಕ್ಷಣಕ್ಕೆ ಜನರಲ್ಲಿನ ದುಃಖ-ದುಮ್ಮಾನಗಳಿಗೆ ಸ್ಪಂದಿಸುತ್ತಿದ್ದವು ಮತ್ತು ಸಂತೋಷವನ್ನು ಪೂರೈಸುತ್ತಿದ್ದವು ಎಂಬುದನ್ನು ಈ ಹಾಡಿನ ಮುಖೇನ ಅರಿಯಬಹುದು. ಕೋಲುಪದಗಳಲ್ಲಿ ಸಾಮಾನ್ಯ ಸಂಗತಿಯೂ ಕೂಡ ವಸ್ತುವಾಗಬಲ್ಲದು ಎಂಬುದಕ್ಕೆ ಈ ಕೋಲುಪದವೊಂದು ಸರಿಯಾದ ಉದಾಹರಣೆಯಂತೆ ಕಂಡುಬರುತ್ತದೆ. ಹಾಸ್ಯ ಕೋಲುಪದಗಳಲ್ಲಿ ಸಾಹಿತ್ಯಕ್ಕೆ ಹೆಚ್ಚು ಬೆಲೆ ಕೊಡುವುದಿಲ್ಲ. ಈ ಮಾದರಿಯ ಹಾಡುಗಳಲ್ಲಿ ಜನರನ್ನು ಆಕರ್ಷಿಸುವ ಇಲ್ಲವೆ ಪ್ರೇಕ್ಷಕರನ್ನು ರಂಜಿಸುವ, ನಗಿಸುವಂಥ ಸಾಮಾನ್ಯ ಸಂಗತಿಗಳೇ ಹಾಸ್ಯ ಮಾದರಿಯ ಕೋಲುಪದಗಳಲ್ಲಿ ಕಾಣಸಿಗುತ್ತದೆ.

**ಆಂಧ್ರ ಗಡಿಭಾಗದ ತಮಾಷೆಯ ಕೋಲುಪದ**

ಕರ್ನಾಟಕದ ಗಡಿ ಪ್ರಾಂತಗಳಿಗೆ ಹೊಂದಿಕೊಂಡಿರುವ ಆಂಧ್ರಪ್ರದೇಶದ ಗಡಿ ಪ್ರಾಂತಗಳಲ್ಲಿಯೂ ಕೂಡ ಕೋಲಾಟ ಪ್ರದರ್ಶನ ಮಾಡುವ ಕಾಲಕ್ಕೆ ಹಾಸ್ಯ ಕೋಲುಪದಗಳ ಸಾಹಿತ್ಯವನ್ನು ಹಾಡುತ್ತಾ ಪ್ರದರ್ಶನ ಮಾಡುವುದು ಕಾಣಸಿಗುತ್ತದೆ. ಈ ಭಾಗದ ಹಾಸ್ಯ ಕೋಲುಪದಗಳಲ್ಲಿಯೂ ಸಹ ಸಾಮಾನ್ಯ ಸಂಗತಿಗಳೇ ವಸ್ತುವೈವಿಧ್ಯತೆಯಾಗಿ ರೂಪುಗೊಂಡಿರುವುದಿದೆ.

ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಆಲೂರಿನಲ್ಲಿ ಸಂಗ್ರಹಿಸಿದ ಕೋಲುಪದಗಳಲ್ಲಿ ಹಾಸ್ಯ ಸಾಹಿತ್ಯವನ್ನು ಒಳಗೊಂಡ ಪದಗಳು ವಿಪುಲವಾಗಿ ಸಿಗುತ್ತವೆ. ಈ ಹಾಡುಗಳು, ನೆರೆದಿರುವ ಜನರನ್ನು ರಂಜಿಸಲು ಮತ್ತು ಅವರನ್ನು ಆಕರ್ಷಿಸಲು ಹಾಗೂ ಜನರ ಮಾನಸಿಕ ನೆಮ್ಮದಿಗಾಗಿಯೂ ಈ ರೀತಿಯ ಹಾಸ್ಯ ಮಾದರಿಯ ಸಾಹಿತ್ಯವನ್ನು ಒಳಗೊಂಡಿರುವ ಕೋಲುಪದಗಳನ್ನು ಹಾಡುತ್ತಾ ಕೋಲಾಟ ಪ್ರದರ್ಶನ ಮಾಡುವುದು ಕಂಡುಬರುತ್ತದೆ.

**ಕರ್ನೂಲು ಜಿಲ್ಲೆಯ ಆಲೂರಿನಲ್ಲಿ ಸಂಗ್ರಹಿಸಿದ ಕೋಲುಪದದ ಸಾಹಿತ್ಯ**

ಯಾವೂರೋ ಏನಾ ಬಟ್ಟ
ಏಂಟಿಕಿ ವಚ್ಚಾಡೊ ಯಮ್ಮಾ

ఏంటికి వచ్చాడో
అయ్నల్లా లంజిదాన్న సుగ్గికి
వచ్చానే సుగ్గి వొడ్లుకి వొచ్చానే
యావూరో ఏనా బట్ట
ఏంటికి వచ్చాడో యమ్మా
ఏంటికి వచ్చాడో
అయ్నల్లా లంజిదాన్న సుగ్గికి
వచ్చానే సుగ్గి వొడ్లుకి వచ్చానే
సుగ్గికి వొచ్చిన బడకావ్
ఏమ్ తింటాడో యమ్మ
ఏమ్ తింటాడో
అయ్నల్లా లంజిదాన్న కొల్ల్ ఉన్నాదె
కొల్లులొ లొట్టున్నాదె
కొల్లు ఉన్నాదె కొల్లులొ లొట్టున్నాదె
కొల్లు తాగిన బడకావ్
యాడ పడుతాడో యమ్మ
యాడ పడుతాడో
అయ్నల్లా లంజిదాన్న చావడి
ఉన్నాదె చావడి కట్టున్నాదె
కట్టమీద పండీన బడకావ్ని
ఎవుడు లేప్తాడో యమ్మ
ఎవుడు లేపుతాడో
అయ్నల్లా లంజిదాన్న కోడి
ఉన్నాదె కోడి కూకేస్తదె
కోడి ఉన్నాదె కోడి కూకేస్తదె

(వక్తృ: బసవయ్య, సిద్దాపురం, ఆలూరు తాల్లూకు, కర్నూల్ జిల్లె)

ಈ ಕೋಲುಪದವು ಹಾಸ್ಯ ಮಾದರಿಯ ಸಾಹಿತ್ಯವನ್ನು ಒಳಗೊಂಡಿದೆ. ಈ ಹಾಡಿನಲ್ಲಿ ಒಬ್ಬ ಹೆಂಗಸು ಮತ್ತು ಪರಪುರುಷನ ನಡುವಿನ ವಾದ-ಪ್ರತಿವಾದಗಳು, ಪ್ರಶ್ನೋತ್ತರಗಳ ರೂಪದಲ್ಲಿ ನಡೆದಿರುವುದು ಕಂಡುಬರುತ್ತದೆ. ಈ ಕೋಲುಪದದಲ್ಲಿ ವಲಸೆಯ ಪರಿಕಲ್ಪನೆಯನ್ನು ಒಳಗೊಂಡಿರುವುದು ಕಾಣಸಿಗುತ್ತದೆ. ಹಾಸ್ಯ ಮಾದರಿಯ ಈ ಗೀತೆಯಲ್ಲಿ ಸುಗ್ಗಿಯ ಚಿತ್ರಣವಿದೆ. ಸುಗ್ಗಿಯ ಕಾಲಕ್ಕೆ ಪರವೂರಿನಿಂದ ಒಬ್ಬ ಅಪರಿಚಿತ ವ್ಯಕ್ತಿ ವಲಸೆ ಬಂದಿರುವುದನ್ನು ಗಮನಿಸಿರುವ ಒಬ್ಬ ಸ್ತ್ರೀ ಅವನನ್ನು ಯಾವೂರು? ಏಕೆ ಬಂದಿದ್ದೀಯಾ? ಎಂದೆಲ್ಲಾ ಪ್ರಶ್ನಿಸುತ್ತಾಳೆ. ಆಗ

ಅವನು ಸುಗ್ಗಿ ಕಾಲವಿದು, ಭತ್ತದ ಕೆಲಸಕ್ಕಾಗಿ ಬೇರೆ ಊರಿನಿಂದ ವಲಸೆ ಬಂದಿದ್ದೀನಿ ಎಂದು ತಿಳಿಸುತ್ತಾನೆ. ಭತ್ತದ ಸುಗ್ಗಿಗೆ ಬಂದಿರುವ ನೀನು ಎಲ್ಲಿ ಮಲಗುತ್ತೀಯಾ? ಮತ್ತು ತಿನ್ನಲು ಊಟಕ್ಕೆ ಏನು ಮಾಡುತ್ತೀಯಾ? ಎಂದು ಕೇಳುತ್ತಾಳೆ. ಆಗ ವಲಸೆ ಬಂದ ವ್ಯಕ್ತಿ ತಿನ್ನಲು ಮತ್ತು ಕುಡಿಯಲು ಸರಾಯಿ ಇದೆ ಮತ್ತು ಮಲಗಿಕೊಳ್ಳಲು ಊರಿನ ಚಾವಡಿ ಇದೆ. ಅಲ್ಲೇ ಮಲಗ್ತೀನಿ ಎಂದು ಉತ್ತರಿಸುತ್ತಾನೆ. ಅಷ್ಟಕ್ಕೂ ಸುಮ್ಮನಿರದ ಆ ಹೆಂಗಸು, ಚಾವಡಿಯಲ್ಲಿ ಮಲಗೋ ನಿನ್ನನ್ನು ಯಾರು ಎದ್ದೇಳಿಸುತ್ತಾರೋ? ಎಂದು ಪ್ರಶ್ನಿಸುತ್ತಾಳೆ. ಅದಕ್ಕವನು ಇರಲಿ ಬಿಡು ಯಾರು ಎದ್ದೇಳಿಸುವುದು ಬೇಡ ಈ ಊರಲ್ಲಿ ಕೋಳಿ ಇದೆಯಲ್ಲಾ, ಅದು ಒಂದೆರಡು ಬಾರಿ ಕೂಗಿದಾಗ ನಾನು ಎದ್ದೇಳುತ್ತೇನೆ ಎಂದು ಉತ್ತರಿಸುತ್ತಾನೆ. ಹೀಗೆ ಹಾಸ್ಯ ಮಾದರಿಯ ಕೋಲುಪದದ ಸಾಹಿತ್ಯದಲ್ಲಿಯೂ ಕೂಡ ಈ ರೀತಿಯಾಗಿ ಪ್ರಶ್ನೋತ್ತರ ಮಾದರಿಯಲ್ಲಿ ವಾದ - ಪ್ರತಿವಾದ ನಡೆದಿರುವುದು ಕಂಡುಬರುತ್ತದೆ. ಜೊತೆಗೆ ಸುಗ್ಗಿಯ ಫಲವಂತಿಕೆಯ ಸಂಕೇತವಾಗಿ ಕೋಲಾಟವನ್ನು ಕಾಣಲಾಗುತ್ತದೆ. ಹಾಗಾಗಿ ಈ ಹಾಸ್ಯ ಮಾದರಿಯ ಹಾಡಿನಲ್ಲಿಯು ಸುಗ್ಗಿಯ ಚಿತ್ರಣವಿದೆ. ಅಲ್ಲದೆ ಗಂಡು - ಹೆಣ್ಣಿನ ನಡುವಿನ ಸಂಭಾಷಣೆಯು ಒಂದು ರೀತಿಯಲ್ಲಿ ಪ್ರಣಯದ ಸಂಕೇತವಾಗಿಯೂ ಕಾಣುತ್ತದೆ. ಅಂದರೆ ಹಾಸ್ಯ ಮಾದರಿಯ ಕೋಲುಪದಗಳಲ್ಲಿ ಶೃಂಗಾರ ಅಥವಾ ಪ್ರಣಯ ಇಲ್ಲವೇ ಗಂಭೀರ ವಿಷಯಗಳೂ ಕೂಡ ವಸ್ತುವಾಗಬಲ್ಲವು ಎಂಬುದಕ್ಕೆ ಈ ತೆಲುಗು ಕೋಲುಪದವನ್ನು ಗಮನಿಸಬಹುದು.

ಹೀಗೆ ಕರ್ನಾಟಕ - ಆಂಧ್ರ ಗಡಿ ಪ್ರಾಂತ ಪರಿಸರದಲ್ಲಿ ಕನ್ನಡ - ತೆಲುಗು ಕೋಲುಪದಗಳ ಸಾಹಿತ್ಯವನ್ನು ಗಮನಿಸಿದಾಗ ಹಾಸ್ಯ ಮಾದರಿಯ ಕೋಲುಪದಗಳ ಸಾಹಿತ್ಯಕ್ಕೆ ಹೆಚ್ಚು ಒತ್ತು ನೀಡಿರುವುದು ಕಾಣಸಿಗುತ್ತದೆ. ಈ ಎರಡೂ ರಾಜ್ಯಗಳ ಗಡಿಭಾಗಗಳಲ್ಲಿ ಎಲ್ಲಾ ಮಾದರಿಯ ಕೋಲುಪದಗಳು ಸಿಗುತ್ತವೆ. ಕರ್ನಾಟಕದ ಗಡಿಭಾಗದಲ್ಲಿ ಕನ್ನಡ ಕೋಲುಪದಗಳು ಜೊತೆಗೆ ತೆಲುಗು ಭಾಷೆಯ ಕೋಲುಪದಗಳು ದೊರಕುತ್ತವೆ. ಹಾಗೆಯೇ ಆಂಧ್ರಪ್ರದೇಶದ ಗಡಿ ಪ್ರಾಂತ್ಯಗಳಲ್ಲಿ ತೆಲುಗು ಕೋಲುಪದಗಳು ಸಿಗುವುದರ ಜೊತೆಗೆ ಕನ್ನಡ ಕೋಲುಪದಗಳು ಸಿಗುತ್ತವೆ. ಹೀಗೆ ಕರ್ನಾಟಕ - ಆಂಧ್ರ ಗಡಿ ಭಾಗದ ಕೋಲುಪದಗಳ ಸಾಹಿತ್ಯದಲ್ಲಿ ಭಾಷೆಯಿಂದ ಭಿನ್ನವಾಗಿದ್ದರೂ ಅವುಗಳ ಸಾಹಿತ್ಯದ ಅಂಶಗಳು ಭಿನ್ನವಾಗಿದ್ದರೂ ಸಹ ವಸ್ತು ಒಂದೇ ಆಗಿರುತ್ತದೆ. ಈ ಗಡಿ ಪ್ರಾಂತಗಳ ಕೋಲುಪದಗಳಲ್ಲಿ ವ್ಯಕ್ತಿ ವಿಷಯದ ಕೋಲುಪದಗಳು, ಶೃಂಗಾರ ಸಂಬಂಧಿ ಕೋಲುಪದಗಳು ಹಾಸ್ಯ ಮಾದರಿಯ ಕೋಲುಪದಗಳು ಮತ್ತು ಪ್ರಾರ್ಥನೆ ಅಥವಾ ದೇವರನ್ನು ಸ್ತುತಿಸುವ ಕೋಲುಪದಗಳ ಸಾಹಿತ್ಯವು ಕರ್ನಾಟಕ ಆಂಧ್ರ ಗಡಿಭಾಗಗಳ ಪ್ರಾಂತ ಪರಿಸರದಲ್ಲಿ ತುಂಬಾ ವಿಪುಲವಾಗಿ ಕಂಡುಬರುತ್ತದೆ.

### ೭.೫. ಕೋಲುಪದಗಳ ಭಾಷೆ

ಮಾನವರು ಇತರ ಪ್ರಾಣಿಗಳಿಗಿಂತ ಭಿನ್ನರಾಗಿ - ಭಿನ್ನವಾಗಿ ನಿಲ್ಲುವುದು ಭಾಷೆ ಮತ್ತು ಯೋಚನೆಯಿಂದ. ಭಾಷೆಯ ಮೂಲಕವೆ ಭಾಷಿಕರ ನಡೆನುಡಿ, ಆಚಾರ-ವಿಚಾರಗಳು, ರೂಢಿ-

ಸಂಪ್ರದಾಯಗಳು ಹಾಗೂ ಪರಸ್ಪರರಲ್ಲಿನ ಮನಸ್ಸಿನ ಭಾವನೆಗಳನ್ನು ತಿಳಿಯಲು ಭಾಷೆ ಪ್ರಮುಖ ಅಸ್ತ್ರವಾಗಿದೆ. ಭಾಷೆ ಕೇವಲ ಪದಗಳ ವ್ಯಾಕಾರಣಾಂಶಗಳನ್ನಷ್ಟೇ ಒಳಗೊಳ್ಳದೆ ಭಾಷೆಯನ್ನಾಡುವ ಜನರ ಜೀವನ ಕ್ರಮದ ಹತ್ತು ಹಲವು ಮಾದರಿಯ ಅಂಶಗಳನ್ನು ಒಳಗೊಂಡಿರುತ್ತದೆ. ಭಾಷೆ ಮಾನವರ ಪ್ರಮುಖ ಅಂಗವಾಗಿಯೂ, ವಾಹಕವಾಗಿಯೂ ಕೆಲಸ ಮಾಡುತ್ತದೆ. ಭಾಷೆ ನಿಂತ ನೀರಲ್ಲ. ಅದು ನಿರಂತರವಾಗಿ ಬದಲಾಗುತ್ತ ಬೆಳೆಯುತ್ತಿರುತ್ತದೆ. ಭಾಷೆ ಸಂವಹನ ನಡೆಸುವ ಕಾಲಕ್ಕೆ ಬದಲಾವಣೆಯಾಗಲು ಭಾಷೆಯಲ್ಲಿ ಸರಳ ಮತ್ತು ಸುಲಭತೆ ಕಾಣುವ ಉದ್ದೇಶದಿಂದ ಮಾನವರ ಜೀವನ ಬದಲಾವಣೆಗಳಿಗೆ ಅಥವಾ ಪರಿವರ್ತನೆಗೆ ಭಾಷೆ ಬಹುಮುಖ್ಯ ಕಾರಣವಾಗುತ್ತದೆ. ಭಾಷೆಯಿಂದ ಮಾನವನಲ್ಲಿ ರೂಢಿ-ಸಂಪ್ರದಾಯ, ಆಚಾರ-ವಿಚಾರಗಳು ನಡೆ-ನುಡಿಗಳು ಕ್ಷಣದಿಂದ ಕ್ಷಣಕ್ಕೆ ದಿನದಿಂದ ದಿನಕ್ಕೆ ವ್ಯತ್ಯಾಸಗಳಾಗುತ್ತವೆ. ಜೊತೆಗೆ ಬದಲಾಗುತ್ತದೆ. ಭಾಷೆ ಮನುಷ್ಯನಲ್ಲಿನ ಮೃಗತ್ವವನ್ನು ಹೋಗಲಾಡಿಸಿ ಅವನಲ್ಲಿ ನಿಜವಾದ ಮಾನವೀಯತೆ ಮತ್ತು ಸಂಸ್ಕೃತಿಯನ್ನು ನೆಲೆಸುವಂತೆ ಮಾಡುತ್ತದೆ.

ಮಾನವರಿಗೆ ಸಂಸ್ಕೃತಿಯ ಭಾಗವಾಗಿರುವ ರೂಢಿ-ಸಂಪ್ರದಾಯಗಳು, ಉಡುಗೆ-ತೊಡುಗೆ, ನಡೆ-ನುಡಿ, ಆಚಾರ-ವಿಚಾರ ಇತ್ಯಾದಿಗಳು ಹುಟ್ಟಿನಿಂದಲೇ ಬಂದಿರುವುದಿಲ್ಲ. ಇವೆಲ್ಲವೂ ಅವನ ಕಲಿಕೆಯಿಂದ ಪರಿಶ್ರಮದಿಂದ ಕಲಿತು ಇತರರೊಡನೆ ಸೇರಿ ಅಭಿವ್ಯಕ್ತಪಡಿಸಿದಾಗ ಅವರಲ್ಲಿನ ಸಂಸ್ಕೃತಿಯು ತಿಳಿದುಬರುತ್ತದೆ. ಪ್ರತಿಯೊಂದು ಸಂಗತಿಯನ್ನು ಮನುಷ್ಯ ತನ್ನ ಪರಿಸರದಿಂದ ಕಲಿತುಕೊಳ್ಳುತ್ತಾನೆ ಮತ್ತು ಉತ್ತಮಪಡಿಸಿಕೊಳ್ಳುತ್ತಾನೆ. ಹೀಗೆ ಹುಟ್ಟಿನಿಂದ ಬಾರದೆ ಮನುಷ್ಯ ತನ್ನ ಪರಿಸರದಿಂದ ಕಲಿತುಕೊಳ್ಳುವ ಭಾಷೆ, ಉಪಕರಣಗಳ ತಯಾರಿಕೆ. ಕಲೆ, ವಿಜ್ಞಾನ, ಧರ್ಮ ಇವೆಲ್ಲವೂ ಸಂಸ್ಕೃತಿಯಲ್ಲಿ ಸೇರಿವೆ. ಈ ಸಂಸ್ಕೃತಿಯನ್ನು ಸೇರಿಸಿಕೊಂಡು ಮನುಷ್ಯ ಪ್ರತಿಯೊಂದನ್ನು ಕಲಿತುಕೊಳ್ಳುತ್ತಾನೆ. ಒಂದು ಪ್ರದೇಶವಿರಲಿ, ಹಲವು ಮಾದರಿಯ ಸಂಸ್ಕೃತಿ, ನಡೆ-ನುಡಿ, ಆಚಾರ-ವಿಚಾರ, ರೂಢಿ-ಸಂಪ್ರದಾಯಗಳನ್ನು ಮನುಷ್ಯ ತನ್ನ ಅನುಕೂಲಕ್ಕೆ ಬಳಸಿಕೊಂಡು ಪ್ರತಿಯೊಂದನ್ನು ತಿಳಿಯುವ ಪ್ರಯತ್ನ ಮಾಡುತ್ತಾನೆ ಮತ್ತು ತಿಳಿಯುತ್ತಾನೆ.

ಕರ್ನಾಟಕ - ಆಂಧ್ರ ಗಡಿ ಪ್ರಾಂತ ಪರಿಸರದ ಪ್ರದೇಶಗಳು ಭೌಗೋಳಿಕವಾಗಿ, ಸಾಂಸ್ಕೃತಿಕವಾಗಿ, ಭಾಷಿಕವಾಗಿ, ಆಡಳಿತಾತ್ಮಕವಾಗಿ ಭಿನ್ನ ಭಿನ್ನ ಪರಿಸರಕ್ಕೆ ಹೊಂದಿಕೊಂಡಿವೆ. ಭಿನ್ನ-ಭಿನ್ನ ಭಾಷೆಗಳನ್ನು ರೂಢಿಸಿಕೊಂಡಿವೆ. ಭಿನ್ನ ಸಂಸ್ಕೃತಿಯನ್ನು, ಭಿನ್ನ ಸಮುದಾಯಗಳನ್ನು ಸೇರಿಸಿಕೊಂಡಿವೆ. ಕರ್ನಾಟಕ-ಆಂಧ್ರಪ್ರದೇಶದ ಗಡಿ ಭಾಗದ ಜನರು ಭಾಷಿಕವಾಗಿ ಆಯಾ ರಾಜ್ಯಗಳಿಗೆ ಸಂಬಂಧಿಸಿದಂತೆ ಕನ್ನಡ-ತೆಲುಗು ಭಾಷೆಗಳನ್ನು ಮಾತೃಭಾಷೆಗಳನ್ನಾಗಿ ಹೊಂದಿದ್ದಾರೆ. ಆಯಾ ರಾಜ್ಯದ ಗಡಿ ಭಾಗದ ಜನತೆಯು ಮಾತೃಭಾಷೆಯನ್ನು ಮಾತನಾಡುವುದರ ಜೊತೆಗೆ ನೆರೆರಾಜ್ಯದ ಭಾಷೆ, ಸಂಸ್ಕೃತಿ, ಕಲೆ ಮತ್ತು ಆಚರಣೆಗಳನ್ನು ತಮ್ಮದೆಂಬಂತೆ ರೂಢಿಸಿಕೊಂಡು ಬಂದಿದ್ದಾರೆ. ಹಾಗೆಯೇ ಎರಡೂ ರಾಜ್ಯಗಳ ನಡುವೆ ಕೊಡು-ಪಡೆಯು ಹಲವು ಶತಮಾನಗಳಿಂದ ನಡೆದಿದೆ. ಪ್ರಸ್ತುತದಲ್ಲೂ ಅದು ಮುಂದುವರಿದುಕೊಂಡು ಬಂದಿದೆ.

ಕರ್ನಾಟಕ-ಆಂಧ್ರ ಗಡಿ ಪರಿಸರದ ಜನತೆ ಹಲವು ಭಾಷೆ, ಸಂಸ್ಕೃತಿಗಳನ್ನು ತಮ್ಮೊಳಗೆ ರೂಢಿಸಿಕೊಂಡು ಬಂದಿದ್ದಾರೆ. ಹಾಗೆಯೇ ಗಡಿಭಾಗದಲ್ಲಿ ನೆಲೆಸಿರುವ ಬೇರೆ ಬೇರೆ ಸಮುದಾಯಗಳು ಐಕ್ಯತಾ ಮನೋಭಾವದಿಂದ ಭಾಷಾ ಭೇದವಿಲ್ಲದೆ, ಪ್ರಾಂತ ಭೇದವಿಲ್ಲದೆ ಜೀವನ ಸಾಗಿಸುತ್ತಿರುವುದು ಕಾಣಸಿಗುತ್ತದೆ.

ಭಾಷಿಕವಾಗಿ ಗಡಿನಾಡು ತುಂಬಾ ವಿಶಿಷ್ಟತೆಯಿಂದ ಕೂಡಿದೆ. ಕರ್ನಾಟಕ - ಆಂಧ್ರಪ್ರದೇಶದ ಗಡಿ ಪರಿಸರವು ಹಲವು ಭಾಷೆಗಳನ್ನು ರೂಪಿಸಿಕೊಂಡಿದೆ. ಈ ಭಾಗದಲ್ಲಿ ಹಲವು ಭಾಷೆ ಮಾತನಾಡುವ ಸಮುದಾಯಗಳು ಗಡಿ ಪರಿಸರದಲ್ಲಿ ನೆಲೆಸಿರುವುದರಿಂದ ಗಡಿ ಪರಿಸರವು ದ್ವಿಭಾಷಿಕ ನೆಲೆಯೆನಿಸಿಕೊಂಡಿದೆ. ಗಡಿಪ್ರಾಂತ ಪರಿಸರದಲ್ಲಿ ಹಲವು ಪ್ರಕಾರವಾದ ಜಾನಪದೀಯ ಕಲೆಗಳು, ಆಟಗಳು ಮತ್ತು ಸಂಸ್ಕೃತಿಯನ್ನು ಗಡಿನಾಡು ತನ್ನೊಳಗೆ ಗರ್ಭೀಕರಿಸಿಕೊಂಡು ಬಂದಿದೆ. ಗಡಿ ಪರಿಸರದ ಯಾವುದೇ ಜಾನಪದ ಕಲೆಯ ಪ್ರಕಾರವಿರಲಿ ಅದು ತನ್ನೊಳಗೆ ಕನಿಷ್ಠ ಎರಡು ಭಾಷೆಗಳಿಂದ ಮಿಳಿತವಾಗಿರುವುದು ಕಂಡು ಬರುತ್ತದೆ. ಕರ್ನಾಟಕ - ಆಂಧ್ರ ಗಡಿ ಪರಿಸರದಲ್ಲಿ ದ್ವಿಭಾಷಿಕವಾಗಿಯೇ ಜಾನಪದೀಯ ಕಲೆಗಳನ್ನು ರೂಢಿಸಿಕೊಂಡು ಬಂದಿರುವುದು ಕಾಣಸಿಗುತ್ತದೆ. ಉದಾಹರಣೆಗೆ ಬುರ್ರಕಥಾ, ಸೋಬಾನೆಪದಗಳು, ಭಜನೆಪದಗಳು, ದಾಸರಪದಗಳು, ಯಕ್ಷಗಾನ, ಬಯಲಾಟ ಮತ್ತು ಕೋಲಾಟ ಹೀಗೆ ಹತ್ತು ಹಲವು ತೆರನಾದ ಜಾನಪದ ಕಲೆಗಳು ಗಡಿಪರಿಸರದಲ್ಲಿ ಎರಡು ಭಾಷೆಗಳಲ್ಲಿ ಪ್ರದರ್ಶನಗೊಳ್ಳುವುದು ಕಾಣಸಿಗುತ್ತದೆ.

ಕರ್ನಾಟಕ - ಆಂಧ್ರ ಗಡಿನಾಡಿನ ಪರಿಸರದ ಕೋಲುಪದಗಳು ಎರಡು ಭಾಷೆಗಳಲ್ಲಿ ಕಾಣಸಿಗುತ್ತವೆ. ಜೊತೆಗೆ ಕನ್ನಡ - ತೆಲುಗು ಎರಡೂ ಭಾಷೆಗಳನ್ನು ಒಂದೇ ಕೋಲುಪದವು ಸೇರಿಸಿಕೊಂಡು ದ್ವಿಭಾಷಿಕತೆಯನ್ನು ಒಳಗೊಂಡಿರುವುದು ಕಂಡುಬಂದಿದೆ. ಅಷ್ಟೇ ಅಲ್ಲದೇ ಗಡಿ ಭಾಗದ ಕೋಲುಪದಗಳಲ್ಲಿ ನುಡಿಬೆರಕೆ ಜೊತೆಗೆ ನುಡಿ ಜಿಗಿತಗಳು ಆಗುವುದು ಕಂಡುಬರುತ್ತದೆ. ಕನ್ನಡ ಕೋಲುಪದಗಳನ್ನು ಹಾಡುತ್ತಾ ಕೋಲಾಟ ಪ್ರದರ್ಶನ ಮಾಡುವ ಕಾಲಕ್ಕೆ ಕನ್ನಡ ಕೋಲುಪದದೊಂದಿಗೆ ತೆಲುಗಿನ ಒಂದು ಇಲ್ಲವೆ ಎರಡು ನುಡಿಗಳು ಸೇರಿಕೊಂಡು ನುಡಿಬೆರಕೆ ಆಗುವುದಿದೆ. ಗಡಿ ಭಾಗದಲ್ಲಿ ಕನ್ನಡ, ತೆಲುಗು, ಉರ್ದು ಇತ್ಯಾದಿ ಭಾಷೆಗಳನ್ನು ಮಾತನಾಡುವವರು ಒಂದೆಡೆ ನೆಲೆಸಿರುವುದರಿಂದ ಈ ಭಾಗದ ಜನಪದ ಕಲೆಗಳನ್ನು ಪ್ರದರ್ಶನ ಮಾಡುವ ಕಾಲಕ್ಕೆ ಕನಿಷ್ಠ ಎರಡು ಭಾಷೆಗಳು ಒಂದು ಪದದಲ್ಲಿ ಅಥವಾ ಹಾಡಿನಲ್ಲಿ ಸೇರಿ ಹೋಗಿರುವುದು ಕಂಡುಬರುತ್ತದೆ.

ಗಡಿಭಾಗದಲ್ಲಿ ಕೋಲಾಟ ಪ್ರದರ್ಶನ ಮಾಡುವ ಕಾಲಕ್ಕೆ ಕನ್ನಡ ಕೋಲುಪದವನ್ನು ಹಾಡುತ್ತಾರೆ. ಆ ಸಂದರ್ಭದಲ್ಲಿ ಕನ್ನಡ ಹಾಡಿನಲ್ಲಿ ತೆಲುಗಿನ ನುಡಿಯೊಂದು ಸೇರಿ ನುಡಿಬೆರಕೆ ಯಾಗಿರುವುದು ಕಂಡುಬಂದಿದೆ. ಉದಾಹರಣೆಗೆ -

ಟಗರು ಟಗರು 'ಪೋಟುಲಾಡೆ'
ಗೆಜ್ಜೆ ಘಲ್ಲೆಂದವೊ

ಮಾಳಿಗೆ ಮೇಗಳ ಮಜ್ಜಿಗೆ ಸಾರು
ಗಾಳಿ ಬೋರಂದವೋ
ಕಣ್ಣಿ ತಾರ ಕಣ್ಣಿಯೊಂದು
ದನಕಟ್ಟ ಕಣ್ಣಿಯೋ
ಸರಪಣಿ ತಾರ ಸರಪಣಿಯೋ
ಸರಳೆಮ್ಮೆ ಕಟ್ಟ ಸರಪಣಿಯೋ
ಟಗರು ಟಗರು ಪೋಟುಲಾಡೆ
ಗೆಜ್ಜೆ ಘಲ್ಲೆಂದವೊ

(ವಕ್ತೃ: ಬೋಸಯ್ಯ, ಬೋರಯ್ಯ, ಬೋಸೇದೇವರಹಟ್ಟಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ)

ಈ ಕೋಲುಪದವು ಕನ್ನಡದ ಕೋಲುಪದವಾಗಿದ್ದು, ಈ ಹಾಡಿನಲ್ಲಿ ತೆಲುಗಿನ ನುಡಿಯೊಂದು ಸೇರಿಕೊಂಡಿದೆ. ಗಡಿಭಾಗದ ಕೋಲುಪದಗಳ ವೈಶಿಷ್ಟ್ಯಗಳಲ್ಲಿ ಇದು ಒಂದು. ಅಂದರೆ ಕನ್ನಡ ನಾಡಿನ ಕೋಲುಪದದಲ್ಲಿ ತೆಲುಗಿನ ನುಡಿ ಸೇರಿಹೋಗಿರುವುದು ಈ ಕೋಲುಪದದಲ್ಲಿ ಕಾಣಸಿಗುತ್ತದೆ. ಈ ಕೋಲುಪದವು ಆಂಧ್ರಪ್ರದೇಶದ ಗಡಿ ಭಾಗಕ್ಕೆ ಹೊಂದಿಕೊಂಡಿರುವ ಕರ್ನಾಟಕದ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ನಾಯಕನಹಟ್ಟಿ ಪರಿಸರದಲ್ಲಿ ದೊರೆತಿದೆ. ನಾಯಕನಹಟ್ಟಿ ಪರಿಸರವು ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ರಾಯದುರ್ಗದ ಗಡಿಯೊಂದಿಗೆ ಸಾಮರಸ್ಯವಿರಿಸಿಕೊಂಡಿದೆ. ಹಾಗಾಗಿ ಕನ್ನಡ ಮಾತನಾಡುವ ಕನ್ನಡಿಗರ ಕೋಲುಪದಗಳಲ್ಲಿ ಸಹಜವಾಗಿ ತೆಲುಗಿನ ನುಡಿಗಳು ಸೇರಿ ಹೋಗಿವೆ ಮತ್ತು ನುಡಿಬೆರಕೆ ಆಗುವುದು ಈ ಭಾಗದ ಕೋಲುಪದಗಳಲ್ಲಿ ಗೋಚರಿಸುತ್ತದೆ.

'ಟಗರು ಟಗರು ಪೋಟುಲಾಡೆ ಗೆಜ್ಜೆ ಘಲ್ಲೆಂದವೊ' ಎನ್ನುವಂಥ ಈ ಕೋಲುಪದದ ಸಾಲಿನಲ್ಲಿ ಎರಡು ಗಂಡು ಕುರಿಗಳ ಕಾಳಗದ ಚಿತ್ರಣವಿದೆ. ಇಲ್ಲಿ ತೆಲುಗಿನ 'ಪೋಟುಲಾಡೆ' ಎನ್ನುವಂಥ ಪದವು ಸೇರಿ ನುಡಿಬೆರಕೆ ಆಗಿದ್ದು ಕನ್ನಡದಲ್ಲಿ ಈ ಪದದ ಅರ್ಥ. 'ಗುದ್ದಾಡು, ಇರಿದಾಡು' ಎನ್ನುವಂಥ ಅರ್ಥವನ್ನು ಸೂಚಿಸುತ್ತದೆ.

ಕರ್ನಾಟಕ - ಆಂಧ್ರ ಗಡಿ ಪರಿಸರದ ಕೋಲುಪದಗಳು ಸಾಮಾನ್ಯವಾಗಿ ಆಡುಭಾಷೆಯಲ್ಲಿ ಕಂಡು ಬರುತ್ತವೆ. ಈ ಎರಡೂ ರಾಜ್ಯಗಳ ಗಡಿಪ್ರಾಂತಗಳಲ್ಲಿ ಕೋಲುಪದಗಳನ್ನು ಹಾಡುವ ಕಾಲಕ್ಕೆ ಕೆಲವು ಹಾಡುಗಳಲ್ಲಿ ಅಥವಾ, ನುಡಿಗಳಲ್ಲಿ ಶಬ್ದಾದಿಯ 'ಕ'ಕಾರದಲ್ಲಿಯ 'ಅ' ಧ್ವನಿ 'ಓ' ಆಗಿ ಪರಿವರ್ತನೆ ಹೊಂದುವುದು ಕೋಲುಪದಗಳಲ್ಲಿ ಕಂಡುಬರುತ್ತದೆ ಮತ್ತು ಗಡಿ ಭಾಗದ ಜನರ ಆಡುನುಡಿಗಳಲ್ಲಿಯೂ ಸಹ ಈ ರೀತಿಯ ಉದಾಹರಣೆಗಳು ಕಾಣಸಿಗುತ್ತವೆ.

ಗಡಿಭಾಗದ ಜನರ ಆಡುನುಡಿಗಳಲ್ಲಿ ಕ+ಅ, ಕ್+ಓ ಆಗಿರುವುದಕ್ಕೆ ಉದಾಹರಣೆ -

ಕಣ್ಣು > ಕೊಣ್ಣು

ಕಲ್ಲು > ಕೊಲ್ಲು

ಕಬ್ಬು > ಕೊಬ್ಬು

ಕಪ್ಪು > ಕೊಪ್ಪು

ಇಲ್ಲಿ ಪದದಲ್ಲಿನ ಆರಂಭದಲ್ಲಿರುವ 'ಅ' ಧ್ವನಿಯು 'ಒ' ಧ್ವನಿ ಆಗಿರುವುದು ಕಂಡು ಬರುತ್ತದೆ. ಈ ತರಹದ ಉದಾಹರಣೆಗಳು ಗಡಿ ಭಾಗದ ಜನರ ಆಡುನುಡಿಯಲ್ಲಿ ಮಾತ್ರವಲ್ಲದೆ ಅವರು ಆಡುವ ಕಲೆಗಳಲ್ಲೂ ಮತ್ತು ಕೋಲುಪದಗಳ ಸಾಹಿತ್ಯದಲ್ಲೂ ಸಹ ಗೋಚರಿಸುತ್ತದೆ.

'ಕಣ್ಣು' ಎನ್ನುವುದನ್ನು 'ಕೊಣ್ಣು' ಎಂದು ಪ್ರಸ್ತಾಪಿಸಿರುವ ಒಂದು ಕೋಲುಪದವನ್ನು ಇಲ್ಲಿ ಉದಾಹರಣೆಯಾಗಿ ನೋಡಬಹುದು.

ಇಂಥಾ ಬುದ್ಧಿವಂತನ ಬಾರ ಗೆಜ್ಜಲು
ಪಕೀರ ಗೆಜ್ಜಪ್ಪ ನೀ ಜೋಳಿಗೇರಿ
ಉರಿಗಜ್ಜರಿ ಯಾವ್ಯಾಳ ಉರಿಗಜ್ಜರಿ
ಯಾವ್ಯಾಳ ಕೊರಳಗಂಗಿನ ಸರ
ಮರಕಟ ಶೃಂಗಾರ ಹಾಕಿದ ಸಿತ್ತಾರ
ಹಣೆಮೇಲೆ ಬಾಸಿಂಗು ಕಾಲ್ಗೆಜ್ಜೆ ರಬ್ಬಾರು
ನಿನ್ನೆಜ್ಜೆ ಬಿಟ್ಟಲ್ಲಿ ಕೊಟ್ಟರೊಂದು ಐನೂರು
ಎಲ್ಲ ವಿತ್ತನ ಒಳಗೆ ಬುದ್ಧಿತಿನ್ನೇ ತೇರು
ಜೋಳಿಗೇರುವ ತೇರು ಯಾವುದಯ್ಯಾ ಫಕೀರ
ಇಂಥಾ ಮುಂದ ಮುಂದಲ ತೇರು ಎಳೆಯ
ಬೇಕಾದರೆ ಗೆದ್ದಪ್ಪ ನೀ ಜೋಳಿಗೇರಿ
ಇಂಥಾ ಬುದ್ಧಿವಂತನ ಬಾರ ಗೆಜ್ಜಲು
ಫಕೀರ ಗೆಜಪ್ಪ ನೀ ಜೋಳಿಗೇರಿ
ಪುಡಿ ಮಾದು 'ತಿಮ್‌ತಿತ್ತು' ಪುಡಿಮಾದು
'ತಿಮ್‌ತಿತ್ತು' ಪುಷ್ಠಿ ಮೈ ಒಳಗಿತ್ತು
ಬಾಲಿಲ್ಲದ ಬಸವಣ್ಣ ಬಾಲ ಬಹು ಸಣ್ಣಿತ್ತು
ತಾಯೀ ಅಮ್ಮನಾ ಮೋಹ ಅದರ ಮೇಲಿತ್ತು
ಮೂರು ಗುಡ್ಡದ ನಡುವೆ ಹುಲಿ ಕೂಡ ಗೆದ್ದಿತ್ತು
ಪಾರಾಗಿ ಬಂದಿತ್ತು ಪರಶುರಾಮನ ಗೆದ್ದಿತ್ತು
ಗೆದ್ದಪ್ಪ ನೀ ಜೋಳಿಗೇರಿ
ಇಂಥಾ ಬುದ್ಧಿವಂತನ ಬಾರ ಗೆಜ್ಜಲು
ಫಕೀರ ಗೆದ್ದಪ್ಪ ನೀ ಜೋಳಿಗೇರಿ |೨|
ಮುತ್ತಿನಾರತಿ ತಂದು ಮುತ್ತಿನಾರತಿ
ತಂದು ಮುಖದ ಮೇಲೆ ತೆಗೆದಾರೆ

ನಿನ್ನ ವೈರಿನ ತಂದು ಬಲಗಡೆ

ಕಟ್ಟಿದರೆ 'ಕೊಣ್ಣು' ತೆಗೆದು ನೋಡ್ಲಿಲ್ಲ

ಎತ್ತೋ ನಿನ್ನಂಥ ಬಸವಣ್ಣ ಮನೆ

ಒಳಗಿದ್ದರೆ ಬಡವ ರ್‍ಯಾತಕಾದರಣ್ಣ

ಇಂಥ ಬುದ್ಧಿವಂತನ ಬಾರ ಗೆಜ್ಜಲ

ಫಕೀರ ಗೆಜ್ಜಪ್ಪ ನೀ ಜೋಳಿಗೇರಿ

(ವಕ್ತೃ: ತಿಕ್ಕಸ್ವಾಮಿ, ಹೊಳಗುಂದ, ಆಲೂರು ತಾಲ್ಲೂಕು ಕರ್ನೂಲು ಜಿಲ್ಲೆ)

ಈಗಾಗಲೇ ಪ್ರಸ್ತಾಪಿಸಿರುವಂತೆ ಗಡಿಭಾಗದ ಜನರ ಭಾಷೆಯಲ್ಲಿ ಅಥವಾ ಆಡುನುಡಿಗಳಲ್ಲಿಯೂ 'ಕ'ಕಾರದಲ್ಲಿಯ 'ಅ' ಧ್ವನಿಯ ಮುಂದೆ 'ಒ' ಧ್ವನಿ ಬಂದಿರುವುದನ್ನು ಗಮನಿಸಿದ್ದೇವೆ. ಅದರಂತೆ ಕೋಲು ಪದಗಳಲ್ಲಿಯೂ ಕೂಡ ಈ ರೀತಿಯ ಉದಾಹರಣೆಗಳನ್ನು ಕಾಣಸಿಗುತ್ತವೆ. ಇಲ್ಲಿ ಪ್ರಸ್ತಾಪಿಸಿರುವ ಕೋಲುಪದದಲ್ಲಿ 'ಕಣ್ಣು' ಎನ್ನುವಂಥ ಪದವೊಂದು 'ಕೊಣ್ಣು' ಎಂದಾಗಿರುವುದು ಕಂಡು ಬಂದಿದೆ. ಅಂದರೆ ಕೋಲುಪದಗಳಲ್ಲಿಯೂ ಸಹ 'ಕ'ದಲ್ಲಿಯ 'ಅ' ಧ್ವನಿಯನ್ನು ಬಿಟ್ಟು 'ಒ' ಧ್ವನಿಯನ್ನು ಸೇರಿಸಿಕೊಂಡಿರುವುದು ಕಂಡು ಬರುತ್ತದೆ. ಅಷ್ಟೆ ಅಲ್ಲದೆ ಇದೇ ಕೋಲುಪದದಲ್ಲಿ 'ತಿನ್ನುತ್ತಿತ್ತು' ಎನ್ನುವ ಪದಕ್ಕೆ ಬದಲಾಗಿ 'ತಿಮ್‌ತಿತ್ತು' ಎಂದು ಪ್ರಸ್ತಾಪಿಸಿರುವುದು ಕಂಡುಬಂದಿದೆ. 'ನ' ಕಾರಕ್ಕೆ ಬದಲಾಗಿ 'ಮ್' ಕಾರವು ಸ್ಥಾನ ಪಡೆದಿರುವುದು ಕಂಡುಬರುತ್ತದೆ.

ನ್ ಕಾರದ ಸ್ಥಾನದಲ್ಲಿ>ಮ್ ಕಾರವು ಸ್ಥಾನ ಪಡೆದಿದೆ.

ಕರ್ನಾಟಕ-ಆಂಧ್ರ ಗಡಿ ಪರಿಸರದ ಜನರು ಆಡುನುಡಿಯಲ್ಲಿ ಹೇಗೆ ಸಂವಹನ ನಡೆಸುತ್ತಾರೋ ಹಾಗೆಯೇ ಕನ್ನಡ - ತೆಲುಗು ಕೋಲುಪದಗಳಲ್ಲಿಯೂ ಸಹ ಅವರಾಡುವ ಆಡುನುಡಿಗಳ ಮಾದರಿಯಲ್ಲಿಯೇ ಭಾಷೆಯೊಂದು ತೆರೆದುಕೊಂಡಿರುತ್ತದೆ. ತೆಲುಗು ಕೋಲುಪದಗಳನ್ನು ಹಾಡುವ ಕಾಲಕ್ಕೆ ಶಬ್ದಾದಿಯ 'ಚ' ಕಾರದ ಸ್ಥಾನದಲ್ಲಿ 'ಸ' ಕಾರವು ಸ್ಥಾನ ಪಡೆದಿರುವುದು ಕಂಡುಬರುತ್ತದೆ.

ಚ > ಸ ಕಾರ ಆಗಿರುವ ಒಂದು ಕೋಲುಪದವನ್ನು ಇಲ್ಲಿ ಉದಾಹರಣೆಯಾಗಿ ನೋಡಲಾಗಿದೆ.

ಸೂತಮು ಸೂತಮು ಏಮಿ ಸೂತಮು

ಮಲ್ಲಯ್ಯ ಎದ್ದುಲು ಡಿಕ್ಕೆ ಸೂತಮು

ಪಾರಿತೆ ಬಿಸಲುರುವ ಪರುವ ಸಾಲದೋ

ನಿಲ್ಸಿತೇ ಉಟುಕುಂಟಾ ನೀಲಾ ಸಾಲದೋ

ಕೋಲು ಕೋಲನಿ ಕೋಲೆ

ಕೋಲನ್ನ ಕೋಲೆ

(ವಕ್ತೃ: ಪೂಜಾರಿಗಿಡ್ಡಯ್ಯ, ಚಿರತಗುಂಡು, ಕೂಡ್ಲಿಗಿ ತಾಲ್ಲೂಕು ಬಳ್ಳಾರಿ ಜಿಲ್ಲೆ)

ಕರ್ನಾಟಕ - ಆಂಧ್ರ ಗಡಿ ಪರಿಸರದ ಕೋಲುಪದಗಳಲ್ಲಿ ಈ ರೀತಿಯಾಗಿ ಧ್ವನಿ ವ್ಯತ್ಯಾಸಗಳು ಕಂಡುಬರುತ್ತವೆ. ತೆಲುಗಿನ ಈ ಕೋಲುಪದದಲ್ಲಿ 'ಚ' ಕಾರದ ಮುಂದೆ 'ಸ' ಕಾರ ಧ್ವನಿಯು ಸ್ಥಾನಪಡೆದಿದೆ. ಶಿಷ್ಟ ತೆಲುಗಿನಲ್ಲಿ 'ಚೂದ್ದಾಮು' ಎನ್ನುವಂಥ ಪದವು ಆಡು ಭಾಷೆಯ ತೆಲುಗಿನಲ್ಲಿ 'ಸೂತಾಮು' ಎಂದಾಗಿರುವುದು ಕಂಡುಬಂದಿದೆ. ಹೀಗೆ ಕರ್ನಾಟಕ-ಆಂಧ್ರ ಗಡಿ ಪರಿಸರದ ಕೋಲುಪದಗಳಲ್ಲಿ ಭಾಷಿಕ ವ್ಯತ್ಯಾಸಗಳು, ಧ್ವನಿ ವ್ಯತ್ಯಾಸಗಳು ಸಹಜವಾಗಿ ಕಂಡುಬರುತ್ತವೆ. ಗಡಿಪರಿಸರದ ಕೋಲುಪದಗಳಲ್ಲಿ ಧ್ವನಿ ವ್ಯತ್ಯಾಸಗಳಾಗುವುದು ಮತ್ತು ಭಾಷಿಕ ವ್ಯತ್ಯಾಸಗಳೊಂದಿಗೆ ನುಡಿಬೆರಕೆ, ನುಡಿಜಿಗಿತಗಳಾಗುವುದು ಗಡಿಪರಿಸರದ ಕೋಲುಪದಗಳ ವಿಶಿಷ್ಟತೆಯಾಗಿದೆ.

ಕರ್ನಾಟಕ - ಆಂಧ್ರ ಪ್ರದೇಶದಲ್ಲಿ ಕನ್ನಡ - ತೆಲುಗು ಕೋಲುಪದಗಳು ಗಡಿ ಪ್ರಾಂತಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ. ಕೆಲವೊಂದು ಕೋಲುಪದಗಳಲ್ಲಿ ಕನ್ನಡ ತೆಲುಗು ಎರಡು ಭಾಷೆಯ ನುಡಿಗಳ ಸಂಯೋಗವು ಒಂದು ಹೊಸ ಪದವನ್ನು ಸೃಷ್ಟಿ ಮಾಡುತ್ತವೆ. ಗಡಿ ಪರಿಸರದ ಕೋಲುಪದಗಳಲ್ಲಿ ಕನ್ನಡ - ತೆಲುಗುಗಳ ಮಿಶ್ರಣದಿಂದ ಹೊಸತೊಂದು ಪದ ಸೃಷ್ಟಿಯಾಗಿರುವುದರಿಂದ ಭಾಷಾಲೋಕಕ್ಕೆ ಹೊಸ ಪದಗಳನ್ನು ಕೊಡುಗೆಯಾಗಿ ಗಡಿ ಪರಿಸರದ ಭಾಷೆಯ ಕೋಲುಪದಗಳು ಮತ್ತು ಇತರೆ ಜನಪದ ಕಲಾ ಪ್ರಕಾರಗಳು ನೀಡುತ್ತಿರುವುದು ಗಡಿಪರಿಸರದ ಕೋಲುಪದಗಳ ಮತ್ತೊಂದು ವಿಶಿಷ್ಟತೆ.

ಕನ್ನಡ - ತೆಲುಗು ಎರಡೂ ಭಾಷೆಗಳು ಸಂಯೋಗ ಹೊಂದಿ ಹೊಸಪದವೊಂದು ಸೃಷ್ಟಿಯಾಗಿರುವುದಕ್ಕೆ ಉದಾಹರಣೆಯಾಗಿ ಈ ಕೋಲುಪದವನ್ನು ಗಮನಿಸಬಹುದು.

## ಕನ್ನಡ ಕೋಲುಪದ

ಸಣ್ಣಾಕಿ ಇರಲಿಕ್ಕೆ ಮಾಡಿಕೊಟ್ಟರವ್ವ ದೂರಲ ದೇಶಕ್ಕೆ
ಸಣ್ಣಾಕಿ ಇರಲಿಕ್ಕೆ ಮಾಡಿಕೊಟ್ಟರವ್ವ ದೂರಲ ದೇಶಕ್ಕೆ
ಮದುವೆ ಆಗಿದ್ದು ಜನರು ಉಂಡಿದ್ದು ಗೊತ್ತಿಲ್ಲೋ ಎನಗೆ |೨|
ಸೋಮವಾರ ಸಂತೆ ಮಾವ ಬರುತಾನವ್ವ ಸೊಸೆಯನ ಕರೆಯದುಕೆ
ಸೋಮವಾರ ಸಂತೆ ಮನೆಯವಳವರು ತಂದರು ಸೀರೆಯನಾ...
ನೆನಕ್ಕಿ ನೆಲಗಡ್ಲೆ ಎಳ್ಳು ಕರ್ಜಿಕಾಯಿ ಮಾಡರೆ ಮನಿವೊಳಗೆ |೨|
ಅಂಗನೂಲು ಒಡಲಾಕಿಟ್ಟು ಮಾಡ್ಯಾರು ಅವರು ಪ್ರಯಣಾ |೨|
ಹೇಳಿ ಬರುತೀನಂತ ಕೇಳಿ ಹೊಂಟಳವ್ವಾ ಗೆಳೆಯನ ಒಣ್ಯಾಕೆ |೨|
ಗೆಳೆಯನ ಮನೆ ಮುಂದು ಹಠ ಮಾಡಿ ಬಹಳ ಹೊತ್ತು ನಿಂತಳಲ್ಲಿ |೨|
ಮೂರು ದಿವಸದೊಳಗೆ ಬರುತೀನಿ ನಾರಿ ಯೆಸನವು ಯಾತಕ್ಕೆ |೨|
ಹೇ ಗಂಟಿ ಜೋಳಿಗೆ ಸಿಗರೇಷಮುಲು ವಿಡಿದನು ಬಗಲಾಗೆ |೨|
ಆ ಮನೆ ಈ ಮನೆ ಭಿಕ್ಷೆ ಬೇಡುತಾ ಹೊಂಟನು ಗತಿ ಮನೆಗೆ |೨|

ಧಾನ್ಯವು ತಾಗಂಡು ನೀಡಲಿಕ್ಕೆ ಒಂದು ಹಿಡಿ ಹಿಡಿದ್ರೆ ಅವ್ನ ಖೂನ |೨|
ಇದು ಎಂಥಾ ಚೇಳು ಏ ಹೆಚ್ಚವ್ವ ಹೊಟ್ಯಾಗೆ ಉರುಪ |೨|
ನಮ್ಮೂರು ಭಾವ ಶಾಣೆ ಭಾವ ಬಂದನಾ ಮಠದಾಗೆ |೨|
ಸೊಸೆ ಮಾತು ಕೇಳಿ ಇಬ್ಬರು ಹೊಂಟರವ್ವ ಭಾವನ ಮಠದಾಗೆ |೨|
ಕೈಯ್ಯನಿಡಿದು ನೋಡ್ತಾನೆ ಭಾವ ಸಾಯಾಕೆ ಸ್ವಲ್ಪ ಐತೆ |೨|
ಸೇರಿನ ಬೆಳ್ಳಿ ಕೊಡಿತೀನಿ ಭಾವ ತಿಳಕೋ ಮನದಾಕೆ
ನಾಲ್ಕು 'ಬಾಕಿಲಿ' ಗಟ್ಟಿಗಿ ಹಾಕುರವ್ವಾ ಗಾಳಿಯ ಬರದಂತೆ |೨|
ಆರು ಗವುಂಚಲಿ ಗಟ್ಟಿಗ ಮುಚ್ಚಿರವ್ವ ಗಾಳಿಯ ತೂರದಂತೆ |೨|
ಒಂದೇ ಗಳಿಗೆಗೆ ಗೆಳೆಯ ಗೆಳೆತನ ತೀರಿತು ಮೋಹವೂ
ಒಂದೇ ಗಳಿಗೆಗೆ ಗೆಳೆಯ ಗೆಳೆತನ ತೀರಿತು ಮೋಹವೂ

(ವಕ್ತೃ: ಹನುಮಪ್ಪ, ಬಲ್ಲೂರು, ಆಲೂರು ತಾಲ್ಲೂಕು, ಕರ್ನೂಲ್ ಜಿಲ್ಲೆ)

ಈ ಕೋಲುಪದವನ್ನು ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಆಲೂರಿನ ವ್ಯಾಪ್ತಿಯಲ್ಲಿ ಬರುವ ಬಲ್ಲೂರಿನಲ್ಲಿ ಸಂಗ್ರಹಿಸಿಕೊಳ್ಳಲಾಗಿದೆ. ಕೋಲುಪದಗಳನ್ನು ಸಂಗ್ರಹ ಮಾಡುವ ಕಾಲಕ್ಕೆ ಆಂಧ್ರಪ್ರದೇಶ ಕರ್ನೂಲಿನ ಆಲೂರು, ಹೊಳಗುಂದ, ಮಾರ್ಲಮಡಿಕಿ ಬಲ್ಲೂರು ಮತ್ತು ಸಿದ್ಧಾಪುರಂ ಸುತ್ತಿ ಅಲ್ಲಿ ವೀಕ್ಷಿಸಿರುವಂತೆ ಈ ಗಡಿಭಾಗಗಳ ಪ್ರಾಂತಗಳಲ್ಲಿ ಇಂದಿಗೂ ತೆಲುಗನ್ನು ಎಷ್ಟು ಸ್ಪಷ್ಟವಾಗಿ ಮಾತನಾಡುತ್ತಾರೋ ಅಷ್ಟೇ ಸರಾಗವಾಗಿ ಕರ್ನಾಟಕದ ಮಾತೃಭಾಷೆಯಾದ ಕನ್ನಡವನ್ನು ಮಾತನಾಡುತ್ತಾರೆ. ಹಾಗಾಗಿ ಆಲೂರು, ಆದವಾನಿ, ಹೊಳಗುಂದ ಮುಂತಾದ ಗಡಿ ಪ್ರದೇಶಗಳಲ್ಲಿ ಕನ್ನಡ ಕೋಲುಪದಗಳನ್ನು ಹಾಡುವುದು ಮತ್ತು ಪ್ರದರ್ಶನ ಮಾಡುವುದು ಕಂಡುಬಂದಿದೆ.

ತೆಲುಗು ನಾಡಿನ ಆಲೂರಿನಲ್ಲಿ ಸಂಗ್ರಹಿಸಿದ ಕನ್ನಡ ಕೋಲುಪದದಲ್ಲಿ ಕನ್ನಡ ಮತ್ತು ತೆಲುಗಿನ ಎರಡೂ ನುಡಿಗಳು ಸೇರಿ ಹೊಸತೊಂದು ಪದ ಹುಟ್ಟಿಕೊಂಡಿರುವುದು ಈ ಕೋಲುಪದದಲ್ಲಿ ಕಂಡುಬಂದಿದೆ. ಈ ಹಾಡಿನಲ್ಲಿ ಬರುವಂಥ ಒಂದು ಸಾಲು ಇಂತಿದೆ. 'ನಾಲ್ಕು ಬಾಕಿಲಿ ಗಟ್ಟಿಗಿ ಹಾಕುರವ್ವಾ ಗಾಳಿಯ ಬರದಂತೆ' ಎಂದಿದೆ. ಇದು ಕನ್ನಡದ ಪದವಾದರೂ ಸಂಗ್ರಹಿಸಿರುವುದು ಆಂಧ್ರಪ್ರದೇಶ ಗಡಿಪ್ರಾಂತದಲ್ಲಿ ಆಗಿರುವುದರಿಂದ ಈ ಸಾಲಿನಲ್ಲಿ ತೆಲುಗಿನ' 'ವಾಕಿಲಿ' ಎನ್ನುವಂಥ ಪದದಿಂದ ಮತ್ತು 'ಕನ್ನಡದ ಬಾಗಿಲು' ಎನ್ನುವಂಥ ಎರಡು ಪದಗಳ ಸಂಯೋಗದಿಂದ 'ಬಾಕಿಲಿ' ಎನ್ನುವ ಹೊಸ ಪದವೊಂದು ಹುಟ್ಟು ಪಡೆದುಕೊಂಡಿದೆ. ಸಾಮಾನ್ಯವಾಗಿ ಕರ್ನಾಟಕ-ಆಂಧ್ರ ಗಡಿಪ್ರಾಂತಗಳಲ್ಲಿನ ಕೋಲುಪದಗಳಲ್ಲಿ ನುಡಿಬೆರಕೆ - ನುಡಿ ಜಿಗಿತಗಳು ಆಗುವುದು ಸಾಮಾನ್ಯ ಸಂಗತಿ. ಆದರೆ ಈ ಕೋಲುಪದದಲ್ಲಿ ಕನ್ನಡ - ತೆಲುಗು ಎರಡೂ ಭಾಷೆಗಳ ನುಡಿಗಳೂ ಸೇರಿ ಹೊಸ ನುಡಿಯೊಂದು ಸೃಜಿಸಿರುವುದು ಕಂಡುಬರುತ್ತದೆ.

ಈ ಕೋಲುಪದವು ಕನ್ನಡದ ಕೋಲುಪದವಾಗಿದ್ದರಿಂದ 'ಬಾಕಿಲಿ' ಪದಕ್ಕೆ ಬದಲಾಗಿ ಶಿಷ್ಟ ಕನ್ನಡದ 'ಬಾಗಿಲು' ಎಂದು ಪರಿವರ್ತನೆಯಾಗಬೇಕಿತ್ತು. ಆದರೆ ಅದಕ್ಕೆ ಬದಲಾಗಿ 'ಬಾಕಿಲಿ' ಎಂದು ಸ್ಥಾನ ಪಡೆದುಕೊಂಡಿದೆ. ತೆಲುಗು ಭಾಷೆಯನ್ನಾಡುವ ಜನಪದರು ಈ

ಹಾಡನ್ನು ಹಾಡಿರುವುದರಿಂದ ತೆಲುಗಿನ ಪ್ರಭಾವವೂ ಹಾಗೂ ಗಡಿಪ್ರಾಂತ ಪರಿಸರವೂ ಸಹ ಈ ರೀತಿಯ ಪದಗಳ ಸೃಷ್ಟಿಗೆ ಕಾರಣವಾಗುತ್ತದೆ ಎಂದು ಹೇಳಬಹುದು.

ಗಡಿ ಪರಿಸರದಲ್ಲಿ ನೆಲೆಸಿರುವ ಎರಡೂ ರಾಜ್ಯಗಳ ಜನರು ಎರಡೂ ಭಾಷೆಗಳನ್ನು ಮಾತನಾಡುವುದರಿಂದ ದ್ವಿಭಾಷಿಕರೆನಿಸಿಕೊಳ್ಳುತ್ತಾರೆ. ಹಾಗಾಗಿ ಕನ್ನಡ - ತೆಲುಗು ಎರಡೂ ಭಾಷೆಗಳನ್ನು ಏಕಕಾಲಕ್ಕೆ ಸಹಜವಾಗಿ ಮಾತನಾಡುವುದು ಗಡಿಭಾಗದ ಜನರಿಗೆ ಸಿದ್ಧಿಸಿದೆ ಮತ್ತು ರೂಢಿಸಿಕೊಂಡು ಬಂದಿದ್ದಾರೆ. ಹಾಗಾಗಿ ಇವರಾಡುವ ಕೋಲುಪದಗಳಲ್ಲಿಯೂ ಕೂಡ ಇವರ ಅರಿವಿಗೆ ಬಾರದೆಯೇ ಕನ್ನಡದ ಹಾಡುಗಳಲ್ಲಿ ತೆಲುಗನ್ನು, ತೆಲುಗು ಹಾಡುಗಳಲ್ಲಿ ಕನ್ನಡವನ್ನು ಅಥವಾ ಸಂವಹನ ನಡೆಸುವ ಕಾಲಕ್ಕೆ ಈ ರೀತಿಯ ಉದಾಹರಣೆಗಳು ಕಂಡು ಬರುತ್ತವೆ. ಈ ಕೋಲುಪದದಲ್ಲಿ ಕನ್ನಡ - ತೆಲುಗು ನುಡಿಗಳು ಈ ರೀತಿಯಾಗಿ ಸಂಯೋಗ ಗೊಂಡಿರುವುದು ಕಾಣಬರುತ್ತದೆ.

ಕನ್ನಡದ ಪದ ಬಾಗಿಲು ⟩ ಬಾಕಿಲಿ
ತೆಲುಗು ಪದ ವಾಕಿಲಿ

ಎರಡು ಪ್ರತ್ಯೇಕ ಭಾಷೆಗಳ ಪ್ರತ್ಯೇಕ ಪದಗಳಿಂದ ಬೇರೊಂದು ಪದವು ಹುಟ್ಟಿಕೊಂಡಿರುವುದನ್ನು ಈ ರೀತಿಯಾಗಿ ಗಮನಿಸಬಹುದು. 'ಬಾಕಿಲಿ' ಎನ್ನುವಂಥ ಪದವನ್ನು ಗಮನಿಸಿದಾಗ ತೆಲುಗಿನ 'ವಾಕಿಲಿ' ಎಂಬ ಪದಕ್ಕೆ ಹೆಚ್ಚು ಸನಿಹವಿದೆ. ಆದರೆ ತೆಲುಗಿನ 'ವ' ಕಾರದ ಸ್ಥಾನದಲ್ಲಿ ಕನ್ನಡದ 'ಬ' ಕಾರವು ಸ್ಥಾನ ಪಡೆದಿರುವುದರಿಂದ ತೆಲುಗು ಕೋಲುಪದಗಳನ್ನು ಹಾಡುವ ಜನಪದರು ಕನ್ನಡ ಪದಗಳನ್ನು ಹಾಡುವ ಕಾಲಕ್ಕೆ ತಮ್ಮ ಅರಿವಿಗೆ ಬಂದೋ ಬಾರದೆಯೋ ಈ ರೀತಿಯ ನುಡಿಗಳನ್ನು ಕೋಲುಪದಗಳಲ್ಲಿ ಸೇರಿಸಿರುವುದು ಗಡಿನಾಡ ಕೋಲುಪದಗಳಲ್ಲಿ ಕಾಣಸಿಗುತ್ತದೆ. ಹಾಗಾಗಿ ಗಡಿ ಪರಿಸರದ ಕೋಲುಪದಗಳು ಹಲವು ತೆರನಾದ ವಿಶಿಷ್ಟತೆಗಳನ್ನು ಭಾಷಿಕವಾಗಿ, ಸಾಂಸ್ಕೃತಿಕವಾಗಿಯೂ ಉಳಿಸಿಕೊಂಡು ಬಂದಿರುವುದನ್ನು ಈ ರೀತಿಯ ಹಾಡುಗಳಲ್ಲಿ ಕಾಣಬಹುದಾಗಿದೆ. ಹಾಗೆಯೇ ಈ ಗೀತೆಯಲ್ಲಿ 'ಬಾಕಿಲಿ' ಎನ್ನುವಂಥ ಪದದ ಹೊರತಾಗಿಯೂ, ಈ ಕನ್ನಡದ ಕೋಲುಪದದಲ್ಲಿ ತೆಲುಗಿನ ಮತ್ತೊಂದು ಪದ ಸೇರಿಕೊಂಡು ನುಡಿಬೆರಕೆಯಾಗಿರುವುದು ಕಂಡುಬಂದಿದೆ. ನುಡಿಬೆರಕೆಯಾಗಿರುವುದಕ್ಕೆ ಉದಾಹರಣೆ;

"ಗಂಟೆ ಜೋಳಿಗೆ ಸಿಗರೇಷಮುಲು ವಿಡಿದನು ಬಗಲಾಗೆ"

ಇದು ಕನ್ನಡ ಕೋಲುಪದದ ಸಾಲಾದರೂ ಕೂಡ ಈ ಸಾಲಿನಲ್ಲಿ ತೆಲುಗು ಪದವಾದ 'ಸಿಗರೇಷಮುಲು' ಎನ್ನುವಂಥ ಪದ ಸೇರಿ ನುಡಿಬೆರಕೆಯಾಗಿರುವುದು ಕಂಡುಬರುತ್ತದೆ.

'ಸಿಗರೇಷಮುಲು' ಎಂದರೆ ವಾಸ್ತವದಲ್ಲಿನ ವೇಷ ಮರೆಮಾಚಿ ತಿರುಗುತ್ತಿರುವ ವ್ಯಕ್ತಿ ಅಥವಾ ಸನ್ಯಾಸಿಗಳಿಗೆ ಈ ರೀತಿಯಾಗಿ ಕರೆಯುತ್ತಿರಬಹುದು ಎಂದು ಕಾಣುತ್ತದೆ. ಹಾಗೆಯೇ ಇದೇ ಸಾಲಿನಲ್ಲಿ 'ಹ' ಕಾರಕ್ಕೆ ಬದಲಾಗಿ 'ವ' ಕಾರವು ಬಂದಿರುವುದನ್ನು ಕಾಣಬಹುದಾಗಿದೆ.

ಉದಾಹರಣೆಗೆ - 'ಹಿಡಿದನು' ಎಂಬುದಕ್ಕೆ ಬದಲಾಗಿ 'ವಿಡಿದನು' ಎಂದಾಗಿದೆ.

'ಹ > ವ' ಕಾರವು ಸ್ಥಾನವನ್ನು ಪಡೆದಿರುವುದು ಕಂಡುಬರುತ್ತದೆ.

ಕರ್ನಾಟಕ - ಆಂಧ್ರ ಗಡಿ ಪ್ರಾಂತ ಪರಿಸರವು ಬಹುತ್ವದ ನೆಲೆಯನ್ನು ಉಳಿಸಿಕೊಂಡಿದೆ. ಈ ಭಾಗದ ಕೋಲುಪದಗಳಲ್ಲಿ ಅಥವಾ ಇತರೆ ಜನಪದ ಕಲಾ ಪ್ರಕಾರಗಳ ಹಾಡುಗಳಲ್ಲಿ ಕನ್ನಡ - ತೆಲುಗು ಎರಡೂ ಭಾಷೆಗಳ ನುಡಿಗಳು ನುಸುಳಿ ನುಡಿಬೆರಕೆಯಾಗಿರುವುದು ಮತ್ತು ನುಡಿಜಿಗಿತಗಳಾಗಿರುವುದು ಕಂಡುಬರುತ್ತದೆ. ಹಾಗೆಯೇ ಕೋಲುಪದಗಳಲ್ಲಿ ಕನ್ನಡ - ತೆಲುಗು ಎರಡೂ ಭಾಷೆಗಳ ಸಂಯೋಗದಿಂದ ಹೊಸ ನುಡಿಗಳು ಅಥವಾ ಪದಗಳ ಹುಟ್ಟಿಗೂ ಗಡಿಪರಿಸರದ ಭಾಷೆ ಕಾರಣವಾಗಿದೆ ಎಂಬುದನ್ನು ಗಮನಿಸಬಹುದಾಗಿದೆ. ಜೊತೆಗೆ ಕನ್ನಡ ನಾಡಿನ ಕನ್ನಡ ಹಾಡುಗಳಲ್ಲಿ ತೆಲುಗು ನುಡಿಗಳು ಹಾಗೂ ತೆಲುಗು ನಾಡಿನ ತೆಲುಗು ಕೋಲುಪದಗಳಲ್ಲಿ ಕನ್ನಡದ ನುಡಿಗಳು ಸೇರಿ ನುಡಿಬೆರಕೆಯಾಗಿರುವುದು ಕಂಡುಬಂದಿದೆ.

ಹೀಗೆ ಗಡಿ ಪರಿಸರದ ಕೋಲುಪದಗಳ ಭಾಷೆಯನ್ನು ಗಮನಿಸಿದಾಗ ಕಾಣುವಂಥ ಸಂಗತಿಗಳೆಂದರೆ ನುಡಿಬೆರಕೆ, ನುಡಿಜಿಗಿತಗಳು ಜೊತೆಗೆ ಧ್ವನಿ ವ್ಯತ್ಯಾಸಗಳು ಹಾಗೆಯೇ ಎರಡೂ ಭಾಷೆಗಳ ಸಂಯೋಗದಿಂದ ಹೊಸತೊಂದು ನುಡಿ ಅಥವಾ ಪದಗಳ ಹುಟ್ಟಿಗೆ ಗಡಿಪರಿಸರವು ಕಾರಣವಾಗುತ್ತದೆ. ಹಾಗಾಗಿ ಗಡಿ ಪರಿಸರದ ಕೋಲುಪದಗಳ ಭಾಷೆ ಗಡಿಯಾಚೆಯ ಕೋಲುಪದಗಳ ಭಾಷೆ ಮತ್ತು ಸಂಸ್ಕೃತಿಗಿಂತ ಭಿನ್ನವಾಗಿ ನಿಲ್ಲುತ್ತದೆ ಮತ್ತು ವಿಶಿಷ್ಟತೆಗಳಿಂದ ಕೂಡಿರುತ್ತವೆ ಎಂದು ಹೇಳಬಹುದಾಗಿದೆ.



## ಅಧ್ಯಾಯ : ಎಂಟು

# ಕೋಲು ಕೋಲೆನ್ನಿರೇ...

**ಕ**ರ್ನಾಟಕ-ಆಂಧ್ರ ಗಡಿನಾಡಿನಲ್ಲಿ ದೊರೆಯುವ ಮೌಖಿಕ ಸಾಹಿತ್ಯ ಮತ್ತು ಭಾಷೆ, ಸಾಂಸ್ಕೃತಿಕ ಅನನ್ಯತೆ ಮತ್ತು ಸಾಮುದಾಯಿಕ ಅನನ್ಯತೆಯನ್ನು ಸಾರುತ್ತದೆ. ಗಡಿಪರಿಸರದ ಸಮುದಾಯಗಳ ಚರಿತ್ರೆಯನ್ನು ತೆರೆದಿಡುತ್ತದೆ. ದೇಸಿಯ ಸತ್ವವನ್ನು ಗಡಿಪರಿಸರದ ಸಮಾಜವು ಒಳಗೊಂಡಿದೆ. ಈ ಗಡಿಪರಿಸರದೊಳಗೆ ನೆಲೆಸಿ ಬದುಕು ಸವೆಸುವ ಸಮುದಾಯಗಳು ಹೇಳುವ ಕಥೆ, ಹಾಡುಗಳಲ್ಲಿ ಪ್ರಾದೇಶಿಕ ಸಂಸ್ಕೃತಿಯು ರೂಪುಗೊಂಡಿರುವುದು ಕಾಣಸಿಗುತ್ತದೆ. ಆಂಧ್ರ-ಕರ್ನಾಟಕ ಗಡಿಪರಿಸರವು ಸಾಂಸ್ಕೃತಿಕ ಕಾರಣಗಳಿಂದಾಗಿ ಏಕತೆಯನ್ನು ಪಡೆದುಕೊಂಡಿದೆ. ಹಾಗೆಯೇ ಕನ್ನಡ-ತೆಲುಗು ಎರಡೂ ಭಾಷೆಗಳಲ್ಲಿ ಪರಸ್ಪರ ಕೊಡು ಪಡೆ ನಡೆದಿದೆ. ಗಡಿಪರಿಸರವು ದ್ವಿಭಾಷಿಕತೆ ಅಥವಾ ಬಹುಭಾಷಿಕತೆಯ ಸಂಸ್ಕೃತಿಯನ್ನು ಹುಟ್ಟುಹಾಕಿರುವುದು ಕಾಣಸಿಗುತ್ತದೆ. ಕೋಲುಪದಗಳಲ್ಲಿಯೂ ಸಹ ಈ ಮಾದರಿಯ ಸಮಾನವಾದ ಅಂಶಗಳು, ದ್ವಿಭಾಷಿಕತೆ, ಏಕರೀತಿಯ ವಸ್ತುವೈವಿಧ್ಯತೆಯು ಗಡಿ ಪರಿಸರದಲ್ಲಿ ಗೋಚರಿಸುತ್ತದೆ.

ಕರ್ನಾಟಕ-ಆಂಧ್ರ ಗಡಿನಾಡ ಜನಪದ ಗೀತಸಾಹಿತ್ಯದ ಒಂದು ಪ್ರಕಾರವಾದ ಕನ್ನಡ-ತೆಲುಗು ಕೋಲುಪದಗಳ ಅಧ್ಯಯನವನ್ನು ಈ ನಿಟ್ಟಿನಲ್ಲಿ ಕೈಗೊಳ್ಳಲಾಗಿದೆ. ಕರ್ನಾಟಕದ ಗಡಿಭಾಗದಲ್ಲಿ ಚಿತ್ರದುರ್ಗದ ಚಳ್ಳಕೆರೆ, ಮೊಳಕಾಲ್ಮೂರು, ಬಳ್ಳಾರಿಯ ಹೊಸಪೇಟೆ, ಕೂಡ್ಲಿಗಿ, ಬಳ್ಳಾರಿ, ತುಮಕೂರಿನ ಮಧುಗಿರಿ ಸೇರಿಸಿಕೊಂಡು ಆಂಧ್ರಪ್ರದೇಶದ ಗಡಿಭಾಗದಲ್ಲಿ ಕರ್ನೂಲಿನ ಆದವಾನಿ, ಆಲೂರು, ಹೊಳಗುಂದಿ, ಮಾರ್ಲಮಡಿಕಿ, ಬಲ್ಲೂರು, ಸಿದ್ದಾಪುರಂ, ಕೋಗಿಲ ತೋಟ, ಉಡೆಗೊಳು ಹಾಗೂ ಅನಂತಪುರಂನ ರಾಯದುರ್ಗ, ಕಲ್ಯಾಣದುರ್ಗ, ನಾಗಲಾಪುರಂ, ಗಲಗಲ್ಲು ಪ್ರಾಂತಗಳಲ್ಲಿ ಕನ್ನಡ-ತೆಲುಗು ಕೋಲುಪದಗಳಿಗೆ ಸಂಬಂಧಿಸಿ ಕ್ಷೇತ್ರಕಾರ್ಯ ಮುಖೇನ ಸಂಗ್ರಹಿಸಿದ ಕೋಲುಪದಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಕರ್ನಾಟಕ-ಆಂಧ್ರ ಗಡಿ ಪರಿಸರದದಲ್ಲಿ ಕನ್ನಡ-ತೆಲುಗು ಕೋಲುಪದಗಳು ವಿಪುಲವಾಗಿ ಸಿಗುತ್ತಿರುವುದು ಕಂಡುಬಂದಿದೆ ಹಾಗೂ ಅವುಗಳ ಕುರಿತಾಗಿ ಮಹಾಪ್ರಬಂಧದಲ್ಲಿ ವಿವರವಾಗಿ ವಿಶ್ಲೇಷಿಸಿ ಚರ್ಚಿಸಲಾಗಿದೆ.

ಜನಪದ ಗೀತ ಸಾಹಿತ್ಯದ ದೃಷ್ಟಿಯಿಂದ ನೋಡಿದಾಗ ಕರ್ನಾಟಕ-ಆಂಧ್ರಪ್ರದೇಶ ಗಡಿಪರಿಸರದ ಜನಪದ ಗೀತ ಸಾಹಿತ್ಯಕ್ಕೆ ತನ್ನದೇ ಆದ ಮಹತ್ವದ ಸ್ಥಾನವಿದೆ. ಗಡಿಭಾಗವು ತನ್ನದೇ ಆದ ವಿಶಿಷ್ಟತೆಯನ್ನು ಉಳಿಸಿಕೊಂಡಿರುವ ಪ್ರದೇಶವಾಗಿದೆ. ಗಡಿ ಪರಿಸರದಲ್ಲಿನ ಜನಪದ ಸಾಹಿತ್ಯ ತನ್ನ ನೆಲದ ಪ್ರದೇಶಸತ್ವವನ್ನು ಮೈಗೂಡಿಸಿಕೊಂಡು ಸಾಂಸ್ಕೃತಿಕ ಅನನ್ಯತೆಯನ್ನು ರೂಪಿಸಿದ ಜನಪದ ಹಾಡುಗಳ ಪ್ರಕಾರವಾಗಿ ಕೋಲುಪದಗಳು ಕಂಡುಬರುತ್ತವೆ.

**ಅಧ್ಯಯನದ ಫಲಿತಗಳು**

೧. ಕರ್ನಾಟಕ-ಆಂಧ್ರ ಗಡಿ ಪರಿಸರದಲ್ಲಿ ನೆಲೆಸಿರುವ ಬೇಡ ಸಮುದಾಯದ ಎರಡು ಪಂಗಡಗಳಾದ ಮ್ಯಾಸಬೇಡ ಮತ್ತು ಊರು ಬೇಡರು ಎನ್ನುವಂಥ ವರ್ಗಗಳಲ್ಲಿ ಏಕರೀತಿಯ ಭಾಷೆ, ಸಂಸ್ಕೃತಿ ಮತ್ತು ಏಕರೂಪದ ಜಾನಪದ ಕಲೆಗಳಾದ ಕೋಲಾಟ, ಬಯಲಾಟಗಳನ್ನು ಪ್ರದರ್ಶನ ಮಾಡುವುದರ ಜೊತೆಗೆ ಭಜನೆಪದ, ಸೋಬಾನೆ ಪದಗಳನ್ನು ಕೂಡ ಹಾಡುತ್ತಾರೆ ಎಂಬುದನ್ನು ಗಡಿನಾಡು ಕೋಲುಪದಗಳನ್ನು ಅಧ್ಯಯನ ಮಾಡುವ ಕಾಲಕ್ಕೆ ಕಂಡುಕೊಳ್ಳಲಾಗಿದೆ.

೨. ಕರ್ನಾಟಕದಲ್ಲಿ ಕೋಲಾಟವನ್ನು ಹೆಚ್ಚಾಗಿ ಗೊಲ್ಲರು, ನಾಯಕರು, ಕೊರಮರು ಮತ್ತು ಕುರುಬರು ಆಡುತ್ತಿರುವುದು ಕಂಡುಬಂದಿದೆ. ಕರ್ನಾಟಕ-ಆಂಧ್ರ ಗಡಿ ಪರಿಸರದಲ್ಲಿ ನಾಯಕ ಅಥವಾ ಬೇಡರಿಗೆ ಕೋಲಾಟವನ್ನು ಕಲಿಸಿ, ಕೋಲಾಟ ಕಲೆಯ ಜನಪ್ರಿಯತೆಯ ಹರಹನ್ನು ವಿಸ್ತೃತಗೊಳಿಸಿದವರು ಗೊಲ್ಲರು ಎಂಬುದು ಅಧ್ಯಯನದಿಂದ ಕಂಡುಕೊಂಡ ಸಂಗತಿ. ಕೂಡ್ಲಿಗಿ, ಚಳ್ಳಕೆರೆ, ಮೊಳಕಾಲ್ಮೂರು ಮತ್ತು ರಾಯದುರ್ಗ ಪ್ರಾಂತಗಳಲ್ಲಿ ಕೋಲುಪದಗಳನ್ನು ಸಂಗ್ರಹಿಸುವಾಗ ನಾಯಕ ಕೋಲು ಮೇಳಗಾರರಿಂದ ತಿಳಿದುಬಂದ ಅಂಶವೆಂದರೆ, ಬೇಡರ ಕೋಲು ಕಲಾವಿದರಿಗೆ ಗೊಲ್ಲ ಸಮುದಾಯದ ಕೋಲುಮೇಳಗಾರರು ಕೋಲಾಟವನ್ನು ಕಲಿಸುತ್ತಿದ್ದರು ಎಂಬುದಾಗಿ ಕೂಡ್ಲಿಗಿಯ ಚಂದ್ರಪ್ಪ ಹೀಗೆ ನಿರೂಪಿಸಿದ್ದಾರೆ. "ನಾವು ಹತ್ತು-ಹದಿನೈದು ವರ್ಷದವರಿದ್ದಾಗ ನಮಗೆ ಕೋಲಾಟವನ್ನು ಕಲಿಸಲು ಪಕ್ಕದ ಗೊಲ್ಲರಹಟ್ಟಿಯಿಂದ ಗೊಲ್ಲ ಸಮುದಾಯಕ್ಕೆ ಸೇರಿದ ಚಿತ್ತಪ್ಪ ಎನ್ನುವಂಥ ವಯಸ್ಸಾದ ವ್ಯಕ್ತಿ ಕೋಲು ಕಲಿಸಲು ಬರುತ್ತಿದ್ದರು. ಅವರಿಂದಲೇ ನಾವು ಕೋಲು ಹುಯ್ಯುವುದನ್ನು ಮತ್ತು ಪದಗಳನ್ನು ಹಾಡುವುದು ಕಲಿತುಕೊಂಡೆವು" ಎಂದು ಹೇಳುತ್ತಾರೆ. ಚಂದ್ರಪ್ಪ ಅವರ ಈ ಹೇಳಿಕೆಯನ್ನು ಗಮನಿಸಿದಾಗ ಕೋಲಾಟ ಕಲೆಯ ಜನಪ್ರಿಯತೆಯಲ್ಲಿ ಗೊಲ್ಲ ಸಮುದಾಯದ ಪಾತ್ರ ಪ್ರಮುಖವಾದುದು ಎಂಬುದನ್ನು ಅಧ್ಯಯನ ಮಾಡುವ ಕಾಲಕ್ಕೆ ಕಂಡುಕೊಳ್ಳಲಾಗಿದೆ.

೩. ಕಾಡುಗೊಲ್ಲ ಮತ್ತು ಮ್ಯಾಸಬೇಡ ಸಮುದಾಯದವರು ಕರ್ನಾಟಕಾಂಧ್ರ ಗಡಿಭಾಗದಲ್ಲಿ ಹೆಚ್ಚಾಗಿ ನೆಲೆಸಿದ್ದಾರೆ. ಈ ಸಮುದಾಯಗಳಲ್ಲಿ ಕೋಲಾಟವು ಪ್ರಸಿದ್ಧಿಯನ್ನು ಪಡೆದಿದ್ದು, ಇವರ ಸಾಂಸ್ಕೃತಿಕ ಆಚರಣೆಯ ಸಂದರ್ಭದಲ್ಲಿ ಕೋಲಾಟ ಪ್ರದರ್ಶನ ಮಾಡುವಾಗ

ಪರಸ್ಪರರ ನಡುವೆ ಕೊಡು-ಪಡೆ ನಡೆದು ಏಕರೀತಿಯ ವಸ್ತುವಿಷಯ ಮತ್ತು ಸಮಾನಾಂಶಗಳನ್ನು ಹೊಂದಿರುವ ಕೋಲುಪದಗಳು ಹಾಡುವುದನ್ನು ಗಡಿನಾಡ ಕೋಲುಪದಗಳನ್ನು ಅಧ್ಯಯನ ಮಾಡುವ ಕಾಲಕ್ಕೆ ಕಂಡುಕೊಳ್ಳಲಾಗಿದೆ.

ಉದಾಹರಣೆ:- ಕಾಡುಗೊಲ್ಲರ ಕೋಲುಪದ-ಹಾಲುಮಾರುತ ಬಂದಾಳಮ್ಮ, ಗೆಜ್ಜೆ ಕಡಗದ ಗೊಲ್ಲಾರೆಣ್ಣು, ಮ್ಯಾಸಬೇಡರ ಕೋಲುಪದ. ಹಾಲೇ ಮಾರುತ ಬಂದಾವುಳಮ್ಮ ನೀಲೆ ನಾಮುದಿ ಗೊಲ್ಲದಿ.

೪. ಕರ್ನಾಟಕ-ಆಂಧ್ರ ಗಡಿನಾಡ ಪ್ರಾಂತಗಳಲ್ಲಿ ಕನ್ನಡ-ತೆಲುಗು ಎರಡೂ ಭಾಷೆಯ ಕೋಲುಪದಗಳನ್ನು ಬೇಡರು, ಮಾದಿಗರು, ಕುರುಬರು, ಗೊಲ್ಲರು, ಕೊರಚರು ಮತ್ತು ತಿಗಳರಂಥ ತಳಸಮುದಾಯಗಳಲ್ಲಿಯೇ ಹೆಚ್ಚಾಗಿ ಕೋಲಾಟ ಪ್ರದರ್ಶನ ಮಾಡುತ್ತಾರೆ ಮತ್ತು ಪದಗಳನ್ನು ಹಾಡುತ್ತಾರೆ ಎಂಬುದು ಅಧ್ಯಯನದಿಂದ ಕಂಡುಬಂದಿದೆ.

೫. ಗಡಿ ಪ್ರಾಂತದ ಜನರು ಆಡುವ ಭಾಷೆಯಲ್ಲಿ ಒಂದಕ್ಕಿಂತ ಹೆಚ್ಚು ಭಾಷೆಗಳು ಮಿಶ್ರ ಆಗುವುದರೊಂದಿಗೆ ನುಡಿಬೆರಕೆ, ನುಡಿಜಿಗಿತಗಳಾಗುತ್ತವೆ. ಹಾಗೆಯೇ ಸಂವಹನ ನಡೆಸುವ ಕಾಲಕ್ಕೆ ತೆಲುಗಿನಲ್ಲಿ ಕನ್ನಡದ ನುಡಿಗಳು, ಕನ್ನಡಲ್ಲಿ ತೆಲುಗಿನ ನುಡಿಗಳು ಬೆರಕೆಯಾಗುವುದು ಅಲ್ಲದೇ ಕೋಲಾಟ ಪದಗಳಂಥ ಮೌಖಿಕ ಸಾಹಿತ್ಯ ಪರಂಪರೆಯಲ್ಲೂ ಕೂಡ ಒಂದು ಭಾಷೆಯ ನುಡಿಗಳು ಮತ್ತೊಂದು ಭಾಷೆಯ ಹಾಡುಗಳಲ್ಲಿ ಬೆರಕೆಯಾಗಿರುವುದು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ಉದಾಹರಣೆ:- 'ಟಗರು ಟಗರು ಪೋಟುಲಾಡೆ ಗೆಜ್ಜೆ ಘಲ್ಲೆಂದವೋ' ಎನ್ನುವಂಥ ಕನ್ನಡ ಕೋಲುಪದದಲ್ಲಿ ತೆಲುಗಿನ 'ಪೋಟುಲಾಡೆ' ಎನ್ನುವ ನುಡಿಯೊಂದು ಸೇರಿ ನುಡಿಬೆರಕೆ ಯಾಗಿರುವುದನ್ನು ಗಮನಿಸಬಹುದಾಗಿದೆ.

೬. ಗಡಿನಾಡ ಪ್ರಾಂತಗಳಲ್ಲಿ ನೆಲೆಸಿರುವ ಜನರು ಒಳನಾಡು ಅಥವಾ ಇತರೆ ಪ್ರಾಂತಗಳ ಜನರಿಗಿಂತ ತುಂಬಾ ವಿಶಿಷ್ಟತೆಗಳನ್ನು ಹೊಂದಿರುತ್ತಾರೆ. ಗಡಿಯೇತರ ಪ್ರಾಂತಗಳ ಜನರಲ್ಲಿ ಒಂದೇ ಸಂಸ್ಕೃತಿ ನೆಲೆಗೊಂಡಿರುವುದು ಗೋಚರಿಸುತ್ತದೆ. ಗಡಿ ಭಾಗದಲ್ಲಿ ನೆಲೆಸಿರುವ ಹಲವು ಸಮುದಾಯಗಳ ಸಾನಿಧ್ಯದಿಂದ ಬಹುಭಾಷಿಕತೆ ಮತ್ತು ಬಹುಸಂಸ್ಕೃತಿಯ ಬಹುತ್ವದ ತತ್ವವನ್ನು ಗಡಿ ಪ್ರಾಂತದ ಜನರು ರೂಢಿಸಿಕೊಂಡಿರುತ್ತಾರೆ ಎಂಬುದು ಅಧ್ಯಯನದಿಂದ ತಿಳಿದುಬಂದಿದೆ.

೭. ಕನ್ನಡ-ತೆಲುಗು ಗಡಿ ಪರಿಸರದ ಕೋಲುಪದಗಳನ್ನು ಅಧ್ಯಯನ ಮಾಡುವ ಕಾಲಕ್ಕೆ ಎರಡೂ ರಾಜ್ಯಗಳ ಗಡಿಭಾಗದ ಕೋಲುಪದಗಳು ಏಕರೀತಿಯ ಸಂಸ್ಕೃತಿ ಮತ್ತು ವಸ್ತುವಿಷಯವನ್ನು ಒಳಗೊಂಡಿರುವುದು ಕಂಡುಬಂದಿದೆ.

ಉದಾಹರಣೆ:- ಆಂಧ್ರ ಗಡಿಭಾಗದ ಪದಗಳಲ್ಲಿ ಕರ್ನಾಟಕದ ಜಾನಪದ ದೇವತೆಗಳನ್ನು ಸ್ತುತಿಸುವುದು. ಕನ್ನಡ ಗಡಿಪರಿಸರದ ಹಾಡುಗಳಲ್ಲಿ ಆಂಧ್ರ ಪ್ರದೇಶದ ಸ್ಥಳನಾಮ ಮತ್ತು ವ್ಯಕ್ತಿನಾಮಗಳ ಕುರಿತು ಪ್ರಸ್ತಾಪಿಸುವುದನ್ನು ಗಮನಿಸಿದಾಗ ಈ ಭಾಗದ ಕೋಲುಪದಗಳು ಏಕರೀತಿಯ ಸಂಸ್ಕೃತಿಯನ್ನು ಒಳಗೊಂಡಿವೆ ಎಂಬುದು ಅಧ್ಯಯನದಿಂದ ತಿಳಿದುಬಂದಿದೆ.

೮. ಗಡಿನಾಡಿನ ಸಾಂಸ್ಕೃತಿಕ, ಸಾಮುದಾಯಿಕ ಮತ್ತು ಭಾಷಿಕ ಶ್ರೀಮಂತಿಕೆಗೆ ಈ ಭಾಗದ ಮೌಖಿಕ ಪರಂಪರೆಯು ಮೂಲ ಸೆಲೆಯಾಗಿರುವುದಿದೆ. ಹಾಗೆಯೇ ಗಡಿಭಾಗದ ಕೋಲುಪದಗಳಲ್ಲಿ ಕನ್ನಡ-ತೆಲುಗು ಎರಡೂ ಭಾಷೆಯ ನುಡಿಗಳು ಸೇರಿ ಹೊಸ ಪದಗಳು ಹುಟ್ಟುವುದಕ್ಕೆ ಕೋಲುಪದಗಳು ಕಾರಣೀಭೂತವಾಗಿವೆ. ತೆಲುಗು ಗಡಿಪ್ರಾಂತದ ಕೋಲುಪದದಲ್ಲಿ ಕನ್ನಡ-ತೆಲುಗು ಎರಡೂ ಭಾಷೆಗಳ ಸಮ್ಮಿಶ್ರಣದಿಂದ 'ಬಾಕಿಲಿ' ಎನ್ನುವ ಹೊಸ ನುಡಿಯೊಂದು ಹುಟ್ಟಿಕೊಂಡಿರುವುದರಿಂದ ಭಾಷಾಲೋಕಕ್ಕೆ ಕೋಲುಪದಗಳು ಹೊಸ ಪದಗಳನ್ನು ಅಥವಾ ನುಡಿಗಳನ್ನು ಕೊಡುಗೆಯಾಗಿ ನೀಡುತ್ತಿರುವುದು ಗಮನಾರ್ಹ ಮತ್ತು ಆಶಾದಾಯಕ ಸಂಗತಿಯಾಗಿದೆ.



# ಅನುಬಂಧ

೧. ವಕ್ತೃ ವಿವರ
೨. ಆಯ್ದ ಕೋಲಾಟದ ಪದಗಳು
೩. ಪರಾಮರ್ಶನ ಗ್ರಂಥಗಳು

# ೧. ವಕ್ತೃ ವಿವರ

| ಕ್ರ.ಸಂ. | ಹೆಸರು | ವಯಸ್ಸು | ಸ್ಥಳ/ಊರು/ ಗ್ರಾಮ | ಜಾತಿ/ ಸಮುದಾಯ | ಪ್ರವೃತ್ತಿ/ ಹವ್ಯಾಸ | ತಾಲೂಕು | ಜಿಲ್ಲೆ |
|---|---|---|---|---|---|---|---|
| ೧. | ಓಬಣ್ಣ | ೩೪ | ರಾಮದುರ್ಗ | ನಾಯಕ | ವ್ಯವಸಾಯ/ಕೋಲುಪದ ಕೋಲುಪದ | ಚಳ್ಳಕೆರೆ | ಚಿತ್ರದುರ್ಗ |
| ೨. | ಓಬಳನಾಯಕ | ೬೪ | ಓಬಯ್ಯನಹಟ್ಟಿ | ನಾಯಕ | ಕೂಲಿ/ಭಜನೆ, ಕೋಲುಪದ | ಚಳ್ಳಕೆರೆ | ಚಿತ್ರದುರ್ಗ |
| ೩. | ಓಬಳೇಶ | ೪೩ | ಗುಣಸಾಗರ | ನಾಯಕ | ಕೂಲಿ/ಕೋಲುಪದ, ಭಜನೆ | ಕೂಡ್ಲಿಗಿ | ಬಳ್ಳಾರಿ |
| ೪. | ಅಂಜಯ್ಯ | ೪೬ | ಬಲ್ಲೂರು | ವಾಲ್ಮೀಕಿ | ವ್ಯಾಪಾರಿ/ಕೋಲುಪದ | ಆಲೂರು | ಕರ್ನೂಲು |
| ೫. | ಕಾಟಯ್ಯ | ೫೪ | ಸೂಲದಹಳ್ಳಿ | ನಾಯಕ | ವ್ಯವಸಾಯ/ಭಜನೆ, ಕೋಲುಪದ | ಕೂಡ್ಲಿಗಿ | ಬಳ್ಳಾರಿ |
| ೬. | ಕಾಳಮ್ಮ | ೪೫ | ಕಮಲಾಪುರ(ಹಿರೇಕೇರಿ) | ನಾಯಕ | ಕೂಲಿ/ಕೋಲುಪದ, ಭಜನೆ | ಹೊಸಪೇಟೆ | ಬಳ್ಳಾರಿ |
| ೭. | ಕುರಿಬೋರಯ್ಯ | ೬೭ | ಬೋಸೇದೇವರಹಟ್ಟಿ | ನಾಯಕ | ವ್ಯವಸಾಯ/ಕೋಲುಪದ, ಭಜನೆ | ಚಳ್ಳಕೆರೆ | ಚಿತ್ರದುರ್ಗ |

| | | | | | | | |
|---|---|---|---|---|---|---|---|
| ೮. | ಗಾದಿಲಿಂಗಪ್ಪ | ೫೨ | ಮಾರ್ಲಮಡಿಕಿ | ವಾಲ್ಮೀಕಿ | ಕಟ್ಟಿಗೆ ವ್ಯಾಪಾರಿ/ಕೋಲುಪದ ಭಜನೆ ಪದ | ಆಲೂರು | ಕರ್ನೂಲ್ |
| ೯. | ಗಾದೆಪ್ಪ | ೫೮ | ಹೊಳಗುಂದಿ | ವಾಲ್ಮೀಕಿ | ಕಟ್ಟಿಗೆ ವ್ಯಾಪಾರಿ/ಕೋಲುಪದ, ಭಜನೆ | ಆಲೂರು | ಕರ್ನೂಲ್ |
| ೧೦. | ಗುರುನಾಥಯ್ಯ | ೬೫ | ಜುಮ್ಮೋಬನಹಳ್ಳಿ | ನಾಯಕ | ಕೂಲಿ/ಕೋಲುಪದ, ಭಜನೆ | ಕೂಡ್ಲಿಗಿ | ಬಳ್ಳಾರಿ |
| ೧೧. | ಗುರುವಯ್ಯ | ೬೮ | ಕಮಲಾಪುರ | ನಾಯಕ | ವ್ಯವಸಾಯ/ಕೋಲುಪದ, ಭಜನೆ | ಹೊಸಪೇಟೆ | ಬಳ್ಳಾರಿ |
| ೧೨. | ಗುರುವಯ್ಯ | ೬೪ | ರಾಯದುರ್ಗ | ವಾಲ್ಮೀಕಿ | ಕೂಲಿ/ಕೋಲುಪದ | ರಾಯದುರ್ಗ | ಅನಂತಪುರ |
| ೧೩. | ಗೋಪಾಲಯ್ಯ | ೫೩ | ಹಿರೇಹಳ್ಳಿ | ಮಾದಿಗ | ವ್ಯವಸಾಯ/ಕೋಲುಪದ, ಭಜನೆ | ಚಳ್ಳಕೆರೆ | ಚಿತ್ರದುರ್ಗ |
| ೧೪. | ಚಿತ್ತಯ್ಯ | ೫೬ | ನೆಲಗೇತನಹಟ್ಟಿ | ನಾಯಕ | ವ್ಯವಸಾಯ/ಕೋಲುಪದ, ಭಜನೆ | ಚಳ್ಳಕೆರೆ | ಚಿತ್ರದುರ್ಗ |
| ೧೫. | ಚಂದ್ರಪ್ಪ | ೬೨ | ಮಾಕನಡುಕು | ನಾಯಕ | ವ್ಯವಸಾಯ/ಕೋಲುಪದ | ಕೂಡ್ಲಿಗಿ | ಬಳ್ಳಾರಿ |
| ೧೬. | ಜಯಣ್ಣ | ೩೬ | ಬೋಸೇದೇವರಹಟ್ಟಿ | ನಾಯಕ | ವ್ಯವಸಾಯ/ಭಜನೆ, ಕೋಲುಪದೆ | ಚಳ್ಳಕೆರೆ | ಚಿತ್ರದುರ್ಗ |
| ೧೭. | ತಿಕ್ಕಸ್ವಾಮಿ | ೫೮ | ಹೊಳಗುಂದ | ನಾಯಕ | ಕಟ್ಟಿಗೆ ವ್ಯಾಪಾರಿ/ಕೋಲುಪದ, ಭಜನೆ ಪದ | ಆಲೂರು | ಕರ್ನೂಲ್ |

| ೧೮. | ದೊಡ್ಡಮಲ್ಲಯ್ಯ | ೪೫ | ಚಿಕ್ಕುಂತಿ | ಮಾದಿಗ | ಕೂಲಿ/ಭಜನೆ, ಕೋಲುಪದ | ಮೊಳಕಾಲ್ಮೂರು | ಚಿತ್ರದುರ್ಗ |
|---|---|---|---|---|---|---|---|
| ೧೯. | ನರಸೇಗೌಡ ಹೆಚ್.ಡಿ. | ೪೨ | ಹನುಮಂತಪುರ | ವಕ್ಕಲಿಗ | ಶಿಕ್ಷಕರು/ಕೋಲುಪದ | ಮಧುಗಿರಿ | ತುಮಕೂರು |
| ೨೦. | ಪಾಪಣ್ಣ | ೩೮ | ಪೆತ್ತಮರನಹಟ್ಟಿ | ನಾಯಕ | ವ್ಯವಸಾಯ/ಕೋಲುಪದ | ಚಳ್ಳಕೆರೆ | ಚಿತ್ರದುರ್ಗ |
| ೨೧. | ಪೂಜಾರಿ ಓಬಯ್ಯ | ೩೮ | ದೊಣಮಂಡಲಹಟ್ಟಿ | ನಾಯಕ | ವ್ಯವಸಾಯ/ಕೋಲುಪದ | ಚಳ್ಳಕೆರೆ | ಚಿತ್ರದುರ್ಗ |
| ೨೨. | ಪೂಜಾರಿ ಗಿಡ್ಡಯ್ಯ | ೪೫ | ಕಂಪಳದೇವರಹಟ್ಟಿ | ನಾಯಕ | ವ್ಯವಸಾಯ/ಕೋಲುಪದ | ಮೊಳಕಾಲ್ಮೂರು | ಚಿತ್ರದುರ್ಗ |
| ೨೩. | ಪೂಜಾರಿ ಪಾಪಯ್ಯ | ೪೮ | ಕಂಪಳದೇವರಹಟ್ಟಿ | ನಾಯಕ | ವ್ಯವಸಾಯ/ಕೋಲುಪದ | ಮೊಳಕಾಲ್ಮೂರು | ಚಿತ್ರದುರ್ಗ |
| ೨೪. | ಬಸವಯ್ಯ | ೪೮ | ಸಿದ್ದಾಪುರಂ | ವಾಲ್ಮೀಕಿ | ವ್ಯವಸಾಯ/ಕೋಲುಪದ | ಆಲೂರು | ಕರ್ನೂಲ್ |
| ೨೫. | ಬಸವರಾಜಪ್ಪ | ೫೩ | ಕೌಲ್‌ಬಜಾರ್ | ನಾಯಕ | ವ್ಯಾಪಾರಿ/ಕೋಲುಪದ | ಬಳ್ಳಾರಿ | ಬಳ್ಳಾರಿ |
| ೨೬. | ಬೋಸಯ್ಯ | ೬೩ | ಬೋಸೇದೇವರಹಟ್ಟಿ | ನಾಯಕ | ಪಶುಪಾಲನೆ/ಕೋಲುಪದ | ಚಳ್ಳಕೆರೆ | ಚಿತ್ರದುರ್ಗ |
| ೨೭. | ಮಾರಕ್ಕ | ೩೮ | ಕಮಲಾಪುರ | ನಾಯಕ | ಕೂಲಿ/ಕೋಲುಪದ, ಸೋಬಾನೆ ಪದ | ಹೊಸಪೇಟೆ | ಬಳ್ಳಾರಿ |
| ೨೮. | ಮಾರಪ್ಪ | ೫೮ | ಕಮಲಾಪುರ | ಮಾದಿಗ | ಕೂಲಿ/ಭಜನೆ ಪದ, ಕೋಲುಪದ, | ಹೊಸಪೇಟೆ | ಬಳ್ಳಾರಿ |
| ೨೯. | ಮಾರಮ್ಮ | ೮೫ | ಮಾಕನಡುಕು | ನಾಯಕ | ಭಜನೆ, ಸೋಬಾನೆ ಪದ | ಕೂಡ್ಲಿಗಿ | ಬಳ್ಳಾರಿ |
| ೩೦. | ಯಂಕಮ್ಮ | ೪೬ | ಕಮಲಾಪುರ | ನಾಯಕ | ಕೂಲಿ/ಕೋಲುಪದ, ಸೋಬಾನೆ ಪದ | ಹೊಸಪೇಟೆ | ಬಳ್ಳಾರಿ |

| ೩೧. | ರಾಜಪ್ಪ | ೪೩ | ಮೊರಬ | ನಾಯಕ | ವ್ಯವಸಾಯ/ಕೋಲುಪದ | ಕೂಡ್ಲಿಗಿ | ಬಳ್ಳಾರಿ |
|---|---|---|---|---|---|---|---|
| ೩೨. | ರಾಮಣ್ಣ | ೪೫ | ಸಿದ್ದಯ್ಯನಕೋಟೆ | ಮಾದಿಗ | ಕೂಲಿ/ಕೋಲುಪದ ಭಜನೆ | ಮೊಳಕಾಲ್ಮೂರು | ಚಿತ್ರದುರ್ಗ |
| ೩೩. | ರಂಗಪ್ಪ | ೩೯ | ಮೊಳಕಾಲ್ಮೂರು | ಗೊಲ್ಲ | ವ್ಯವಸಾಯ/ಕೋಲುಪದ | ಮೊಳಕಾಲ್ಮೂರು | ಚಿತ್ರದುರ್ಗ |
| ೩೪. | ರಾಮಾಂಜಿನಪ್ಪ | ೬೫ | ಮಲ್ಲೂರಹಳ್ಳಿ | ಮಾದಿಗ | ಕೂಲಿ/ಕೋಲುಪದ | ಚಳ್ಳಕೆರೆ | ಚಿತ್ರದುರ್ಗ |
| ೩೫. | ಶಿವಯ್ಯ | ೭೨ | ವಲಸೆ | ಮಾದಿಗ | ಕೂಲಿ/ಭಜನೆ, ಕೋಲಾಟ, ಬಯಲಾಟ | ಮೊಳಕಾಲ್ಮೂರು | ಚಿತ್ರದುರ್ಗ |
| ೩೬. | ಸಣ್ಣಮಲ್ಲಯ್ಯ | ೫೮ | ಚಿರತಗುಂಡು | ನಾಯಕ | ಕೂಲಿ/ಕೋಲುಪದ, ಭಜನೆ | ಕೂಡ್ಲಿಗಿ | ಬಳ್ಳಾರಿ |
| ೩೭. | ಸಿದ್ದಪ್ಪ | ೬೫ | ಯಶವಂತನಗರ | ನಾಯಕ | ಕೂಲಿ/ಕೋಲುಪದ, ಭಜನೆ | ಸಂಡೂರು | ಬಳ್ಳಾರಿ |
| ೩೮. | ಹನುಮಪ್ಪ | ೪೬ | ಕೋಗಿಲತೋಟ | ವಾಲ್ಮೀಕಿ | ಕೂಲಿ/ಕೋಲುಪದ | ಆಲೂರು | ಕರ್ನೂಲ್ |
| ೩೯. | ಹುಲಿಗೆಮ್ಮ | ೬೬ | ಕಮಲಾಪುರ (ಎ.ಕೆ.ಕಾಲೋನಿ) | ಮಾದಿಗ ಭಜನೆ ಪದ | ವಸತಿನಿಲಯ/ಕೋಲುಪದ, | ಹೊಸಪೇಟೆ | ಬಳ್ಳಾರಿ |



## ೨. ಆಯ್ದ ಕೋಲಾಟ ಪದಗಳು

### ೧. ಕನ್ನಡ ಕೋಲಾಟದ ಪದಗಳು

೧. ತಾನಿ ತಾನಂದನೊ ತಂದನಾನೊ
ತಂದಾನಿ ತಾನಂದನೊ ತಂದನಾನೊ
ಕಟ್ಟೆಯ ಹಿಂದಕೆ ಹೋದಾಳು ಓಬವ್ವ
ನೆಟ್ಟನ್ನು ಬಿದಿರು ಸೆಳೆದಾಳೊ
ತಂದಾನಿ ತಾನಂದನೊ ತಂದನಾನೊ
ನೆಟ್ಟನ್ನು ಬಿದಿರು ಸೆಳೆದಾಳೋ ಓಬವ್ವಾ
ಸಿಟ್ಟೀಲಿ ಶಿವರಾಯನ ನೆನೆದಾಳೊ
ತಂದಾನಿ ತಾನಂದನೊ ತಂದನಾನೊ
ಮೇಲೆಯೆ ದುರ್ಗವ ಹತ್ತ್ಯಾಳೆ ಓಬವ್ವ
ಕ್ವಾಟೆಯಾ ಸುತ್ತ ನಡೆದಾಳೊ
ತಂದಾನಿ ತಾನಂದನೊ ತಂದನಾನೊ
ಕ್ವಾಟೆಯ ಸುತ್ತ ನಡೆದಾಳೊ
ಓಬವ್ವ ವೀರಗಚ್ಚೆಯ ಹಾಕ್ಯಾಳೊ
ತಂದಾನಿ ತಾನಂದನೊ ತಂದನಾನೊ
ವೀರಗಚ್ಚೆಯ ಹಾಕ್ಯಾಳೊ ಕೈಗೆ ಸಿಕ್ಕ
ಒನಕೆಯಾ ಕಿಂಡಿಗೆ ನಿಂತಾಳೊ ಓಬವ್ವ
ಒನಕೆಯ ಬೀರಿ ವೈರಿಗಳ ಕೊಂದಾಳೊ
ತಂದಾನಿ ತಾನಂದನೊ ತಂದನಾನೊ
ವೀರ ಕಾವಲುಗಾರ ಕ್ವಾಟೆಯಾ
ಸುತ್ತ ನಡೆದಾನೊ
ತಂದಾನಿ ತಾನಂದನೊ ತಂದನಾನೊ
ಕ್ವಾಟೆಯಾ ಸುತ್ತ ನಡೆದಾನೋ
ಒನಕೆ ಓಬವ್ವನಾ ನೋಡ್ಯಾನೋ

ತಂದಾನಿ ತಾನಂದನೊ ತಂದನಾನೊ
ಹೆಣದ ರಾಶಿಯ ನೋಡಿದನು
ವೀರಗಾಳೆ ಊದ್ಯಾನೋ
ತಂದಾನಿ ತಾನಂದನೊ ತಂದನಾನೊ
ವೀರಗಾಳೆ ಊದ್ಯಾನೊ ಕಾವಲುಗಾರ
ದಂಡಿಯೆ ಎದ್ದು ಬಂದಿತು
ತಂದಾನಿ ತಾನಂದನೊ ತಂದನಾನೊ
ಒನಕೆಯ ಓಬವ್ವ ವೈರಿಯಿಂದ ಮುಕ್ತಿ
ಹೊಂದಿದಳು ಚಿತ್ರದುರ್ಗದ ಕೋಟೆಯ ಮೇಲೆ
ತಂದಾನಿ ತಾನಂದನೊ ತಂದನಾನೊ
ಉಡುದಯ್ಯೋ ತದ್ಧಿಮಿತಾ

೨. ಕೋಲನಿ ಕೋಲನ್ನ ಕೋಲೆ ಸಿರಿಗಂಧಾದಿ
ಕೋಲನಿ ಕೋಲನ್ನ ಕೋಲೆ
ಹಂಪೆಯ ದಡದಲ್ಲಿ ಸಂಪಂಗಿ ಮರ ಹುಟ್ಟಿ
ಸಂಪಿಗಿಳಿದಾವೆ ಸೌಬೇರು ರನ್ನಾದಿ
ಕೋಲನಿ ಕೋಲನ್ನ ಕೋಲೆ ಸಿರಿಗಂಧಾದಿ
ಕೋಲನಿ ಕೋಲನ್ನ ಕೋಲೆ
ಹಂಪೆಯ ನಡುವೆ ಬರುವ ಬೋಸಯ್ಯಾಗೆ
ಅನಿತಾ ಹೊಂಬಾಳೆ ಕಳಿಸ್ಯಾನೋ ರನ್ನಾದಿ

ಕೋಲನಿ ಕೋಲನ್ನ ಕೋಲೆ ಸಿರಿಗಂಧಾದಿ
ಕೋಲನಿ ಕೋಲನ್ನ ಕೋಲೆ

ಕಮಲಾಪುರದ ನಡುವೆ ಬರುವ ಬೋಸಯ್ಯಾಗೆ
ಮಂಗಳಾರುತಿಯಾ ಮಾಡ್ಯಾರೋ ರನ್ನಾದಿ
ಕೋಲನಿ ಕೋಲನ್ನ ಕೋಲೆ ಸಿರಿಗಂಧಾದಿ
ಕೋಲನಿ ಕೋಲನ್ನ ಕೋಲೆ

ಹೊಸಪೇಟೆಯ ನಡುವೆ ಬರುವ ಬೋಸಯ್ಯಾಗೆ
ಅನಿತಾ ಹೊಂಬಾಳೆ ಕಳಿವ್ಯಾರೆ ರನ್ನಾದಿ
ಕೋಲನಿ ಕೋಲನ್ನ ಕೋಲೆ ಸಿರಿಗಂಧಾದಿ
ಕೋಲನಿ ಕೋಲನ್ನ ಕೋಲೆ

ಕುಂದಿರ್ಪೆ ನಡುವೆ ಬರುವ ಬೋಸಯ್ಯಾಗೆ
ಮಂಗಳಾರುತಿಯಾ ಮಾಡ್ಯಾರೋ ರನ್ನಾದಿ

ಕೋಲನಿ ಕೋಲನ್ನ ಕೋಲೆ ಸಿರಿಗಂಧಾದಿ
ಕೋಲನಿ ಕೋಲನ್ನ ಕೋಲೆ
ಉಡುದಯ್ಯೊ ತದ್ಧಿಮಿತ |೨|

೩. ಬೇಡ ಓ ಬ್ಯಾಟಿಕಾರಣ್ಣಾ
ಬೇಡ ಕಾಮನ ಬಿಲ್ಹಿಡಿವಣ್ಣಾ |ಪ|

ಗುಡ್ಡದಾ ಹುಲ್ಲು ಮೇಯ್ತಿದ್ದವಣ್ಣಾ
ಗುಡ್ಡದಾ ಹುಲ್ಲು ಮೇಯ್ತಿದ್ದವಣ್ಣಾ
ಚಿಲುಮೆಯ ನೀರು ಕುಡಿತಿದ್ದವಣ್ಣಾ
ಬೇಡ ಓ ಬ್ಯಾಟಿಕಾರಣ್ಣಾ
ಬೇಡ ಕಾಮನ ಬಿಲ್ಹಿಡಿವಣ್ಣಾ |ಪ|

ಬಾದೆಯಾ ಹುಲ್ಲು ಮೇಯ್ತಿದ್ದವಣ್ಣಾ
ಬಾದೆಯಾ ಹುಲ್ಲು ಮೇಯ್ತಿದ್ದವಣ್ಣಾ
ಬಾವಿಯಾ ನೀರು ಕುಡಿತಿದ್ದವಣ್ಣಾ
ಬೇಡ ಓ ಬ್ಯಾಟಿಕಾರಣ್ಣಾ
ಬೇಡ ಕಾಮನ ಬಿಲ್ಹಿಡಿವಣ್ಣಾ |ಪ|

ಹುಳ್ಳಿಯ ಹೊಲ ಮೇಯ್ತಿದ್ದವಣ್ಣಾ
ಮಡುಗಿನ ನೀರು ಕುಡಿತಿದ್ದವಣ್ಣಾ
ದೊಣೆಯಾಗಳ ನೀರು ಕುಡಿತಿದ್ದವಣ್ಣಾ
ಬೇಡ ಓ ಬ್ಯಾಟಿಕಾರಣ್ಣಾ
ಬೇಡ ಕಾಮನ ಬಿಲ್ಹಿಡಿವಣ್ಣಾ |ಪ|

ಗುಡ್ಡದ ಸಿದ್ಧಯ್ಯನ ನಿತ್ಯವಿರಣ್ಣಾ
ಗುಡ್ಡದ ಸಿದ್ಧಯ್ಯನ ನಿತ್ಯವಿರಣ್ಣಾ
ಗುಡಿಯೆಲ್ಲ ಮಲ್ಲಿಗೆ ನಿತ್ಯವಿರಣ್ಣಾ
ಬೇಡ ಓ ಬ್ಯಾಟಿಕಾರಣ್ಣಾ
ಬೇಡ ಕಾಮನ ಬಿಲ್ಹಿಡಿವಣ್ಣಾ |ಪ|
ಉಡುದಯ್ಯೊ ತದ್ದಿಮಿತಾ |೨|

೪. ನವಿಲೆ ನವಿಲನ್ನಿರೊ ರತ್ನಾದಿ
ನವಿಲೆ ನವಿಲನ್ನಿರೋ- |೨|
ತಳಕು ದೊಡ್ಡೇರಿ ತಳವಾರ ಹುಡುಗಿ
ಹಾವು ಸಿಂಬೆ ಮಾಡಿ ಕಲ್ಲು ಕೊಡವ ಮಾಡಿ
ಹೊರಬಾವಿ ನೀರಿಗೆ ಹೊರಟಿದ್ದಳು ಹುಡುಗಿ

ನವಿಲೇ ನವಿಲನ್ನಿರೋ ರತ್ನಾದಿ
ನವಿಲೇ ನವಿಲನ್ನಿರೋ |ಪ|

ಹೊರಬಾವಿ ನೀರಿ ಹೊರಡ್ಡೋವಷ್ಟತ್ತಿಗೆ
ಬಾವಿಗಡ್ಡೆ ಮೇಲೆ ಕುಂತಿದ್ದನು ಹುಡುಗ
ನವಿಲೇ ನವಿಲನ್ನಿರೋ ರತ್ನಾದಿ
ನವಿಲೇ ನವಿಲನ್ನಿರೋ

ಬಾವಿಗಡ್ಡೆ ಮೇಲೆ ಕುಂಡ್ರೋವಷ್ಟತ್ತಿಗೆ
ಬಾಳೆ ಮೀನಾಗಿ ಸುರಗಿದ್ದಳು ಹುಡುಗಿ
ನವಿಲೇ ನವಿಲನ್ನಿರೋ ರತ್ನಾದಿ
ನವಿಲೇ ನವಿಲನ್ನಿರೋ

ಬಾಳೆ ಮೀನಾಗಿ ಸುರುಗೋವಷ್ಟತ್ತಿಗೆ
ಗಾಣವನಾಗಿ ಸೆಳೆದಿದ್ದನು ಹುಡುಗ
ನವಿಲೇ ನವಿಲನ್ನಿರೋ ರತ್ನಾದಿ
ನವಿಲೇ ನವಿಲನ್ನಿರೋ
ಗಾಣವನಾಗಿ ಸೆಳೆಯೋವಷ್ಟತ್ತಿಗೆ
ನುಸಿಯಾ ಮೀನಾಗಿ ನುಸಿದಿದ್ದಳು ಹುಡುಗಿ
ನವಿಲೇ ನವಿಲನ್ನಿರೋ ರತ್ನಾದಿ
ನವಿಲೇ ನವಿಲನ್ನಿರೋ

ನುಸಿಯಾ ಮೀನಾಗಿ ನುಸಿಯೋವಷ್ಟತ್ತಿಗೆ
ಗೂರೋ ಬಲೆಯಾಗಿ ಗೂರಿದ್ದನುಡುಗ
ನವಿಲೇ ನವಿಲನ್ನಿರೋ ರತ್ನಾದಿ
ನವಿಲೆ ನವಿಲನ್ನಿರೋ
ಗೂರೋ ಬಲೆಯಾಗಿ ಗೂರೋವಷ್ಟತ್ತಿಗೆ
ಹರಿಯೋ ಗಂಗೆಯಾಗಿ ಹರಿದಿದ್ದಳು ಹುಡುಗಿ
ನವಿಲೇ ನವಿಲನ್ನಿರೋ ರತ್ನಾದಿ
ನವಿಲೇ ನವಿಲನ್ನಿರೋ

ಹರಿಯೋ ಗಂಗೆಯಾಗಿ ಹರಿಯೋವಷ್ಟತ್ತಿಗೆ
ಅಡ್ಡಗುಡ್ಡವ ತಂದೊಡ್ಡಿದ್ದನು ಹುಡುಗ
ನವಿಲೇ ನವಿಲನ್ನಿರೋ ರತ್ನಾದಿ
ನವಿಲೇ ನವಿಲನ್ನಿರೋ
ಅಡ್ಡಗುಡ್ಡವ ತಂದೊಡ್ಡೊವಷ್ಟತ್ತಿಗೆ

ಲಾವಕ ಮರಿಯಾಗಿ ಲಾಗಿದ್ದಳು ಹುಡುಗಿ
ನವಿಲೇ ನವಿಲನ್ನಿರೋ ರತ್ನಾದಿ
ನವಿಲೇ ನವಿಲನ್ನಿರೋ
ಲಾವಕ ಮರಿಯಾಗಿ ಲಾಗೋವಷ್ಟತ್ತಿಗೆ
ಲಗಡ ಮರಿಯಾಗಿ ತಿರುಗಿದ್ದನು ಹುಡುಗ
ನವಿಲೇ ನವಿಲನ್ನಿರೋ ರತ್ನಾದಿ
ನವಿಲೇ ನವಿಲನ್ನಿರೋ
ಲಗಡ ಮರಿಯಾಗಿ ತಿರುಗೋವಷ್ಟತ್ತಿಗೆ
ಊರು ಮಾರಮ್ಮನಾಗಿ ಕುಂತಿದ್ದಳು ಹುಡುಗಿ
ನವಿಲೇ ನವಿಲನ್ನಿರೋ ರತ್ನಾದಿ
ನವಿಲೇ ನವಿಲನ್ನಿರೋ
ಮಾರಮ್ಮನಾಗಿ ಕುಂಡ್ರೋವಷ್ಟತ್ತಿಗೆ
ಕೋಣವನಾಗಿ ನಿಂತಿದ್ದನು ಹುಡುಗ
ನವಿಲೇ ನವಿಲನ್ನಿರೋ ರತ್ನಾದಿ
ನವಿಲೇ ನವಿಲನ್ನಿರೋ
ಕೋಣವನಾಗಿ ನಿಂದ್ರೋವಷ್ಟತ್ತಿಗೆ
ಊರಜನರ ಕರೆಸಿ ಕಡಿಸಿದ್ದಳು ಹುಡುಗಿ
ನವಿಲೇ ನವಿಲನ್ನಿರೋ ರತ್ನಾದಿ
ನವಿಲೇ ನವಿಲನ್ನಿರೋ
ಉಡುದಯ್ಯೋ ತದ್ಧಿಮಿತಾ

## ೨. ತೆಲುಗು ಕೋಲಾಟದ ಪದಗಳು

೧. ಚಿನ್ನೋಡಾ ನಲ ಚಿನ್ನೋಡಾ
ತಯ್ಯಾ ತಂದನಾನೊ ತಾನಂದನಾನೋ |ಪ|
ಚಿನ್ನೋಡಾ ನಲ ಚಿನ್ನೋಡಾ
ತಯ್ಯಾ ತಂದನಾನೊ ತಾನಂದನಾನೊ
ಚಿನ್ನೋಡು ಮಂಚೋಡು
ಚಿಲಕೋಡು ಮಂಚೋಡು
ಎಲ್ಲದಡ್ಲಾಡು ನೆಲ್ಲೂರಿ ಸೀಮಾಡು
ಚಿನ್ನೋಡಾ ನಲ ಚಿನ್ನೋಡಾ
ತಯ್ಯಾ ತಂದನಾನೊ ತಾನಂದನಾನೊ |ಪ|
ತಪ್ಪಡಿಕಿ ತಣಚಣಕ ತಿಪ್ಪಗಿರಿ ನಂದಂ

ಮದ್ದಗಿರಿ ನಂದಂ ಮದಿಕಾಟ ಬಿದನೂರು
ಬಿದನೂರು ದುರ್ಗಂ ಕಲ್ಯಾಣದುರ್ಗಂ
ಕಲ್ಲೂರು ಮಾದಿ ಚಿನ್ನೋಡಾ
ಚಿನ್ನೋಡಾ ನಲ ಚಿನ್ನೋಡಾ
ತಯ್ಯಾ ತಂದನಾನೊ ತಾನಂದನಾನೊ |ಪ|

ಅಜಗಜ ಮಾವೂರು
ಅಂದರಿಕಿ ಕೊತ್ತೂರು
ಅರಡಗಡಲಗತನ
ದಿನಸುಲಂಗದ ಮಗನ
ತಾಯ ಪಂಟಾದಿ ದಿನಾ
ಚೂಡಾಲಿ ಚಿನ್ನೋಡಾ
ಚಿನ್ನೋಡಾ ನಲ ಚಿನ್ನೋಡಾ
ತಯ್ಯಾ ತಂದನಾನೊ ತಾನಂದನಾನೊ
ತಯ್ಯಾ ತದ್ಧಿಮಿತಾ

೧. ಭಾಮ ನನ್ನು ಇಡನಾಡಿ
ಪೋಮ ನನ್ನ ಇಡನಾಡಿ
ಪೋತಾವು ಮೊಗನಿಂಟ ಎನ್ನಾಳ್ಳು
ಪಗಲಿಂಟಿತಿವೀ ಓ ಚೆಲುವೆ

ಪಾಪಿಷ್ಟು ಬ್ರಾಹ್ಮಣನೆ
ಪಾಪಿಷ್ಟು ಬ್ರಾಹ್ಮಣನೇ
ಪಂಚಾಂಗು ನಡಿವೀತೇ
ಪದ್ದುನ್ನೇ ಪ್ರಯಾಣಮು
ಅಯ್ಯನೇ ಓ ಚೆಲುವೆ
ನುವ್ವು ಪೋಯೇ ದಾವುಲೋನಾ
ನುವ್ವು ಪೋಯೇ ದಾವುಲೋನಾ
ಚುದ್ದ ಬಾಯಿಯಾ ಕಾಡಾ ಸದ್ದಿ ತಿನ್ನಟ್ಲ
ಅಯ್ಯನೇ ಓ ಚೆಲುವೆ
ಪಾಸಿನ ಸೇನುಲೋನ
ಪಾಸಿನ ಸೇನುಲೋನ
ದುರುಗಮ್ಮ ಗುಡಿಕಾಡ ದುಃಖಂಲೋ
ನುಡಿಗಟ್ಟಿತಿವೇ ಓ ಚೆಲುವೆ

హాతుమ్మలు ఇంటి ఎనుక
హాతుమ్మలు ఇంటి ఎనుక
అంటు మావిడ త్వాట
ఆర్నెల్లు కాలమయినే ఓ చెలువే

౩. ఎంథా వొగల మారీరా ఈ చిన్నదీ
ఏమీ న్యాయల నేర్చేరా |ప|

ఇంటి మొగునికి జొన్నరొట్టి
పరాయి మొగునికి గోదిమిరొట్టి
నడుమే తిరిగే ఓబళమ్మకి
చిన్న బీము కోడి పెట్టా

ఎంథా వొగలమారీరా ఈ చిన్నదీ
ఏమీ న్యాయల నేర్చేరా |ప|

ఇంటి మొగునికి నులుక మంచం
పరాయి మొగునికి పట్టె మంచం
నడుమే తిరిగే కుంటగిత్తికి
తీపదిండు తుదిపరపు

ఎంథా వొగల మారీరా ఈ చిన్నదీ
ఏమీ న్యాయాల నేర్చేరా

ఇంటి మొగుడు దుండుకి పోతే
ఇంట్లో నింటి బైటికి రాలేదు
పరాయి మొగుడు దుండుకి పోతే
పులిమేరు అవుతులు విడిచివొచ్చే

ఎంథా వొగల మారీరా ఈ చిన్నదీ
ఏమీ న్యాయలా నేర్చేరా

ఇంటి మొగునికి చెప్పు దెబ్బా
పరాయి మొగునికి పపుసి దెబ్బా
నడుమే తిరుగే ఓబళమ్మకి
నూనే హచ్చీన సిల్కల దెబ్బా
ఎంథా వొగల మారీరా ఈ చిన్నదీ
ఏమీ న్యాయలా నేర్చేరా

೪.		ಯಾವೂರೋ ಏನಾ ಬಟ್ಟ ಏಂಟಿಕಿ ವಚ್ಚಾಡೋ
ಯಮ್ಮ ಏಂಟಿಕಿ ವಚ್ಚಾಡೋ
ಅಯ್ನಲ್ಲ ಲಂಜಿದಾನ್ನ ಸುಗ್ಗಿಕಿ ವಚ್ಚಾನೆ
ಸುಗ್ಗಿ ವೊಡ್ಲುಕಿ ವಚ್ಚಾನೆ
ಯಾವೂರೋ ಏನಾ ಬಟ್ಟ ಏಂಟಿಕಿ ವಚ್ಚಾಡೋ
ಯಮ್ಮ ಏಂಟಿಕಿ ವಚ್ಚಾಡೋ
ಅಯ್ನಲ್ಲ ಲಂಜಿದಾನ್ನ ಸುಗ್ಗಿಕಿ ವಚ್ಚಾನೆ
ಸುಗ್ಗಿ ವೊಡ್ಲುಕಿ ವಚ್ಚಾನೆ
ಸುಗ್ಗಿಕಿ ವಚ್ಚಿನ ಬಾಡಕಾವ್ ಏಮ್ ತಿಂಟಾಡೊ
ಯಮ್ಮ ಏಮ್ ತಿಂಟಾಡೋ
ಅಯ್ನಲ್ಲ ಲಂಜಿದಾನ್ನ ಕೊಲ್ಲು ಉನ್ನಾದೆ
ಕೊಲ್ಲುಲೊ ಲೊಟ್ಟುನ್ನಾದೆ
ಕೊಲ್ಲುನ್ನಾದೆ ಕೊಲ್ಲುಲೊ ಲೊಟ್ಟುನ್ನಾದೆ
ಕೊಲ್ಲು ತಾಗಿನ ಬಾಡಕಾವ್ ಯಾಡ ಪಡುತಾಡೋ
ಯಮ್ಮ ಯಾಡ ಪಡುತಾಡೋ
ಅಯ್ನಲ್ಲ ಲಂಜಿದಾನ್ನ ಚಾವಡಿ
ಉನ್ನಾದೆ ಚಾವಡಿ ಕಟ್ಟುನ್ನಾದೆ
ಕಟ್ಟಮೀದ ಪಂಡೀನ ಬಾಡಕಾವ್‌ನಿ
ಎವುಡು ಲೇಪ್‌ತಾಡೋ ಯಮ್ಮ
ಎವುಡು ಲೇಪುತಾಡೋ
ಅಯ್ನಲ್ಲ ಲಂಜಿದಾನ್ನ ಕೋಡಿ ಉನ್ನಾದೆ
ಕೋಡಿ ಕೂಕೆಸ್ತದೆ ಕೋಡಿ ಉನ್ನಾದೆ
ಕೋಡಿ ಕೂಕೆಸ್ತದೆ.

## ಕನ್ನಡ - ತೆಲುಗು ಮಿಶ್ರಿತ ಕೋಲು ಪದಗಳು

೧.		ಟಗರು ಟಗರು ಪೋಟುಲಾಡೆ
ಗೆಜ್ಜೆ ಗಲ್ಲೆಂದವೊ
ಮಾಳಿಗೆ ಮೇಗಳ ಮಜ್ಜಿಗೆ
ಸಾರು ಗಾಳಿ ಬೋರಂದವೊ
ಕಣ್ಣಿತಾರ ಕಣ್ಣಿಯೊಂದು
ದನ ಕಟ್ಟ ಕಣಿಯೋ
ಸರಪಣಿ ತಾರ ಸರಪಣಿಯೋ
ಸರಳೆಮ್ಮೆ ಕಟ್ಟ ಸರಪಣಿಯೋ

೨.		ಕೋಲು ಕೋಲು ಕೋಲು ಕೋಲನ್ನ
ಸೂರಯ್ಯ ಪಾಪ ಮೇಲೆ

ಮುತ್ತಿನ ತಾನಿ ತಂದನ್ನ
ಎರ್ರಗಡ್ಡ ಎಗತುಂಡೆ
ಎರ್ರಗಡ್ಡ ಎಗತುಂಡೆ
ಏಪಕೊಮ್ಮಲು ತೂಗುತುಂಡೆ
ಎನುಕವಚ್ಚಿನ ನಲ್ಲಗುಡುಸು
ನಿದ್ದ ರೊಚ್ಚಿ ತೂಗುತುಂಡೆ

ಕೋಲು ಕೋಲು ಕೋಲು ಕೋಲನ್ನ
ಸೂರಯ್ಯ ಪಾಪ ಮೇಲೆ
ಮುತ್ತಿನ ತಾನಿ ತಂದನ್ನ
ಎರ್ರಗೊಡ್ಲು ಎರದೋಲೆ
ಎರ್ರಗೊಡ್ಲು ಎರದೋಲೆ
ಕೂರ್ಮಗೊಡ್ಲು ಕೂಡದೋಲೆ
ರಾಯದುರ್ಗಂ ಪಲ್ಲಿ ಮಕುನ
ತೆಲ್ಲಗೊಡ್ಲು ಕಡುಮೇಪೇ

ಕೋಲು ಕೋಲು ಕೋಲು ಕೋಲನ್ನ
ಸೂರಯ್ಯ ಪಾಪ ಮೇಲೆ
ಮುತ್ತಿನ ತಾನಿ ತಂದನ್ನ
ಆವೊಲೆಲ್ಲೆ ಪಯ್ಯಾಲೆಲ್ಲೆ
ಬಾವಿಗಡ್ಡ ಚುಣುಕುಬಾರೆ
ಚಳ್ಳಕೇರಿ ಮುಚ್ಚುಬಾಪನ
ಮುಳ್ಳುಗುರ್ತಾಲು

ಕೋಲು ಕೋಲು ಕೋಲು ಕೋಲನ್ನ
ಸೂರಯ್ಯ ಪಾಪ ಮೇಲೆ
ಮುತ್ತಿನ ತಾನಿ ತಂದನ್ನ
ತೂರುಪು ವಾಕಿಲಿ ತೂರಾದೀಸೆ
ತೂರುಪು ವಾಕಿಲಿ ತೂರಾದೀಸೆ
ಪಡಮಟಿ ವಾಕಿಲಿ ಪಾರದೀಸೆ
ಸ್ವಾಮಿ ಎದ್ದುಲು ಎಡ್ಲುನವ್ವುಡು
ಸ್ವಾಮಿ ಛತ್ತಿರಿ ಅಡ್ಡಮಯ್ಯೆ
ಕೋಲು ಕೋಲು ಕೋಲು ಕೋಲನ್ನ
ಸೂರಯ್ಯ ಪಾಪ ಮೇಲೆ
ಮುತ್ತಿನ ತಾನಿ ತಂದನ್ನ
ಥಗಡುತ್ತೈ ಜಂತಕಾ

೩.	ರೆಡುಮೆ ಸೂಸ್ತಾಮು ರಾ ರಾ
ಬೊಬ್ಬಾಲ ನಾಗಿರೆಡ್ಡಿ
ಮಾಡಿ ಮೀದ ಮಾಡಿ ಕಟ್ಟಿ
ಏಡು ಮಾಳ ಇಲ್ಲು ಕಟ್ಟಿ
ಯಾಟಿಕಂಟೆ ಆಟಿಕೆ
ಪೇರಾಯ್ಯೆ ನಾಗಿರೆಡ್ಡಿ
ಸುತ್ತಮುತ್ತ ಪೆಲ್ಲಿಲಿಕಂಟೆ
ದೇವುಡಂಟೆ ಭೀಮಲಿಂಗಡು
ಸಂಖಲೋನ ಸರಾಯಿಸೀಸ
ಜೋಬಿಲೋನ ರಿವಾಲ್ವಾರು |೨|
ನೋಟಿಲೋನ ಸಿಕರೇಟು
ಸೇತುಲೋನ ಅಗ್ಗಿಪೆಟ್ಟಿ
ಮೇಸ್ತ್ರೇಸ್ ಕಾರುಲೋನ
ಮೀಸಮ್ಮೆನ ದೂಬಿನಾಡು
ಮೀಸಮ್ಮೆನ ದೂಬಿನಾಡು
ನಿಂಬೆಕಾಯಿ ನಿಲುಪಿನಾಡು
ರೆಡುಮೆ ಸೂಸ್ತಾಮು ರಾ ರಾ
ಬೊಬ್ಬಾಲ ನಾಗಿರೆಡ್ಡಿ
ನಾಗಿರೆಡ್ಡಿ ಎಲ್ಲಿ ಪೋಯೆ
ಮಿದ್ದಲನ್ನಿ ಕಾಲಿಪೋಯೆ
ರೆಡುಮೆ ಸೂಸ್ತಾಮು ರಾ ರಾ
ಬೊಬ್ಬಾಲ ನಾಗಿರೆಡ್ಡಿ



# ೩. ಪರಾಮರ್ಶನ ಗ್ರಂಥಗಳು


೧. ಅಭಿನಂದನ; ೨೦೦೬; "ಜನಪದ ಕಲೆಗಳು"; ಜಯಶ್ರೀ ಎಂಟರ್ ಪ್ರೈಸಸ್; ಬೆಂಗಳೂರು.

೨. ಆರ್ವಿಯಸ್ ಸುಂದರಂ; ೨೦೧೦; ಕನ್ನಡ-ತೆಲುಗು ಸಂಬಂಧ; ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ; ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ; ಮೈಸೂರು.

೩. ಅಂಗಡಿ.ಎಸ್.ಎಸ್.(ಸಂ); ೨೦೦೮; ಜನಪದ ಸಾಹಿತ್ಯ ಭಾಷೆ; ವಿಕಾಸ ಪ್ರಕಾಶನ; ಹೊಸಪೇಟೆ.

೪. ಅಂಗಡಿ.ಎಸ್.ಎಸ್.; ೨೦೦೮; "ಕರ್ನಾಟಕ ಬುಡಕಟ್ಟು ಭಾಷೆ"; ಸೃಷ್ಟಿ ಪಬ್ಲಿಕೇಷನ್ಸ್; ಬೆಂಗಳೂರು.

೫. ಈರೇಗೌಡ.ಡಿ.ಕೆ.(ಸಂ); ೧೯೭೫; "ಕೋಲಾಟದ ಪದಗಳು"; ಪೃಥ್ವೀ ಪ್ರಕಾಶನ; ಮೈಸೂರು.

೬. ಕರೀಂಖಾನ್(ಸಂ); ೧೯೯೬; "ಕನ್ನಡ ಜನಪದ ಗೀತೆಗಳು"; ಪುಸ್ತಕಾಲಯ ಪ್ರಕಾಶನ, ಬೆಂಗಳೂರು.

೭. ಕರಿಯಪ್ಪ ಮಾಳಿಗೆ.ಜಿ.; ೨೦೦೮; "ಬಳ್ಳಾರಿ ಜಿಲ್ಲೆಯ ಅವಧೂತರು"; ಕನ್ನಡ ಸಾಹಿತ್ಯ ಪರಿಷತ್ತು; ಬೆಂಗಳೂರು.

೮. ಕಾಳೇಗೌಡ ನಾಗವಾರ; ೧೯೭೫; ತ್ರಿಪದಿ, "ರಗಳೆ ಮತ್ತು ಜನಪದ ಸಾಹಿತ್ಯ"; ಸಪ್ನಬುಕ್‌ಹೌಸ್; ಬೆಂಗಳೂರು.

೯. ಕಾಳೇಗೌಡ ನಾಗವಾರ(ಸಂ); ೨೦೦೦; "ಜೀ.ಶಂ.ಪ. ಅವರ ಜಾನಪದ ಬರಹಗಳು"; ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ; ಬೆಂಗಳೂರು.

೧೦. ಕೆಂಪೇಗೌಡ.ಕೆ.; ೨೦೦೫; "ಭಾಷಾವಿಜ್ಞಾನ ಪರಿಚಯ"; ನವಭಾರತೀ ಪ್ರಕಾಶನ; ಮೈಸೂರು.

೧೧. ಕೃಷ್ಣ ಪರಮೇಶ್ವರಭಟ್ಟ; ೨೦೧೩; "ಭಾಷೆ ಮತ್ತು ಸಾಮಾಜಿಕ ಸಂದರ್ಭ"; ಅಭಿನವ ಪ್ರಕಾಶನ; ಬೆಂಗಳೂರು.

೧೨. ಕೃಷ್ಣಮೂರ್ತಿ ಮತ್ತಿಘಟ್ಟ(ಸಂ); ೨೦೦೭; "ಹೊನ್ನಹೊತ್ತಿಗೆ"; ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ; ಬೆಂಗಳೂರು.

೧೩. ಕೃಷ್ಣಮೂರ್ತಿ ಹನೂರು(ಸಂ); ೧೯೮೧; "ಕತ್ತಲದಾರಿದೂರ"; ಕನ್ನಡ ಸಾಹಿತ್ಯ ಪರಿಷತ್ತು; ಬೆಂಗಳೂರು.

೧೪. ಕೃಷ್ಣಮೂರ್ತಿ ಹನೂರು(ಸಂ); ೧೯೯೮; "ಜನಪದ ಮತ್ತು ಬುಡಕಟ್ಟು ಗೀತೆಗಳು"; ಸಾಹಿತ್ಯ ಅಕಾಡೆಮಿ; ನವದೆಹಲಿ.

೧೫. ಕ್ಯಾತನಹಳ್ಳಿ ರಾಮಣ್ಣ(ಸಂ); ೧೯೭೬; "ಬೀದರ ಜಿಲ್ಲೆಯ ಜನಪದ ಗೀತೆಗಳು"; ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೬. ಕ್ಯಾತನಹಳ್ಳಿ ರಾಮಣ್ಣ(ಸಂ); ೧೯೯೧; "ಫ್ಲೀಟರು ಸಂಗ್ರಹಿಸಿದ ಲಾವಣಿಗಳು"; ಕನ್ನಡ ಅಧ್ಯಯನ ಸಂಸ್ಥೆ; ಮೈಸೂರು ವಿಶ್ವವಿದ್ಯಾನಿಲಯ; ಮೈಸೂರು.

೧೭. ಕ್ಯಾತನಹಳ್ಳಿ ರಾಮಣ್ಣ(ಸಂ); ೨೦೦೬; "ಜನಪದ ಕ್ಷೇತ್ರಕಾರ್ಯದ ಹಾದಿಯಲ್ಲಿ"; ಚೇತನ ಬುಕ್‌ಹೌಸ್; ಮೈಸೂರು.

೧೮. ಖಾಡೆ.ಜಿ.ಬಿ.(ಸಂ); ೧೯೭೩; "ಕಾಡು ಹೂಗಳು"; ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ; ಮೈಸೂರು.

೧೯. ಗದ್ದಗಿಮಠ.ಬಿ.ಎಸ್.(ಸಂ); ೧೯೮೮; "ಗದ್ದಗಿಮಠರ ಬರಹಗಳು"; ಕನ್ನಡ ಅಧ್ಯಯನ ಸಂಸ್ಥೆ; ಮೈಸೂರು ವಿಶ್ವವಿದ್ಯಾನಿಲಯ; ಮೈಸೂರು.

೨೦. ಗೀತ.ಬಿ.(ಸಂ); ೨೦೦೯; "ತುಂಗೆ ಮಡಿಲ ಜನಪದ"; ಸಿರಿವರ ಪ್ರಕಾಶನ; ಬೆಂಗಳೂರು.

೨೧. ಗುರುಲಿಂಗಯ್ಯ.ಎಂ., ನಾಗಪ್ಪ.ವಿ.(ಸಂ); ೨೦೦೮; "ಕಾಡುಗೊಲ್ಲ"; ಕನ್ನಡ ಪುಸ್ತಕ ಪ್ರಾಧಿಕಾರ; ಬೆಂಗಳೂರು.

೨೨. ಚಂದ್ರಶೇಖರ ಕಂಬಾರ(ಸಂ); ೧೯೭೩; "ಮಾತಾಡುಲಿಂಗವೇ"; ಪ್ರಸಾರಾಂಗ; ಬೆಂಗಳೂರು ವಿಶ್ವವಿದ್ಯಾಲಯ; ಬೆಂಗಳೂರು.

೨೩. ಚನ್ನಬಸಪ್ಪ.ಗೊ.ರು.(ಸಂ); ೧೯೭೭; "ಕರ್ನಾಟಕ ಜನಪದ ಕಲೆಗಳು"; ಕನ್ನಡ ಸಾಹಿತ್ಯ ಪರಿಷತ್ತು; ಬೆಂಗಳೂರು.

೨೪. ಚಿಕ್ಕಣ್ಣ ಯಣ್ಣೆಕಟ್ಟೆ(ಸಂ); ೨೦೦೮; "ಚಿತ್ರದುರ್ಗ ಜಿಲ್ಲೆಯ ಜನಪದ ಕಲಾವಿದರು"; ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ; ಬೆಂಗಳೂರು.

೨೫. ಚಿದಾನಂದಮೂರ್ತಿ.ಎಂ.; ೧೯೯೮; "ಭಾಷಾವಿಜ್ಞಾನದ ಮೂಲತತ್ವಗಳು"; ಡಿ.ವಿ.ಕೆ. ಮೂರ್ತಿ ಪ್ರಕಾಶಕರು; ಮೈಸೂರು.

೨೬. ಚೆನ್ನಣ್ಣವಾಲೀಕಾರ(ಸಂ); ೧೯೯೧; "ಒಂದು ಗ್ರಾಮದ ಜಾನಪದೀಯ ಅಧ್ಯಯನ"; ಅಕ್ಷರ ಪ್ರಕಾಶನ; ಸಾಗರ.

೨೭. ಚೆಲುವರಾಜು(ಸಂ); ೨೦೦೦; “ಹಂಪಿಯ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು”; ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ; ವಿದ್ಯಾರಣ್ಯ.

೨೮. ತಪಸ್ವೀಕುಮಾರ.ನಂ.(ಸಂ); ೧೯೮೩; “ಕನ್ನಡ ಜನಪದ ಗೀತೆಗಳ ಸಾಂಸ್ಕೃತಿಕ ಅಧ್ಯಯನ”; ಪ್ರಸಾರಾಂಗ; ಮೈಸೂರು ವಿಶ್ವವಿದ್ಯಾನಿಲಯ; ಮೈಸೂರು.

೨೯. ದೇವೇಂದ್ರಪ್ಪ ಜಾಜಿ(ಸಂ); ೨೦೦೪; “ಆಂಧ್ರ-ಕರ್ನಾಟಕ ಗಡಿ ಪ್ರದೇಶದ ಸ್ಥಳನಾಮಗಳು”; ವಿಕಾಸ ಪ್ರಕಾಶನ; ಹೊಸಪೇಟೆ.

೩೦. ನಾಗರಾಜ್.ಎಂ.ಜಿ.(ಸಂ); ೨೦೧೦; “ಕೊಡಗಿನ ಸಾಂಸ್ಕೃತಿಕ ಜಾನಪದ ನೆಲೆಗಳು”; ಕನ್ನಡ ಸಾಹಿತ್ಯ ಪರಿಷತ್ತು; ಬೆಂಗಳೂರು.

೩೧. ನಾಗೇಗೌಡ.ಎಚ್.ಎಲ್.(ಸಂ); ೧೯೭೬; “ಪದವವೇ ನಮ್ಮ ಎದೆಯಲಿ”; ಪ್ರಸಾರಾಂಗ; ಬೆಂಗಳೂರು ವಿಶ್ವವಿದ್ಯಾಲಯ; ಬೆಂಗಳೂರು.

೩೨. ನಾಗೇಶ್.ಕೆ.ಹೆಬ್ಬಾಲೆ(ಸಂ); ೨೦೦೨; “ಜನಪದ ಬನಸಿರಿ”; ರುಚಿರ ಪ್ರಕಾಶನ; ಹೊಸಪೇಟೆ.

೩೩. ನಾಯಕ.ಎನ್.ಆರ್.; ೧೯೮೨; “ಕಾರವಾರ ಜಿಲ್ಲೆಯ ಜನಪದ ಗೀತೆಗಳು”; ಪ್ರಸಾರಾಂಗ; ಕರ್ನಾಟಕ ವಿಶ್ವವಿದ್ಯಾಲಯ; ಧಾರವಾಡ.

೩೪. ನಾರಾಯಣ.ಕೆ.ವಿ.(ಸಂ); ೨೦೦೯; “ಭಾಷೆ”; ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ; ಹಂಪಿ.

೩೫. ನಾವಡ.ಎ.ವಿ.(ಸಂ); ೨೦೦೭; “ಕರಾವಳಿ ಜಾನಪದ”; ೭೪ನೇ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನ; ಉಡುಪಿ.

೩೬. ಪದ್ಮಪ್ರಸಾದ್.ಎಸ್.ಪಿ.(ಸಂ); ೧೯೮೨; “ಕೋಲಾಟಗಳು ಮತ್ತು ಕೋಲುಪದಗಳು”; ಕರ್ನಾಟಕ ಸಾಹಿತ್ಯ ಪರಿಷತ್ತು; ಬೆಂಗಳೂರು.

೩೭. ಪರಮಶಿವಯ್ಯ.ಜೀ.ಶಂ.(ಸಂ); ೨೦೧೨; “ಜಾನಪದ ಕೆಲವು ಮುಖಗಳು”; ಸಾಗರ ಪ್ರಕಾಶನ; ಬೆಂಗಳೂರು.

೩೮. ಪೋತೆ.ಎಚ್.ಟಿ.(ಸಂ); ೨೦೦೦; “ಹೈದ್ರಾಬಾದ್ ಕರ್ನಾಟಕದ ಜನಪದ ಪ್ರದರ್ಶನ ಕಲೆಗಳು; ಅಂಬು ಪ್ರಕಾಶನ; ರಾಯಚೂರು.

೩೯. ಪ್ರಭಾಕರ.ಎ.ಎಸ್.; ೨೦೦೦; “ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು”; ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ; ಹಂಪಿ.

೪೦. ಪುರುಷೋತ್ತಮ ಬಿಳಿಮಲೆ(ಸಂ); ೧೯೯೭; “ಹಂಪಿ ಜಾನಪದ”; ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ; ಹಂಪಿ.

೪೧. ಬಸವರಾಜ ಮಲಶೆಟ್ಟಿ(ಸಂ); ೧೯೮೧; “ಕೋಲಾಟದ ಪದಗಳು”; ಕನ್ನಡ ಸಾಹಿತ್ಯ ಪರಿಷತ್ತು; ಬೆಂಗಳೂರು.

೪೨. ಬೋರಲಿಂಗಯ್ಯ.ಹಿ.ಚಿ.(ಸಂ); ೧೯೯೬; “ಕರ್ನಾಟಕ ಜನಪದ ಕಲೆಗಳ ಕೋಶ”; ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ; ಹಂಪಿ.

೪೩. ಭಾಗ್ಯಲಕ್ಷ್ಮಿ.ಎಂ.(ಸಂ); ೨೦೦೬; “ದ್ವಿಭಾಷಿಕರು”; ಸಖೀ ಪ್ರಕಾಶನ; ಹೊಸಪೇಟೆ.

೪೪. ಭೀಮಸೇನರಾವ್.ಡಿ.ಕೆ.(ಸಂ); ೨೦೦೦; “ಅವಲೋಕನ-ಸಂಶೋಧನ”; ಕನ್ನಡ ಪುಸ್ತಕ ಪ್ರಾಧಿಕಾರ; ಬೆಂಗಳೂರು.

೪೫. ಮಾಧವ ಪೆರಾಜೆ(ಸಂ); ೨೦೦೦; “ಯಕ್ಷಗಾನ ತಾಳಮದ್ದಲೆ ನವ್ಯೋತ್ತರ ಸಂಕಥನ”; ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ; ಹಂಪಿ.

೪೬. ಮೀರಾಸಾಬಿಹಳ್ಳಿ ಶಿವಣ್ಣ(ಸಂ); ೨೦೦೨; “ಮ್ಯಾಸಮಂಡಲ”; ಕನ್ನಡ ಪುಸ್ತಕ ಪ್ರಾಧಿಕಾರ; ಬೆಂಗಳೂರು.

೪೭. ಮುತ್ತಯ್ಯ.ಎಸ್.ಎಂ.(ಸಂ); ೨೦೦೮; “ಕನ್ನಡ ಜನಪದ ಮಹಾಕಾವ್ಯಗಳು ಮತ್ತು ಪ್ರತಿಸಂಸ್ಕೃತಿ”; ಕನ್ನಡ ಸಾಹಿತ್ಯ ಪರಿಷತ್ತು; ಬೆಂಗಳೂರು.

೪೮. ಮುತ್ತಯ್ಯ.ಎಸ್.ಎಂ.(ಸಂ); ೨೦೧೨; “ಬಡಗಿ ಕಟ್ಟಿದ ಬೆಡಗಿನ ಮಾಳಿಗೆ”; ಅನ್ನಪೂರ್ಣ ಪ್ರಕಾಶನ; ಬೆಂಗಳೂರು.

೪೯. ಮೇತ್ರಿ.ಕೆ.ಎಂ.(ಸಂ) ೨೦೦೭; “ಬುಡಕಟ್ಟು ಕುಲಕಸುಬುಗಳು”; ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ; ಹಂಪಿ.

೫೦. ಮೊಗಳ್ಳಿ ಗಣೇಶ್(ಸಂ); ೨೦೦೬; “ಮೌಖಿಕ ಕಥನ”; ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ; ಹಂಪಿ.

೫೧. ಮೋಹನ್.ಜಿ.ಎಸ್.(ಸಂ); ೨೦೦೧; “ಜಾನಪದ ವಿಜ್ಞಾನಾಧ್ಯಯನಂ”; ಶ್ರೀನಿವಾಸ ಪಬ್ಲಿಕೇಷನ್ಸ್; ಬೆಂಗಳೂರು.

೫೨. ಮೋಹನ್.ಜಿ.ಎಸ್.(ಸಂ); ೨೦೦೭; “ಕನ್ನಡ-ತೆಲುಗು ಭಾಷಾಸಾಹಿತ್ಯ ಬಾಂಧವ್ಯ”; ಪ್ರಸಾರಾಂಗ; ಬೆಂಗಳೂರು ವಿಶ್ವವಿದ್ಯಾಲಯ; ಬೆಂಗಳೂರು.

೫೩. ಮೋಹನ್‌ಕುಮಾರ್.ಎಸ್.(ಸಂ)“ ೨೦೧೩; “ಕಾಡುಗೊಲ್ಲರ ಕೋಲಾಟದ ಪದಗಳು”; ವಿಸ್ತರಣೆ ಹಾಗೂ ಸಲಹಾ ಕೇಂದ್ರ; ಕರ್ನಾಟಕ ಜಾನಪದ ವಿಶ್ವವಿದ್ಯಾಲಯ; ಗೊಟಗೋಡಿ; ಹಾವೇರಿ.

೫೪. ಮಂಜುನಾಥ ಬೇವಿನಕಟ್ಟಿ(ಸಂ); ೧೯೯೪; “ಜಾನಪದ ಸಂಸ್ಕೃತಿ”; ತೇಜಸ್ವಿ ಪ್ರಕಾಶನ; ಬಳ್ಳಾರಿ.

೫೫. ಮಂಜುನಾಥ ಬೇವಿನಕಟ್ಟಿ(ಸಂ); ೨೦೦೪; "ದೇಸಿ ಚಹರೆ"; ರೂಪ ಪ್ರಕಾಶನ; ಮೈಸೂರು.

೫೬. ಮಂಜುನಾಥ ಬೇವಿನಕಟ್ಟಿ(ಸಂ); ೨೦೦೯; "ವಾಲ್ಮೀಕಿ ಸಮುದಾಯ"; ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ; ಹಂಪಿ.

೫೭. ಯಶೋಧರಾಶಾಸ್ತ್ರಿ(ಸಂ); ೧೯೯೯; "ಗುಲಬರ್ಗಾ ಜಿಲ್ಲೆಯ ಸಂಪ್ರದಾಯದ ಹಾಡುಗಳು"; ಜ್ಯೋತಿರ್ಯಾಮಿ ಪ್ರಕಾಶನ; ಗುಲಬರ್ಗಾ.

೫೮. ರಮೇಶ.ಸ.ಚಿ.(ಸಂ); ೨೦೧೧; "ದಕ್ಷಿಣ ಭಾರತೀಯ ಜಾನಪದ ಕೋಶ"; ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ; ಹಂಪಿ.

೫೯. ರಹಮತ್ ತರೀಕೆರೆ(ಸಂ); ೨೦೧೨; "ನುಡಿಸಂಕರ ಸಾಹಿತ್ಯ"; ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ; ಹಂಪಿ.

೬೦. ರಾಜಶೇಖರ.ಪಿ.ಕೆ.(ಸಂ); ೨೦೦೩; "ಜಾನಪದ ಸಂಭ್ರಮ"; ಕನ್ನಡ ಪುಸ್ತಕ ಪ್ರಾಧಿಕಾರ; ಬೆಂಗಳೂರು.

೬೧. ರಂಗಣ್ಣ.ಎಸ್.ವಿ.(ಸಂ); ೧೯೭೬; "ಕೋಲ್‌ಕೋಲ್ ಕೂಡಿ ಬರಲಿ"; ಕನ್ನಡ ಅಧ್ಯಯನ ಸಂಸ್ಥೆ; ಮೈಸೂರು ವಿಶ್ವವಿದ್ಯಾನಿಲಯ; ಮೈಸೂರು.

೬೨. ರಂಗಸ್ವಾಮಿ.ಬಿ. ಅರ್ಚಕ(ಸಂ); ೨೦೦೧; "ಹುಟ್ಟಿದ ಹಳ್ಳಿ"; ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ; ಮಾನಸ ಗಂಗೋತ್ರಿ; ಮೈಸೂರು.

೬೩. ಲಕ್ಕಪ್ಪಗೌಡ.ಎಚ್.ಜೆ.(ಸಂ); ೧೯೯೮; "ಸುವರ್ಣ ಜಾನಪದ"; ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ; ಬೆಂಗಳೂರು.

೬೪. ಲಿಂಗಣ್ಣ ಸಿಂಪಿ; ೧೯೬೦; "ಜನಾಂಗದ ಜೀವಾಳ"; ಶ್ರೀ ಅರವಿಂದ ಗ್ರಂಥಾಲಯ; ಚಡಚಣ; ಜಿ. ವಿಜಾಪುರ.

೬೫. ವಸಂತಕುಮಾರ ಮಳಲಿ(ಸಂ); ೧೯೭೮; "ಕೋಲುಪದಗಳು"; ಡಿ.ವಿ.ಕೆ. ಮೂರ್ತಿ ಪ್ರಕಾಶನ; ಬೆಂಗಳೂರು.

೬೬. ವಿಜಯ್‌ಪೂಣಚ್ಚ ತಂಬಂಡ(ಸಂ); ೨೦೦೯; "ಕೆಳವರ್ಗದ ಪ್ರತಿಭಟನೆ ಸಬಾಲ್ಟರ್ನ್ ಚರಿತ್ರೆ ಬರವಣಿಗೆ ಕ್ರಮ ಮತ್ತು ವಿಮರ್ಶೆ"; ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ; ಹಂಪಿ.

೬೭. ವಿರೂಪಾಕ್ಷಿ ಪೂಜಾರಹಳ್ಳಿ(ಸಂ); ೨೦೦೨; "ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು"; ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ; ಹಂಪಿ.

೬೮. ವೀರಣ್ಣ ದಂಡೆ ಮತ್ತು ಶ್ರೀಪಾದಶೆಟ್ಟಿ(ಸಂ); ೨೦೦೬; "ಸುವರ್ಣ ಜಾನಪದ ಲೇಖನಗಳು"; ಕನ್ನಡ ಮತ್ತು ಸಂಸ್ಕೃತಿ ಇಲಾಖೆ; ಬೆಂಗಳೂರು.

೬೯. ವೀರೇಶ ಬಡಿಗೇರ(ಸಂ); ೧೯೯೯; “ಉತ್ತರ ಕರ್ನಾಟಕದ ಜನಪದ ಗೀತಮೇಳಗಳು ಒಂದು ಸಾಂಸ್ಕೃತಿಕ ಅಧ್ಯಯನ”; ವಿಮೋಚನಾ ಪ್ರಕಾಶನ, ಬೆಳಗಾವಿ.

೭೦. ಶಂಕರನಾರಾಯಣ.ತೀ.ನಂ.(ಸಂ); ೧೯೮೫; “ದ್ರಾವಿಡ ಜಾನಪದ”; ಕನ್ನಡ ವಿಭಾಗ ಸ್ನಾತಕೋತ್ತರ ಕೇಂದ್ರ; ಬೆಂಗಳೂರು.

೭೧. ಶಂಕರನಾರಾಯಣ.ತೀ.ನಂ., ವೆಂಕಟೇಶ.ಎಂ.ಎನ್.(ಸಂ); ೨೦೦೪; “ಜನಪದ ಸಾಹಿತ್ಯ ಪ್ರಕಾರಗಳು”; ಕರ್ನಾಟಕ ಮತ್ತು ಯಕ್ಷಗಾನ ಅಕಾಡೆಮಿ; ಬೆಂಗಳೂರು.

೭೨ ಶಿವರುದ್ರಪ್ಪ.ಜಿ.ಎಸ್.(ಸಂ); ೧೯೮೧; “ಕರ್ನಾಟಕ ಜಾನಪದ”; ಪ್ರಸಾರಾಂಗ; ಬೆಂಗಳೂರು ವಿಶ್ವವಿದ್ಯಾಲಯ; ಬೆಂಗಳೂರು.

೭೩. ಶಿವಶಂಕರ್ ಚಕ್ಕೆರೆ(ಸಂ); ೨೦೦೩; “ಜನಪದ ನಾಯಕತ್ವ”; ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ; ಬೆಂಗಳೂರು.

೭೪. ಶಿವಶಂಕರ್ ಚಕ್ಕೆರೆ(ಸಂ); ೨೦೦೬; “ಕನ್ನಡ ಜನಪದ ಕಲಾ ಪ್ರದೇಶ”; ಸಾಗರ ಪ್ರಕಾಶನ; ಬೆಂಗಳೂರು.

೭೫. ಶಿವಶಂಕರ್ ಚಕ್ಕೆರೆ(ಸಂ); ೨೦೦೮; “ದಕ್ಷಿಣ ಕರ್ನಾಟಕದ ಜನಪದ ಕಲೆಗಳು”; ಕರ್ನಾಟಕ ಜಾನಪದ ಪರಿಷತ್ತು; ಬೆಂಗಳೂರು.

೭೬. ಶ್ರೀಧರ್.ಎಂ.ಎನ್.; ೨೦೧೧; “ಇಂದಿನ ಕನ್ನಡ: ರಚನೆ ಮತ್ತು ಬಳಕೆ”; ಅಭಿನವ ಪ್ರಕಾಶನ; ಬೆಂಗಳೂರು.

೭೭. ಸುಂಕಾಪುರ.ಎಂ.ಎಸ್.; ೧೯೭೬; “ಜೀವನ ಜೋಕಾಲಿ ಕೋಲುಪದ”; ಕನ್ನಡ ಅಧ್ಯಯನ ಪೀಠ; ಕರ್ನಾಟಕ ವಿಶ್ವವಿದ್ಯಾಲಯ; ಧಾರವಾಡ.

೭೮. ಸೈದಾಪೂರ.ವಾಯ್.ಎಫ್.(ಸಂ); ೨೦೦೩; “ಉತ್ತರ ಕರ್ನಾಟಕದ ಜನಪದ ವೀರಗೀತೆಗಳು”; ಸೃಜನಶೀಲ ಪ್ರಕಾಶನ; ಹಾಸನ.

೭೯. ಸೋಮನಾಥ ನುಚ್ಚಾ(ಸಂ); ೨೦೦೭; “ಕೋಲಾಟದ ಪದಗಳು”; ಕನ್ನಡ ಮತ್ತು ಸಂಸ್ಕೃತಿ ಇಲಾಖೆ; ಬೆಂಗಳೂರು.

೮೦. ಸಂಧ್ಯಾರೆಡ್ಡಿ.ಕೆ.ಆರ್.(ಸಂ); ೨೦೦೩; “ಮಹಿಳಾ ಜಾನಪದ”; ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ; ಬೆಂಗಳೂರು.

೮೧. ಹನುಮಂತರಾಯಪ್ಪ.ಕೆ.(ಸಂ); ೨೦೦೯; “ಗಡಿನಾಡ ಜಾನಪದ ಸಂಸ್ಕೃತಿ”; ಗಡಿನಾಡ ಜಾನಪದ ಸಂಪರ್ಕಾಭಿವೃದ್ಧಿ; ಸಿರಾ.

೮೨. ಹಿರೇಮಠ.ಎಸ್.ಎಸ್.(ಸಂ); ೨೦೦೦; “ಕೊಪ್ಪಳ ಜಿಲ್ಲೆಯ ಜಾತ್ರೆಗಳು”; ಕನ್ನಡ ಪುಸ್ತಕ ಪ್ರಾಧಿಕಾರ; ಬೆಂಗಳೂರು.

**ಅಪ್ರಕಟಿತ ಎಂ.ಫಿಲ್. ಪ್ರಬಂಧಗಳು**

೧. ಮಹಾದೇವಿ ಅರ್ಜುನ ವಡಗಾಂವೆ.ಕೆ.; ೨೦೦೬; “ಬೀದರ ಜಿಲ್ಲೆಯ ಜನಪದ ಆಟಗಳು”; ಸ್ನಾತಕೋತ್ತರ ಕೇಂದ್ರ; ಬೀದರ; ಕನ್ನಡ ವಿಶ್ವವಿದ್ಯಾಲಯ; ಹಂಪಿ.

**ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧಗಳು**

೧. ಆಂಜನೇಯ; ೨೦೦೬; “ಮ್ಯಾಸಬೇಡರ ಕನ್ನಡ ಸಮಾಜೋ-ಭಾಷಿಕ ಅಧ್ಯಯನ”; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಓಂಪ್ರಕಾಶನಾಯಕ.ಬಿ.; ೨೦೦೭; “ಆದೋನಿ ಕನ್ನಡ”; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಚಲುವರಾಜು; ೨೦೦೩; “ಕನ್ನಡ ಜನಪದ ಪದ್ಯ ಸಾಹಿತ್ಯದ ಸೊಲ್ಲುಗಳು”; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ನಾರಾಯಣಸ್ವಾಮಿ.ಕೆ.; ೨೦೦೭; “ಕೋಲಾರ ಜಿಲ್ಲೆಯ ದ್ವಿಭಾಷಿಕತೆಯ ನೆಲೆಗಳು”; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ಶಿವಲೀಲಾ.ಕೆ.; ೨೦೦೨; “ಕಾಮಲಾಪುರದ ಶಾಸನಗಳು ಮತ್ತು ದೇವಾಲಯಗಳು”; ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಅಪ್ರಕಟಿತ ತೆಲುಗು ಪಿಎಚ್.ಡಿ. ಮಹಾಪ್ರಬಂಧ**

೧. ಆದೆಪ್ಪ; ೧೯೯೭; “ಅನಂತಪುರಂ ಜಿಲ್ಲಾ ವಾಲ್ಮೀಕುಲ ಸಾಂಸ್ಕೃತಿಕ ಅಧ್ಯಯನಂ”; ಕೃಷ್ಣದೇವರಾಯ ವಿಶ್ವವಿದ್ಯಾಲಯ; ಅನಂತಪುರ.

**ಅನುವಾದಿತ ಕೃತಿಗಳು**

೧. ಆರ್ವಿಯಸ್ ಸುಂದರಂ(ಅನು); ೧೯೮೭; “ಆಂಧ್ರಪ್ರದೇಶದ ಜಾನಪದ(ತೆಲುಗು ಮೂಲ: ಬಿ. ರಾಮರಾಜು)”; ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ, ಹೊಸದೆಹಲಿ.

೨. ವೆಂಕಟೇಶ.ಸಿ.(ಅನು); ೧೯೯೯; “ತೆಲುಗು-ದಾಕ್ಷಿಣಾತ್ಯ ಸಾಹಿತ್ಯ”(ತೆಲುಗು ಮೂಲ: ಚಲ್ಲಾರಾಧ ಕೃಷ್ಣಶರ್ಮ); ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ.



